# ಅಧ್ಯಾತ್ಮ ರಾಮಾಯಣ



# ADHYATMA RAMAYANA

A well known story of Rama ( Ramayana ) written in Bhamini Shatpadi containing Adhyatmic topics.



Editor : Shri N. K. Hegde
B. Sc. (Hons), M A. B. Ed.

Publisher : Kannada Karavali Granth
Prakashana, Hegde
HEGDE-581330 Kumta (U. K.)






[illegible]ಯ ಮುದ್ರಣ : ೧೯೯೨

ಪ್ರತಿಗಳು : ೧೦೦೦

ಬೆಲೆ : ಮೂವತ್ತು ರೂಪಾಯಿಗಳು

ಈ ಪುಸ್ತಕವು ಶ್ರೀ ತಿರುಮಲ ತಿರುಪತಿ ದೇವಸ್ಥಾನದ ಧಾರ್ಮಿಕ ಪುಸ್ತಕಗಳ ಪ್ರಕಟನೆಯ ಧನಸಹಾಯದ ನೆರವಿನಿಂದ ಪ್ರಕಟಿಸಲ್ಪಟ್ಟಿದೆ.

ಮುದ್ರಣ : ಶ್ರೀಕೃಷ್ಣ ಮುದ್ರಣಾಲಯ, ಹೆಗಡೆ
ಅಂಚೆ :- ಹೆಗಡೆ - 581330
ತಾಲೂಕ :- ಕುಮಟಾ ( ಉತ್ತರ ಕನ್ನಡ )

ನಾನು ವಿದ್ಯೆ ಕಲಿಯಲು

ಪ್ರೇರಕರಾದ

ಹಾಗೂ

ಪ್ರೋತ್ಸಾಹ ನೀಡಿದ

ದಿ| ನಾರಾಯಣ ರಾಮಕೃಷ್ಣ ಹೆಗಡೆ

ಮತ್ತು

ರಾಮಾಯಣ, ಭಾರತ, ಭಾಗವತ

ಮೊದಲಾದವುಗಳಲ್ಲಿಯ

ಪುಣ್ಯ ಪುರುಷರ ಕಥೆಗಳನ್ನು ಹೇಳಿ

ನನ್ನಲ್ಲಿ ಧಾರ್ಮಿಕ ಭಾವನೆಗಳನ್ನು

ಬಿತ್ತಿ ಬೆಳೆಸಿದ

ಸಣ್ಣಕುಳಿ

ದಿ| ನಾರಾಯಣ ಪಟಗಾರ, ಮಾಸೂರ

**ಇವರ ನೆನಪಿಗಾಗಿ**

# ವಿಷಯಾನುಕ್ರಮಣಿಕೆ



## ೪ ಅಧ್ಯಾತ್ಮ ರಾಮಾಯಣ

### ೧ ಅರಣ್ಯ ಕಾಂಡ

ಇಪ್ಪತ್ತೈದನೆಯ ಸಂಧಿ : ೬೩

ಶೂರ್ಪನಖಿಯ ಮಾತಿಗನುಸಾರವಾಗಿ ರಾವಣನು ಮಾರೀಚನೊಂದಿಗೆ ಪಂಚವಟಿಗೆ ಬಂದದ್ದು ಮಾರ್ಗಮಧ್ಯದಲ್ಲಿ ಮಾರೀಚನು ರಾವಣನಿಗೆ ರಾಮ ಮಹಿಮೆಯನ್ನು ವಿವರಿಸಿದ್ದು ಇದಕ್ಕೆ ರಾವಣನ ನಿರ್ಲಕ್ಷ್ಯ

ಇಪ್ಪತ್ತಾರನೆಯ ಸಂಧಿ : ೭೪

ಮಾರೀಚನು ಮಾಯಾ ಜಿಂಕೆಯಾದದ್ದು ಅದಕ್ಕೆ ಸೀತೆ ಮೋಹಗೊಂಡಿದ್ದು- ರಾಮನು ನಿಜ ಸೀತೆಯನ್ನು ಅಗ್ನಿಯಲ್ಲಿ ಇರಿಸಿ ಮಾಯಾ ಸೀತೆಯೊಂದಿಗೆ ಇದ್ದುದು. ಆ ಮಾಯಾ ಸೀತೆಯನ್ನು ರಾವಣನು ಕದ್ದೊಯ್ಯುವಾಗ ಅವನನ್ನು ಜಟಾಯುವು ತಡೆದದ್ದು. ರಾವಣನು ಆತನನ್ನು ಸೋಲಿಸಿದ್ದು. ಸೀತೆಯೊಂದಿಗೆ ಲಂಕಾನಗರಿಗೆ ರಾವಣನ ಪ್ರಯಾಣ

ಇಪ್ಪತ್ತೇಳನೆಯ ಸಂಧಿ : ೮೭

ರಾಮನಿಗೆ ಸೀತಾವಿಯೋಗದ ದುಃಖ ಸೀತಾದೇವಿಯನ್ನು ಅರಸುತ್ತ ಲಕ್ಷ್ಮಣನೊಂದಿಗೆ ಅರಣ್ಯದಲ್ಲಿ ಅಲೆದಾಡಿದ್ದು ಜಟಾಯುವಿನ ಭೆಟ್ಟಿ ಆತನಿಂದ ವಿಷಯ ತಿಳಿದು ಆತನಿಗೆ ಮೋಕ್ಷ ಕರುಣಿಸಿದ್ದು.

ಇಪ್ಪತ್ತೆಂಟನೆಯ ಸಂಧಿ : ೧೦೦

ಸೀತಾನ್ವೇಷಣೆ ಕಬಂಧನ ಕೈಯಲ್ಲಿ ಸಿಲುಕಿದುದು ಆತನ ದೇಹವನ್ನು ಕಡಿದು ಬೆಂಕಿಯಲ್ಲಿ ಹಾಕಿ ಆತನಿಗೆ ಮುಕ್ತಿ ಮಾರ್ಗವನ್ನು ಕರುಣಿಸಿದುದು ಕಬಂಧನ ಪೂರ್ವ ವೃತ್ತಾಂತವನ್ನು ಕೇಳಿ ತಿಳಿದುದು.

ಇಪ್ಪತ್ತೊಂಭತ್ತನೆಯ ಸಂಧಿ : ೧೧೨

ಸೀತಾನ್ವೇಷಣೆ ಮುಂದುವರಿದುದು ಶಬರಿಯ ಸಮಾಗಮ ಶಬರಿಯ ಪ್ರೇಮಕ್ಕೆ ಮೆಚ್ಚಿ ಆಕೆಗೆ ಮುಕ್ತಿಯನ್ನು ದಯಪಾಲಿಸಿದುದು

## ಕಿಷ್ಕಿಂಧಾ ಕಾಂಡ

ಮೂವತ್ತನೆಯ ಸಂಧಿ : ೧೨೫

ಶಬರಿಯಾಶ್ರಮದಿಂದ ಪ್ರಯಾಣ ಋಷ್ಯಮೂಕ ಪರ್ವತಕ್ಕೆ ಬಂದದ್ದು. ಹನುಮಂತ ಸುಗ್ರೀವಾದಿಗಳನ್ನು ಕಂಡದ್ದು ಅವರ ಸಮಾಗಮ ಸಖ್ಯ

ಮೂವತ್ತೊಂದನೆಯ ಸಂಧಿ : ೧೪೦
ಸುಗ್ರೀವನ ವೃತ್ತಾಂತವನ್ನು ತಿಳಿದದ್ದು. ಬಾಲಿಯೊಡನೆ ಯುದ್ಧ ಆತನನ್ನು ಗೆಲಿದದ್ದು. ಬಾಲಿಗೆ ಸದ್ಗತಿ ಕರುಣಿಸಿದ್ದು

ಮೂವತ್ತೆರಡನೆಯ ಸಂಧಿ : ೧೫೩
ವಾಲಿಯ ಹೆಂಡತಿಯಾದ ತಾರೆಯ ದುಃಖ ರಾಮನು ತಾರೆಗೆ ತತ್ವಜ್ಞಾನ ಬೋಧಿಸಿದ್ದು ತಿಳುವಳಿಕೆ ನೀಡಿದ್ದು ಸುಗ್ರೀವನ ಪಟ್ಟಾಭಿಷೇಕ. ರಾಮನು ಪ್ರವರ್ಷಣ ಪರ್ವತದಲ್ಲಿ ಲಕ್ಷ್ಮಣನೊಡನೆ ವಾಸವಮಾಡಿದ್ದು.

ಮೂವತ್ಮೂರನೆಯ ಸಂಧಿ : ೧೬೫
ರಾಮ ಲಕ್ಷ್ಮಣರ ಸಂವಾದ ರಾಮನು ರಾಮಭಕ್ತಿಗೆ ಮೂಲಭೂತವಾದ ರಾಮ ಪೂಜಾಕ್ರಮವನ್ನು ಲಕ್ಷ್ಮಣನಿಗೆ ವಿವರಿಸಿದ್ದು. ಆತ್ಮಸಿದ್ಧಿಯ ರಹಸ್ಯವನ್ನು ಬೋಧಿಸಿದ್ದು.

ಮೂವತ್ನಾಲ್ಕನೆಯ ಸಂಧಿ : ೧೭೮
ರಾಮನಾಜ್ಞೆಯ ಪ್ರಕಾರ ಲಕ್ಷ್ಮಣನು ಸುಗ್ರೀವನಿರುವ ಕಿಷ್ಕಿಂಧೆಗೆ ಹೋದದ್ದು ಸುಗ್ರೀವ, ಹನುಮಂತ ಅಂಗದ ಮೊದಲಾದ ಮುಖ್ಯ ಕಪಿ ನಾಯಕರನ್ನು ತನ್ನ ಅಣ್ಣನ ಬಳಿಗೆ ಕರೆದೊಯ್ದದ್ದು

ಮೂವತ್ತೈದನೆಯ ಸಂಧಿ : ೧೯೨
ರಾಮ ಸುಗ್ರೀವರ ಸಂವಾದ ಸುಗ್ರೀವನು ವಾನರರನ್ನು ಸೀತಾನ್ವೇಷಣೆಯ ಸಲುವಾಗಿ ದಿಕ್ಕು ದಿಕ್ಕಿಗೆ ಕಳುಹಿಸಿದ್ದು. ಹನುಮ ಅಂಗದಾದಿಗಳು ಯೋಗಿನಿಯ ಬಿಲವನ್ನು ಪ್ರವೇಶಿಸಿದ್ದು. ಆಕೆ ಶ್ರೀರಾಮನಂಘ್ರಿಯನ್ನು ಕಂಡುದುದು

ಮೂವತ್ತಾರನೆಯ ಸಂಧಿ :
ಹನುಮ ಜಾಂಬವ ಅಂಗದಾದಿಗಳು ಸೀತಾನ್ವೇಷಣೆ ಮುಂದುವರಿಸಿದ್ದು ಅವರು ದಕ್ಷಿಣ ಸಮುದ್ರದ ದಂಡೆಗೆ ಬಂದು ಅಲ್ಲಿದ್ದ ಸಂಪಾತಿಯೆಂಬ ಪಕ್ಷಿರಾಜನನ್ನು ಕಂಡು ಎಲ್ಲಾ ವೃತ್ತಾಂತವನ್ನು ತಿಳಿದದ್ದು



ಹೆಗಡೆಯ ಶ್ರೀ ಶಾಂತಿಕಾಂಬೆ

# ಪ್ರಕಾಶಕರ ನುಡಿ

ಸಹೃದಯ ಓದುಗರಾದ ತಮ್ಮ ಕರಕಮಲಗಳಲ್ಲಿ ಈ "ಕನ್ನಡ ಕರಾವಳಿ ಗ್ರಂಥ ಪ್ರಕಾಶನ, ಹೆಗಡೆ" ಇದರ ಇಪ್ಪತ್ತನೆಯ ಕುಸುಮವಾದ ಅಧ್ಯಾತ್ಮ ರಾಮಾಯಣ ಭಾಗ-೨ ಎಂಬ ಉತ್ತಮೋತ್ತಮವಾದ ಅಧ್ಯಾತ್ಮ ಪ್ರಧಾನವಾದ ರಾಮಾಯಣ ಗ್ರಂಥವನ್ನು ಕೊಡಲು ತುಂಬಾ ಆನಂದವೆನಿಸುತ್ತದೆ ಸಹೃದಯ ಓದುಗರಾದ ತಾವು ಅತ್ಯಂತ ಪ್ರೀತಿಯಿಂದ ಈ ಗ್ರಂಥವನ್ನು ಓದಿ ತಮ್ಮ ಸದಭಿಪ್ರಾಯವನ್ನು ನಮಗೆ ತಿಳಿಸಬೇಕಾಗಿ ಸವಿನಯ ವಿನಂತಿ. ಇದರ ಮುಂದಿನ ಭಾಗಗಳೂ ಮುದ್ರಣಗೊಳ್ಳುವವು ಎಂದು ತಿಳಿಸಲು ಹೆಮ್ಮೆ ಎನಿಸುತ್ತದೆ.

೧೯೭೧ನೇ ಇಸ್ವಿ ಜನವರಿ ತಿಂಗಳ ಮೊದಲನೇ ವಾರದಲ್ಲಿ ಈ ಜಿಲ್ಲೆಯ ಅನೇಕ ಸ್ಥಳಗಳ ಸಾಂಸ್ಕೃತಿಕ ಪ್ರವಾಸವನ್ನು ಕೈಕೊಂಡ ಶ್ರೀ ಕವಿಭೂಷಣ ಬೆಟಗೇರಿ ಕೃಷ್ಣ ಶರ್ಮ (ಆನಂದಕಂದ) ಇವರು ಈ ಪ್ರಕಾಶನದ ಹೆಸರು ಸೂಚಿಸಿ ಇದರ ಪ್ರಾರಂಭೋತ್ಸವವನ್ನು ನೆರವೇರಿಸಿಕೊಟ್ಟು ನಮ್ಮನ್ನು ಪ್ರೋತ್ಸಾಹಿಸಿ ಹುರಿದುಂಬಿಸಿರುತ್ತಾರೆ. ಈ ಜಿಲ್ಲೆ ಉತ್ತಮವಾದ ಸಂಸ್ಕೃತಿಯ ತವರು ; ಕಲೆಗಳ ನೆಲೆವೀಡು. ಜಾನಪದ ಕಲೆಗಳಲ್ಲಂತೂ ವಿಶಿಷ್ಟಸ್ಥಾನ ಗಳಿಸಿ ಅದರ ತವರೂರು ಎನಿಸಿಕೊಂಡಿದೆ. ಯಕ್ಷಗಾನ ಕಲೆಯಲ್ಲಿ ತನ್ನ ಕೀರ್ತಿಪತಾಕೆಯನ್ನು ದಿಕ್ ದಿಗಂತಗಳಲ್ಲಿ ಹಾರಿಸಿ ಪ್ರಸಿದ್ಧಿಪಡೆದು ನಿತ್ಯನೂತನವಾಗಿ ಬೆಳಗುತ್ತಲಿದೆ.

ಈ ಜಿಲ್ಲೆಯಲ್ಲಿ ಪ್ರಾಚೀನ ಕವಿಗಳೆಷ್ಟೋ ಆಗಿ ಹೋಗಿರುತ್ತಾರೆ. ಅವರಿಂದ ರಚಿತವಾದ ಅತ್ಯಮೂಲ್ಯ ಕೃತಿಗಳೆಷ್ಟೋ ತಾಡವಾಲೆ ಕಟ್ಟುಗಳಲ್ಲಿ ಸಂಗ್ರಹವಾಗಿ ಮನೆ ಮನೆಗಳಲ್ಲಿ ಇವೆ. ಅವು ಈಗ ಯೋಗ್ಯ ಸಂರಕ್ಷಕರಿಲ್ಲದೆ ಮೂಲೆಗುಂಪಾಗಿ ಹುಳ ಹುಪ್ಪಡಿಗಳ ಪಾಲಾಗಿ, ವರಲೆಗಳ ಆಹಾರವಾಗಿ ಹಾಳಾಗಿವೆ, ಹಾಳಾಗುತ್ತಲಿವೆ. ಕೆಲವರು ಇವು ನಿಷ್ಪ್ರಯೋಜಕ ಎಂದು ಬೀಸಾಡಿರುತ್ತಾರೆ. ಗೊಬ್ಬರಗುಂಡಿಗೆ ಒಗೆದಿದ್ದಾರೆ. ಮರಗಳ ಬುಡಕ್ಕೆ ಬೀಸಾಡಿದ್ದಾರೆ. ಕೆಲವರು ಸುಟ್ಟುಹಾಕಿದ್ದಾರೆ. ಹೀಗೆ ಹಾಳಾಗುತ್ತಿರುವ

ಇಂಥ ಗ್ರಂಥಗಳನ್ನೆಲ್ಲ ಸಂಗ್ರಹಿಸಿ ಶುದ್ಧೀಕರಿಸಿ ಸಂಶೋಧಿಸಿ ಪ್ರಕಟ ಪಡಿಸುವ ಹಂಬಲವನ್ನು ಹೊತ್ತು ಈ ಕಾರ್ಯಕ್ಕೆ ಅಣಿಯಾಗಿ ಮುಂದಡಿಯಿಟ್ಟಿರುತ್ತೇನೆ.

ಈಗಾಗಲೇ ಈ ಪ್ರಕಾಶನದ ವತಿಯಿಂದ ದೇವೀ ಮಹಾತ್ಮೆ ಮೊಗ್ಗು, ಶಿವಭಟ್ಟರ ಚರಿತ್ರೆ, ದಂಡಭೈರವನ ಕಾಳಗ, ಬ್ರಹ್ಮಗೀತೆ, ವೆಂಕಟೇಶ ಚರಿತೆ, ಪ್ರಲ್ಹಾದ ಚರಿತೆ, ಮಾಲ್ಯವಂತನ ನೀತಿ, ಜ್ಞಾನ-ವಾಸಿಷ್ಠ, ಕುಶಲವರ ಕಾಳಗ, ಕೌಸಲ್ಯಾ ವಿವಾಹ, ಐರಾವಣನ ಕಾಳಗ, ಭೈರವ ಪುರಾಣ, ಆದಿಪರ್ವ, ಮೂಲಕಾಸುರನ ಕಾಳಗ, ವಿಚಾರದೀಪ, ಪರಮಾತ್ಮ ಬೋಧೆ, ಅಧ್ಯಾತ್ಮಶತಕ ಮತ್ತು ಭಕ್ತಿಸುಧಾರಸ ಹಾಗೂ ಅಧ್ಯಾತ್ಮ ರಾಮಾಯಣ ಭಾಗ-೧ ಇವು ಪ್ರಕಟವಾಗಿ ಜನಾದರಣೀಯ-ವಾಗಿವೆ ಈಗ ಅಧ್ಯಾತ್ಮ ರಾಮಾಯಣದ ಎರಡನೆಯ ಭಾಗ ತಮ್ಮ ಕೈಸೇರುತ್ತಲಿದೆ.

ಶ್ರೀ ಶೈಲಮಹಾತ್ಮೆ, ಉತ್ತರ ಕನ್ನಡ ಜಿಲ್ಲೆಯ ಗ್ರಂಥಕಾರರು ಭಾರತ ವಿಜಯ ಇವೂ ಕೂಡ ಪ್ರಕಟವಾಗಿವೆ

ಇದಲ್ಲದೇ ರಾಮಾಯಣ, ಗೋಕರ್ಣಪುರಾಣ, ಶ್ರೀಗೀತೆ ಬ್ರಹ್ಮೋತ್ತರಕಾಂಡ, ಶಂಕರ ಸಂಹಿತೆ ಇವೇ ಮೊದಲಾದವು ಮುದ್ರಣ-ವಾಗಬೇಕಿದ್ದು ಅವು ಶುದ್ಧೀಕೃತಗೊಳ್ಳುತ್ತಿವೆ. ಈ ಜಿಲ್ಲೆ ಸಾಹಿತ್ಯ ಸಂಸ್ಕೃತಿಗಳ ತವರೂರು ಎಂದು ತಿಳಿದುಬರಬೇಕಾಗಿದೆ.

ಇದಕ್ಕೆ ನಿಮ್ಮಂಥವರ ಸಹಾಯ ಸಹಕಾರ ಅತ್ಯಂತ ಅವಶ್ಯ-ವಾಗಿದೆ. ಪುಸ್ತಕದ ಮುದ್ರಣಕ್ಕೆ ಕೆಲವರು ಸಹಾಯ ಹಸ್ತ ನೀಡಿದ್ದಾರೆ. ಅವರಿಗೆ ನಾವು ಅತ್ಯಂತ ಕೃತಜ್ಞರು. ತಾವು ಇದನ್ನು ಕೊಂಡುಕೊಂಡು ಓದಿ ತಮ್ಮ ಮಿತ್ರರಿಗೂ ಕೊಂಡು ಓದಲು ಪ್ರೋತ್ಸಾಹಿಸಬೇಕೆಂದು ತಮ್ಮಲ್ಲಿ ಕಳಕಳಿಯಿಂದ ವಿನಂತಿಸಿಕೊಳ್ಳುತ್ತೇವೆ. ಹಾಗೂ ಉಳಿದ ಅಮೂಲ್ಯ ಕೃತಿಗಳ ಪ್ರಕಟನೆಗೆ ಕಾರಣೀಕರ್ತೃಗಳಾಗಬೇಕು ಎಂದು ಆಶಿಸುತ್ತೇವೆ.

— ಪ್ರಕಾಶಕರು

# ಪ್ರಸ್ತಾವನೆ

ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ ।
ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ ॥

ರಾಮಾಯಣವು ಜನಪ್ರಿಯವಾದ ಕಾವ್ಯವಾಗಿದೆ. ವಾಲ್ಮೀಕಿ ರಾಮಾಯಣವು ಅತ್ಯಂತ ಪ್ರಸಿದ್ಧವಾಗಿದೆ ಎಂಬುದು ಸರ್ವಜನ ವಿದಿತ-ವಾದದ್ದು. ಅದರಂತೆ ಸಂಸ್ಕೃತದಲ್ಲಿ ಹಲವಾರು ರಾಮಾಯಣಗಳಿವೆ. ವಾಲ್ಮೀಕಿ ರಾಮಾಯಣ, ಅಧ್ಯಾತ್ಮ ರಾಮಾಯಣ, ಆನಂದ ರಾಮಾ-ಯಣ, ತತ್ವ ಸಂಗ್ರಹ ರಾಮಾಯಣ, ಹನೂಮದ್ರಾಮಾಯಣ ಇತ್ಯಾದಿ ಇತ್ಯಾದಿ ಇವೆಲ್ಲ ಸಂಸ್ಕೃತದಲ್ಲಿರುವಂಥ ರಾಮಾಯಣ ಗ್ರಂಥಗಳು.

ಆದರೆ ಕನ್ನಡದಲ್ಲಿಯೂ ಎಷ್ಟೋ ರಾಮಾಯಣಗಳಿವೆ ವಾಲ-ಗಳ್ಳಿಯ ವರದವಿಠ್ಠಲ ರಾಮಾಯಣ, ಬತ್ತಲೇಶ್ವರ ರಾಮಾಯಣ, ಅಧ್ಯಾತ್ಮ ರಾಮಾಯಣ, ಉತ್ತರ ರಾಮಾಯಣ, ಇತ್ಯಾದಿ ಇವೆಲ್ಲ ಷಟ್ಪದಿಯಲ್ಲಿ (ಭಾಮಿನೀ ಷಟ್ಪದಿ) ರಚಿಸಿದ ಗ್ರಂಥಗಳಾಗಿವೆ. ಅತ್ಯಂತ ಸುಲಭ ಶೈಲಿಯಲ್ಲಿವೆ ಇವುಗಳಲ್ಲಿ ಅಚ್ಚಾದ ಗ್ರಂಥಗಳು ಕಡಿಮೆ. ಈಗ ಅಧ್ಯಾತ್ಮ ರಾಮಾಯಣವನ್ನು ಮುದ್ರಣಕ್ಕೆ "ಕನ್ನಡ ಕರಾವಳಿ ಗ್ರಂಥ ಪ್ರಕಾಶನ, ಹೆಗಡೆ" ಇವರು ತೆಗೆದುಕೊಂಡಿರುತ್ತಾರೆ. ಬಾಲಕಾಂಡ ಹಾಗೂ ಅಯೋಧ್ಯಾಕಾಂಡ ಇವು ಮುದ್ರಣವಾಗಿ ಮೊದಲನೆಯ ಭಾಗ-ವಾಗಿ ಹೊರಬಿದ್ದಿದೆ.

ಅರಣ್ಯಕಾಂಡ, ಕಿಷ್ಕಂಧಾಕಾಂಡ ಮತ್ತು ಸುಂದರ ಕಾಂಡ-ಗಳಿಂದ ಕೂಡಿದ ಎರಡನೇ ಭಾಗವು ಅಚ್ಚಿನ ಮನೆಯಲ್ಲಿದೆ. ಅದರ ಸಂಧಿಗಳ ಸಂಕ್ಷಿಪ್ತ ಸಾರವು ಈ ರೀತಿಯಾಗಿದೆ.

## ಅರಣ್ಯಕಾಂಡ

ಇಪ್ಪತ್ತನೆಯ ಸಂಧಿ :– ಎಲೈ ಗಿರಿಜಾತೆಯೇ ನಿನಗೆ ಇಲ್ಲಿಯ ತನಕ ರಾಮನು ಸೀತಾ ಲಕ್ಷ್ಮಣರೊಡನೆ ಅರಣ್ಯಕ್ಕೆ ಹೊರಡುವಂಥವ-ನಾದನು ಎನ್ನುವ ವಿಚಾರವನ್ನು ತಿಳಿಸುವಂಥವನಾದೆನು. ಈಗ ನಾನು

ನಿನಗೆ ಆ ಮಹಾಮಹಿಮನಾದ ಶ್ರೀರಾಮಚಂದ್ರನ ಮುಂದಿನ ಚರಿತೆಯನ್ನು ತಿಳಿಸುವಂಥವನಾಗುತ್ತೇನೆ ನೀ ಸಾವಧಾನ ಚಿತ್ತದಿಂದ ಕೇಳುವಂಥವಳಾಗು ಎನ್ನುತ್ತ ಕಥೆಯನ್ನು ಮುಂದುವರಿಸಿದನು

ಅತ್ರಿಯಾಶ್ರಮದಲ್ಲಿ ಆ ರಾತ್ರಿಯನ್ನು ಕಳೆದ ರಾಮನು ಅತ್ರಿಮಹರ್ಷಿಯನ್ನು ಕುರಿತು- ಎಲೈ ಮಹರ್ಷಿಗಳೇ ದಂಡಕಾವನದಲ್ಲಿ ಮುನಿಗಳಿಂದ ಪರಿಶೋಭಿಸಲ್ಪಡುವ ಯಾವದಾದರೂ ಒಂದು ಉತ್ತಮವಾದ ಸ್ಥಳವನ್ನು ಹೇಳಿರಿ ಅಲ್ಲಿಗೆ ನಾನು ಹೋಗುವಂಥವನಾಗುತ್ತೇನೆ ಎಂದನು. ಅದನ್ನು ಕೇಳಿದ ಆ ಮಹರ್ಷಿಯು ಇಂತೆಂದನು ರಾಮನೇ ! ಶ್ರುತಿತತಿಗಳ ಮೂಲಕ ನೀನೇ ನಮಗೆ ದಾರಿದೀಪವಾಗಿದ್ದೀ ಈ ಜಗತ್ತಿನ ಉತ್ಪತ್ತಿಗೆ ನೀನೇ ಕಾರಣಪುರುಷ, ವಿರತಿ, ಭಕ್ತಿ, ಜ್ಞಾನ ಮೊದಲಾದವುಗಳ ಕಾರಣೀಕರ್ತೃವಾದ ನಿನಗೆ ಬೇರಾರು ದಾರಿ ತೋರಿಸಬಹುದು ? ಆದರೂ ಲೋಕೋಪಕಾರಕ್ಕಾಗಿ ಕೇಳುತ್ತಿದ್ದೀ. ನಂತರ ಆ ಋಷಿಯು ತನ್ನ ಶಿಷ್ಯರ ಸಂಗಡ ಸೀತಾಲಕ್ಷ್ಮಣ ಸಮೇತನಾದ ರಾಮನನ್ನು ಮುಂದಕ್ಕೆ ಕಳುಹಿದನು ಅವರು ಅಲ್ಲಿ ಹರಿಯುತ್ತಿರುವ ನದಿಯನ್ನು ದಾಟಿ ಮುಂದಕ್ಕೆ ಹೊರಟರು ಶಿಷ್ಯರು ಮುಂದಿನ ದಾರಿಯನ್ನು ತೋರಿಸಿ ಪುನಃ ಅತ್ರಿಯಾಶ್ರಮಕ್ಕೆ ಹಿಂತಿರುಗಿದರು ಸೀತಾರಾಮ ಲಕ್ಷ್ಮಣರು ಘೋರ ಪ್ರಾಣಿಗಳಿಂದಲೂ, ಹಿಂಸ್ರ ಪಶುಗಳಿಂದಲೂ, ರಾಕ್ಷಸರಿಂದಲೂ ಕೂಡಿದ ಆ ಅಡವಿಯಲ್ಲಿ ಸಾವಕಾಶವಾಗಿ ಮುಂದುವರಿದರು. ಆಗ ರಾಮನು ಲಕ್ಷ್ಮಣನಿಗೆ ಈ ರೀತಿ ಹೇಳಿದನು. ನಾವು ಈಗ ಅತ್ಯಂತ ಜತನದಿಂದ ಧನುರ್ಧರರಾಗಿ ಮುಂದೆ ಸಾಗಬೇಕು. ಆದ ಕಾರಣ ಧನುವಿಗೆ ಹೆದೆಯೇರಿಸು ಮುಂದೆ ನಾನು ಹಿಂದೆ ನೀನು ಮಧ್ಯದಲ್ಲಿ ಸೀತೆ ಇರಲಿ. ಸುತ್ತಲೂ ದೃಷ್ಟಿ ಚಲ್ಲುತ್ತ ರಾಕ್ಷಸರ ಇರವನ್ನು ಅರಿಯುತ್ತ ಮುಂದೆ ಮುಂದೆ ಹೋಗೋಣ ಈ ದಂಡಕಾವನದಲ್ಲಿ ರಾಕ್ಷಸರಿದ್ದಾರೆ ಎಂಬುದನ್ನು ಕೇಳಿ ತಿಳಿದಿದ್ದೇನೆ. ಹೀಗೆ ಅವರು ಮುಂದುವರಿಯುತ್ತ ಒಂದು ಕೊಳದ ಹತ್ತಿರ ಬಂದರು. ಅತ್ಯಂತ ನಿರ್ಮಲವಾದ ನೀರಿರುವ ಆ ಕೊಳದಲ್ಲಿ ಕೈ ಕಾಲು ಮೋರೆ ತೊಳೆದುಕೊಂಡು ತಮ್ಮ ಶ್ರಮವನ್ನು ಪರಿಹರಿಸಿಕೊಂಡರು. ಅಲ್ಲಿರುವ ಪಣ್ಫಲ-

ಗಳನ್ನು ತಿಂದು ಹೊಟ್ಟೆಯ ಹಸಿವನ್ನು ನೀಗಿಕೊಂಡರು. ನಂತರ ಅಲ್ಲಿರುವ ಮರದ ನೆರಳಿನಲ್ಲಿ ವಿಶ್ರಮಿಸುವಂಥವರಾದರು.

ಅಷ್ಟರಲ್ಲಿ ಅಲ್ಲಿಗೆ ಒಬ್ಬ ದಾನವನು ಬಂದನು ಭೀಕರ ಶರೀರ, ಉರಿವ ದಾಡೆ ಜೋಲುವ ತೊಗಲು ಉದ್ದವಾದ ಮೈಗೂದಲು. ಮೊರದಾಕಾರದ ಕಿವಿ, ಕೊಂದು ತಂದ ಪ್ರಾಣಿಗಳನ್ನು ಹೆಗಲಲ್ಲಿ, ಬಾಯಿಯಲ್ಲಿ ತುರುಕಿಕೊಂಡ, ಗರ್ಜಿಸುತ್ತ ಬರುತ್ತಿದ್ದನು. ಬರುತ್ತಿರುವಂಥ ಭಯಂಕರಾಕಾರದ ಆ ರಾಕ್ಷಸನನ್ನು ಸೀತೆಗೆ ತೋರಿಸುತ್ತ "ಹೆದರದಿರು" ಎಂದು ಧೈರ್ಯ ಕೊಟ್ಟನು ಆ ಧನುರ್ಧಾರಿಗಳಾದ ರಾಮ ಲಕ್ಷ್ಮಣರನ್ನು ಕಂಡು ಅಟ್ಟಹಾಸದಿಂದ-ನೀವು ಯಾರು ? ಧನುರ್ಧಾರಿಗಳಾಗಿ ಋಷಿ ವೇಷದಲ್ಲಿ ಈ ಘೋರವನಕ್ಕೆ ಏಕೆ ಬಂದಿರುವಿರಿ ? ಸಂಗಡ ಇರುವ ಈ ಸ್ತ್ರೀ ಯಾರು ? ರಕ್ಕಸನ ಈ ಮಾತುಗಳನ್ನು ಕೇಳಿದ ಶ್ರೀರಾಮನು ಪ್ರತ್ಯುತ್ತರವನ್ನಿತ್ತನು. ನಾನು ರಾಮ ಈತ ಲಕ್ಷ್ಮಣ ನನ್ನ ತಮ್ಮ. ಈಕೆ ನನ್ನ ಸತಿ ಜಾನಕಿ ತಂದೆಯ ಆಜ್ಞೆಯ ಪ್ರಕಾರ ನಿಮ್ಮಂಥವರನ್ನು ಕೊಲ್ಲಲು ಈ ವನಕ್ಕೆ ಬರುವಂಥವರಾಗಿದ್ದೇವೆ. ರಾಮನ ಈ ಮಾತನ್ನು ಕೇಳಿ ಕೋಪಾವಿಷ್ಟನಾದ ರಾಕ್ಷಸನು ಭುಜವನ್ನು ಆಸ್ಫೋಟಿಸುತ್ತ ಒಂದು ಮರವನ್ನು ಕಿತ್ತು ಹೊಡೆಯಲು ಅನುವಾಗುತ್ತ ನಾನು ವಿರಾಧನೆಂಬ ರಾಕ್ಷಸ. ನಿಮಗೆ ಈಗ ನಾನು ಕಾಲಮೃತ್ಯುವಾಗಿದ್ದೇನೆ. ನನ್ನ ಹೆಸರು ಕೇಳಿಯೇ ಎಲ್ಲ ಮುನಿಗಳು ಈ ವನವನ್ನು ಬಿಟ್ಟು ಓಡಿಹೋಗಿದ್ದಾರೆ. ನೀವೂ ಕೂಡ ಈ ಸೀತೆಯನ್ನು ಬಿಟ್ಟು, ಧನುವನ್ನು ಬಿಸುಟು ಓಡಿ ಹೋಗಿರಿ. ಇಲ್ಲದಿದ್ದರೆ ನಿಮ್ಮೆಲ್ಲರನ್ನೂ ನುಂಗುವೆ ಎನ್ನುತ್ತ ಮುಂದರಿದು ಬಂದನು. ಮುಂಬರಿದು ಬರುತ್ತಾ ಇರುವ ರಾಕ್ಷಸನನ್ನು ನೋಡಿ ರಾಮನು ಬಾಣವೊಂದರಿಂದ ಆತನ ಕಾಲುಗಳನ್ನು ಕಡಿಯಲು ಆತ ಧೊಪ್ಪನೆ ನೆಲಕ್ಕೆ ಬಿದ್ದನು. ಆದರೂ ಆತನು ಬಾಯ್ದೆರೆದು ನುಂಗಲು ಮುನ್ನುಗ್ಗುತ್ತಿರಲು ರಾಮನು ತನ್ನ ಅರ್ಧ ಚಂದ್ರಾಕಾರದ ಬಾಣದಿಂದ ಆತನ ಶಿರಸ್ಸನ್ನು ಕಡಿದು ಕೆಡಹಿದನು. ಕೂಡಲೇ ಗಂಧರ್ವರು ಹೂಮಳೆಗರೆದರು. ಅಪ್ಸರೆಯರು ನರ್ತನ ಮಾಡುತ್ತ ಹಾಡಿದರು.

, ಎಲೈ ಗಿರಿಜೆಯೇ ಮುಂದಿನ ಸಂಗತಿಯನ್ನು ಕೇಳು, ಬಿದ್ದ ಆ ವಿರಾಧನ ಶರೀರದಿಂದ ದಿವ್ಯವಾದ ಶರೀರವೊಂದು ಹೊರ ಬಂದಿತು. ಅದು ಆ ರಘುರಾಮನ ಚರಣಕ್ಕೆ ನಮಸ್ಕರಿಸಿ, ರಾಮನನ್ನು ನಾನಾ ಪ್ರಕಾರ-ವಾಗಿ ಸ್ತುತಿಸಿತು-ಮುನ್ನ ನಾನು ಒಬ್ಬ ವಿದ್ಯಾಧರನು. ದೂರ್ವಾಸ-ಋಷಿಯ ಕೋಪಕ್ಕೆ ಒಳಗಾಗಿ ಶಾಪವಶದಿಂದ ರಾಕ್ಷಸನಾಗಿದ್ದೆ. ಇಂದು ನೀನು ಶಾಪವನ್ನು ದೂರಮಾಡಿದೆ ಯಾವಾಗಲೂ ನಿನ್ನ ಪಾದಸ್ಮರಣೆ-ಯನ್ನು ಮಾಡುವ ವರವನ್ನು ನನಗೆ ಕರುಣಿಸು ನನ್ನ ಕಿವಿಯು ನಿನ್ನ ಕೀರ್ತಿಯುತ ಚರಿತ್ರೆಯನ್ನು ಕೇಳಲಿ ಬೇರಾವ ವಾರ್ತೆಯನ್ನೂ ಕೇಳ-ದಿರಲಿ. ಯಾವಾಗಲೂ ನಿನ್ನ ಪೂಜೆ, ಧ್ಯಾನದಲ್ಲಿ ನನ್ನ ಮನ ಹೃದಯ-ದಲ್ಲಿ ಸದಕಾಲ ನೆಲಸಲಿ. ಅಂಥಾ ಬುದ್ಧಿಯನ್ನು ನನಗೆ ಕರುಣಿಸು ಎಂದು ಬೇಡಿಕೊಳ್ಳುತ್ತ ರಾಮನನ್ನು ಜಪಿಸುತ್ತ ಆತನಿಗೆ ಪುನಃ ಪುನಃ ನಮಸ್ಕ-ರಿಸಿದ ನಾನು ಇನ್ನು ದೇವಲೋಕಕ್ಕೆ ಹೋಗುತ್ತೇನೆ. ನನಗೆ ಅನುಜ್ಞೆ-ಯನ್ನು ನೀಡು ಮುಂದೆಂದೂ ನಿನ್ನ ಮಾಯೆಯಿಂದ ಮೋಹಿತನಾಗ-ದಂಥ ವರವನ್ನು ನೀಡು ಎಂದೂ ಬೇಡಿಕೊಂಡನು. ರಾಮನು ಆತನಿಗೆ ಮುಕ್ತಿವರವನ್ನು ನೀಡಿದನು. ಯಾವಾಗಲೂ ನನ್ನ ನೆನೆವ ಮನ ನಿನಗಿರಲಿ ನಂತರ ನಿನಗೆ ಮೋಕ್ಷ ದೊರಕುವದು. ಎಂದು ವರವನ್ನು ಕರುಣಿಸಿದನು. ಈ ಪ್ರಕಾರವಾಗಿ ವಿರಾಧನು ಘೋರ ಶಾಪವನ್ನು ರಾಮನ ಕರುಣೆಯಿಂದ ಗೆಲಿದನು. ಎಲೈ ಗಿರಿರಾಜ ಪುತ್ರಿಯೇ ಯಾರಾದರೂ ರಾಮನನ್ನು ಸ್ಮರಿ-ಸಿದರೆ ತಮ್ಮ ಇಷ್ಟಾರ್ಥವನ್ನು ಪಡೆಯುವರು ಎಂದು ಶಿವನು ಗಿರಿಜೆಗೆ ಹೇಳಿದನೆಂಬಲ್ಲಿಗೆ ಸಂಧಿ ಮುಕ್ತಾಯವಾಯಿತು

ಇಪ್ಪತ್ತೊಂದನೆಯ ಸಂಧಿ :- ಎಲೈ ಪಾರ್ವತಿಯೇ ಮುಂದಿನ ಸಂಗತಿಯನ್ನು ಕೇಳುವಂಥವಳಾಗು ವಿರಾಧನಿಗೆ ಮುಕುತಿಯನ್ನು ಕರು-ಣಿಸಿದ ಶ್ರೀರಾಮಚಂದ್ರನು ಮುಂದುವರಿದು ಸೀತಾ ಲಕ್ಷ್ಮಣರ ಸಹಿತ-ವಾಗಿ ಶರಭಂಗ ಋಷಿಯ ಆಶ್ರಮಕ್ಕೆ ಬರುವಂಥವನಾದನು. ದೂರ-ದಿಂದಲೇ ಬರುತ್ತಿರುವ ಅವರನ್ನು ಕಂಡು ಶರಭಂಗ ಋಷಿಯು ಎದ್ದು ಅವರನ್ನು ಸ್ವಾಗತಿಸಿದನು. ಅರ್ಘ್ಯಪಾದ್ಯೋಪಚಾರಗಳಿಂದ ಅವರನ್ನು ಸತ್ಕರಿಸಿದನು. ನಾವು ನಿಮ್ಮ ದರುಶನದ ಆಶೆಯಿಂದಲೇ ಇಲ್ಲಿಯ ತನಕ

ಜೀವವಿಟ್ಟುಕೊಂಡಿರುತ್ತೇವೆ. ಈ ಹೊತ್ತು ನೀನು ನನಗೆ ದರುಶನವಿತ್ತೆ. ಇದು ನನ್ನ ಸುಪುಣ್ಯ, ನನ್ನ ಸೌಭಾಗ್ಯ ನಿಮಗೆ ನಮಿಸಿ ಚಿತಾಗ್ನಿಯಲ್ಲಿ ಬಿದ್ದು ಪ್ರಾಣಬಿಟ್ಟು ಸ್ವರ್ಗಕ್ಕೆ ಹೋಗಬಯಸುತ್ತೇನೆ ಎಂದು ಹೇಳಿ ರಾಮನೆದುರಿಗೇ ಚಿತಾಗ್ನಿಯನ್ನು ಹೊತ್ತಿಸಿ ಅದರಲ್ಲಿ ಬಿದ್ದು ಈ ಪಂಚಭೂತಾತ್ಮಕವಾದ ದೇಹವನ್ನು ಬಿಟ್ಟನು. ದೇಹ ಬಿಡುವ ಮೊದಲು ನೀನೇ ವಿಷ್ಣು; ಜಾನಕಿಯೇ ಶ್ರೀದೇವಿ; ಶೇಷನೇ ಲಕ್ಷ್ಮಣ; ಭರತನೇ ಶಂಖ; ಶತ್ರುಘ್ನನೇ ಚಕ್ರ ಆಗಿದ್ದೀರಿ. ನೀವು ದಾನವರನ್ನು ಸವರಲೋಸುಗ ಈ ಭೂಲೋಕಕ್ಕೆ ಬಂದಿದ್ದೀರಿ. ಈಗ ನಮ್ಮಾಶ್ರಮಕ್ಕೆ ಬಂದಿದ್ದೀರಿ ಇಲ್ಲೇ ಕೆಲವುದಿನ ಉಳಿದು ಲೋಕಕಂಟಕರಾದ ರಾಕ್ಷಸರ ಸಂಹಾರ ಮಾಡಿ ಜನರ ಕಷ್ಟಗಳನ್ನು ದೂರಮಾಡಿರಿ ಎಂದು ಹೇಳಿದನು. ನಂತರ ರಾಮನು ಅಲ್ಲಿಂದ ಮುಂದೆ ಋಷಿಗಳ ಆಶ್ರಮಗಳನ್ನು ನೋಡುತ್ತ ಸುತೀಕ್ಷ್ಣ ಋಷಿಗಳ ಆಶ್ರಮಕ್ಕೆ ಬಂದನು. ಅಲ್ಲಿಯ ಋಷಿಗಳೆಲ್ಲ ರಾಮನನ್ನು ಕಂಡು ಆದರದಿಂದ ಸ್ವಾಗತಿಸಿ ಸಕಲ ಅರ್ಘ್ಯ ಪಾದ್ಯೋಪಚಾರಗಳನ್ನು ನೆರವೇರಿಸಿ ಧನ್ಯರಾದರು. ಸುತೀಕ್ಷ್ಣ ಮುನಿಯು ಹೇಳಿದ್ದೇನೆಂದರೆ - ನಿನ್ನ ಮಾಯೆಯಿಂದಲೇ ನಾವು ಪುತ್ರ, ಮಿತ್ರ, ಕಳತ್ರ, ಗೃಹ ಧನ ಮೊದಲಾದ ಮೋಹಗಳಿಂದ ಈ ಭವಪಾಶದಲ್ಲಿ ತೊಳಲುತ್ತಿದ್ದೇವೆ. ನೀನು ಸರ್ವರ ಹೃದಯಾಂತರಾಳದಲ್ಲಿ ನೆಲಸಿದ್ದೀ ಆವರವರ ಸೇವೆಗೆ ಅನುಗುಣವಾಗಿ ನೀನು ಅವರವರ ಇಷ್ಟಾರ್ಥಗಳನ್ನು ಪೂರೈಸುವವನಾಗಿದ್ದೀ. ಲೋಕದ ಸೃಷ್ಟಿ, ಸ್ಥಿತಿ, ಲಯಗಳಿಗೆ ನೀನೇ ಕಾರಣನು. ನೀನೇ ಮಾಯೆಯ ರೂಪದಿಂದ ಬ್ರಹ್ಮ ಹರಿ ಮಹೇಶ್ವರನಾಗಿ ತೋರುವೆ. ಸೂರ್ಯನು ಬೇರೆ ಬೇರೆ ಪಾತ್ರಗಳ ಜಲದಲ್ಲಿ ಭಿನ್ನ ಭಿನ್ನನಾಗಿ ಕಾಣುವಂತೆ ತೋರುವೆ. ಇಂದು ನನ್ನ ತಪದ ಫಲವು ದೊರಕಿತು. ನನಗೆ ನೀನು ಕಾಣಿಸಿಕೊಂಡೆ ಎನ್ನುತ್ತ ಹಲವು ಬಗೆಯಲ್ಲಿ ರಾಮನ ಗುಣಗಾನ ಮಾಡಿದನು. ಹೀಗೆ ಗುಣಗಾನ ಮಾಡುತ್ತಿರುವ ಋಷಿಯನ್ನು ಕುರಿತು ರಾಮನೆಂದನು - ಎಲೈ ಮುನಿವರ್ಯನೇ ನಿನ್ನ ಅಂತರಂಗದ ಬಯಕೆಯನ್ನು ನಾನು ಬಲ್ಲೆ. ನನ್ನನ್ನೇ ಜಪಿಸುವ ಪುಣ್ಯವಂತರಿಗೆ ನಾನು ದೂರನಲ್ಲ, ನಿನ್ನ ಭಕ್ತಿಯಿಂದ ನೀನು ಶುದ್ಧನಾದೆ ಮಾನನಿಧಿಯಾದ ನೀನು ನಿನ್ನ

ದೇಹಾಂತ್ಯದಲ್ಲಿ ಮುಕ್ತಿಯನ್ನು ಪಡೆಯುವೆ. ನನ್ನ ಸಾಯುಜ್ಯವನ್ನೇ ಹೊಂದುವೆ ಎಲೈ ಮುನಿಯೇ ನನಗೆ ಅಗಸ್ತ್ಯ ಋಷಿಯ ಆಶ್ರಮವನ್ನು ತೋರಿಸು. ನನಗೆ ಅಲ್ಲಿಗೆ ಹೋಗಬೇಕೆಂಬ ಬಯಕೆಯಾಗಿದೆ

ಆಗ ಮುನಿಯು ಎಂದನು – ನಾವು ನಾಳೆ ಹೋಗೋಣ ನನಗೂ ಆ ಮುನಿಯನ್ನು ಕಾಣದೆ ಬಹಳ ದಿನಗಳಾದವು ಹೀಗೆ ಮಾತಾಡುತ್ತಿರಲು ಸಾಯಂಕಾಲವಾಯಿತು, ಕತ್ತಲಾಯಿತು. ರಾತ್ರಿ ರಾಮನು ಅಲ್ಲಿಯೇ ತಂಗಿದನು. ಮರುದಿನ ಬೆಳಗಾಯಿತು ರಾಮನೆದ್ದು ತನ್ನ ಪೂರ್ವಾಹ್ನಿಕವನ್ನೆಲ್ಲ ತೀರಿಸಿ ಹೊರಡಲು ತಯಾರಾದನು. ರಾಮನು ಮುನಿಸಹಿತ ಅಗಸ್ತ್ಯಾಶ್ರಮಕ್ಕೆ ಹೊರಟನು. ಅಗಸ್ತ್ಯನ ಅನುಜನು ಮುನಿಗಣ ಸಹಿತ ತನ್ನ ಆಶ್ರಮಕ್ಕೆ ಬಂದ ರಾಮನನ್ನು ಕಂಡು ಸಂತೋಷದಿಂದ ಆತನನ್ನು ಸ್ವಾಗತಿಸಿ ಅರ್ಘ್ಯ ಪಾದ್ಯಾದಗಳಿಂದ ಪೂಜಿಸಿದನು. ಆ ದಿನ ಅಲ್ಲಿದ್ದು ಮರುದಿನ ಅಗಸ್ತ್ಯ ಋಷಿಯ ಆಶ್ರಮಕ್ಕೆ ಹೊರಟನು. ಅಗಸ್ತ್ಯನ ತಪೋವನವನ್ನು ಕಂಡರು ಆ ವನವು ಅತ್ಯಂತ ಮನೋಹರವಾಗಿತ್ತು. ಕಾಲಭೇದವಿಲ್ಲದೇ ಎಲ್ಲ ಗಿಡ ಮರಗಳೂ ಫಲಪುಷ್ಪಭರಿತವಾಗಿದ್ದವು. ನಾನಾ ತರದ ಮೃಗ ಪಕ್ಷಿ ಸಂಕುಲವು ಸ್ವಭಾವಜನ್ಯವಾದ ವೈರಭಾವವನ್ನು ಮರೆತು ಪ್ರೀತಿಯಿಂದ ಇದ್ದವು ಎಲ್ಲೆಲ್ಲಿಯೂ ಸ್ವಾಧ್ಯಾಯ ನಿರತರಾದ ಋಷಿಮುನಿಗಳ ವೇದಘೋಷವು ಕೇಳಿ ಬರುತ್ತಿತ್ತು. ಯಜ್ಞ ಯಾಗಾದಿಗಳು ನಡೆಯುತ್ತಿದ್ದವು. ಹೆಚ್ಚೇನು ? ಆ ತಪೋವನವು ಬ್ರಹ್ಮ ಸಭೆಯಂತೆ ಕಂಗೊಳಿಸುತ್ತಿತ್ತು. ಆಶ್ರಮದ ಸಮೀಪಕ್ಕೆ ಬಂದ ರಾಮನು ಸುತೀಕ್ಷ್ಣ ಮುನಿಯನ್ನು ಕರೆದು ರಾಮ ಬಂದ ಸಂಗತಿಯನ್ನು ಅಗಸ್ತ್ಯ ಮಹರ್ಷಿಗೆ ಹೇಗಿ ತಿಳಿಸು ಎಂದನು. ಆತ ಕೂಡಲೇ ಅಗಸ್ತ್ಯ ಋಷಿಯ ಬಳಿಗೆ ಹೋಗಿ ದಂಡಪ್ರಣಾಮ ಮಾಡಿ ದಶರಥಾತ್ಮಜನಾದ ರಾಮಚಂದ್ರ ಬಂದಿರುವ ಸಂಗತಿಯನ್ನು ಅರುಹಿ ಅವರು ನಿನ್ನ ದರ್ಶನಾರ್ಥಿಗಳಾಗಿದ್ದಾರೆ ಎಂದನು ಆ ಸಂಗತಿಯನ್ನು ತಿಳಿದ ಅಗಸ್ತ್ಯನು ಲೇಸಾಯ್ತು ! ಲೇಸಾಯ್ತು !! ನನ್ನ ಜನ್ಮ ಸಫಲವಾಯ್ತು ಎನ್ನುತ್ತ ಅತ್ಯಂತ ಸಂಭ್ರಮದಿಂದ ರಾಘವನನ್ನು ಇದಿರುಗೊಳ್ಳಲು ಹೊರಟನು. ನನ್ನ ಹೃದಯ–

ದಲ್ಲಿ ಧ್ಯಾನಿಸುತ್ತಿದ್ದ ರಾಮನು ಇಂದು ಬಂದ ! ಎಂದು ಸಂಭ್ರಮದಿಂದ ಆತನನ್ನು ಇದಿರುಗೊಂಡನು. ಮುನಿಗೆ ದಂಡ ಪ್ರಣಾಮ ಮಾಡಿದ ರಾಮನನ್ನು ಆತನು ಹಿಡಿದೆತ್ತಿ ಆಲಂಗಿಸಿದನು. ಮತ್ತು ರಾಮನ ಅಂಗಾಂಗಗಳನ್ನು ನಾನಾಪ್ರಕಾರದಿಂದ ಸ್ತುತಿಸಿದನು. ರಾಮನನ್ನು ಉನ್ನತಾಸನದ ಮೇಲೆ ಕುಳ್ಳಿರಿಸಿ ಪೂಜಿಸಿದನು ಹೀಗೆ ರಾಮನು ಅಗಸ್ತ್ಯ ಋಷಿಯ ಆಶ್ರಮದಲ್ಲಿದ್ದನು ಎಂಬಲ್ಲಿಗೆ ಸಂಧಿ ಮುಗಿಯಿತು.

**ಇಪ್ಪತ್ತೆರಡನೆಯ ಸಂಧಿ :–** ಎಲೈ ಗಿರಿಜೆಯೇ ಮುಂದಿನ ಸಂಗತಿಯನ್ನು ಕೇಳುವಂಥವಳಾಗು.

ರಾಮ ಅಗಸ್ತ್ಯ ಋಷಿಯ ಆಶ್ರಮದಲ್ಲಿ ಸುಖದಲ್ಲಿ ಇರುವಾಗ ಅಗಸ್ತ್ಯನು ಆ ಶ್ರೀರಾಮನಲ್ಲಿಗೆ ಬಂದು ನಮಸ್ಕಾರ ಮಾಡುತ್ತಾ ಇಂತೆಂದನು.

ರಾವಣನನ್ನು ಕೊಂದು ಭೂಮಿಯ ಭಾರವನ್ನು ಕಡಿಮೆ ಮಾಡಲೋಸುಗ-ಬ್ರಹ್ಮನು ಕೇಳಿಕೊಂಡ ಪ್ರಕಾರ ನೀನು ಬಂದಿದ್ದೀ. ಅಂದಿನಿಂದ ನಿನ್ನ ಬರುವಿಕೆಯ ನಿರೀಕ್ಷಣೆಯಲ್ಲಿಯೇ ಇದ್ದೇವೆ. ನೀನು ಯಾವಾಗ ಬರುವಿ. ಭಕ್ತರ ಅಭೀಷ್ಟಗಳನ್ನು ಯಾವಾಗ ಸಲ್ಲಿಸುವಿ ಎಂಬ ವಿಚಾರದಿಂದಲೇ ನಿನ್ನ ನಾಮವನ್ನು ಜಪಿಸುತ್ತ ಕಾಲ ಕಳೆಯುತ್ತಿದ್ದೆವು. ನೀನು ಅದ್ವೈತ ಸ್ವರೂಪನಾಗಿದ್ದೀ, ನಿರ್ವಿಕಾರನೂ ನಿರ್ಗುಣನೂ ಆಗಿದ್ದೀ, ನಿನ್ನನ್ನು ನಿರ್ಗುಣ ಶಕ್ತಿಯೆಂತಲೂ. ಮೂಲ ಪ್ರಕೃತಿಯೆಂತಲೂ ಕರೆಯುವರು. ನೀನು ಪ್ರಕೃತಿಯೊಡಗೂಡಿದಾಗಲೇ ಸತ್ವರಜತಮ ಎಂಬ ಅಹಂಕಾರ ತ್ರಯಗಳು ಹುಟ್ಟಿದವು. ಇವುಗಳಿಂದಲೇ ಪಂಚಮಹಾಭೂತಗಳು ಜನಿಸಿದವು. ಶಬ್ದ, ಸ್ಪರ್ಶ, ರೂಪ ರಸ, ಗಂಧ ಮೊದಲಾದವುಗಳ ಜನನವಾಯಿತು. ಹೀಗೆ ಸತ್ವ ರಾಜಸ ತಾಮಸ ಇವುಗಳಿಂದ ಪ್ರಪಂಚದ ನಾನಾ ಬಗೆಗಳು, ಷಡ್ವೈರಿಗಳು, ದಿಕ್ಕುಗಳು, ದೇವತೆಗಳು, ಹೀಗೆ ಪ್ರಪಂಚದ ಉದ್ಭವವಾಯಿತು. ಪ್ರಪಂಚವು ವಿರಾಟ ಸ್ವರೂಪವನ್ನು ಪಡೆಯಿತು. ಈ ವಿರಾಟ್ ಸ್ವರೂಪದಿಂದಲೇ ಪಶು, ಪಕ್ಷಿ, ಪ್ರಾಣಿ ಮೊದಲಾದ ತಿರ್ಯಗ್ ಜಂತುಗಳ ಮರ್ತ್ಯರ ಜನನವೂ ಆಯಿತು. ಕರ್ಮಾನುಸಾರಿಯಾದ ಜೀವಿಯ

ಉತ್ಪತ್ತಿಯೂ ಆಯಿತು. ಮನು ಜನೇಇವೆಲ್ಲಕ್ಕೂ ಮೂಲ ಕಾರಣ ಎಂದು ತಿಳಿಯುವಂತಾಯಿತು. ಬ್ರಹ್ಮನಾಗಿ ಸೃಷ್ಟಿಯು ಉತ್ಪತ್ತಿಯನ್ನೂ, ವಿಷ್ಣು-ವಾಗಿ ಸೃಷ್ಟಿಯು ಪಾಲನೆಯನ್ನು ಮಾಡುತ್ತಿರುವೆ. ನಂತರ ರುದ್ರ ಸ್ವರೂಪಿ-ಯಾಗಿ ಜಗತ್ತನ್ನು ಲಯಗೊಳಿಸುವೆ. ಹೀಗೆ ಮಾಯಾಗುಣ ಭೇದದಿಂದ ಜಗತ್ರಯವನ್ನು ನಡೆಸುತ್ತಿರುವಿ. ಇಲ್ಲಿ ನಡೆಯುವ ಪ್ರತಿಯೊಂದು ಕ್ರಿಯೆಗೂ ನೀನೇ ಸಾಕ್ಷೀಭೂತನಾಗಿರುವಿ. ಹೆಣ್ಣು, ಹೊನ್ನು, ಮಣ್ಣು ಈ ರೀತಿ-ಯಾದ ಸ್ವರೂಪದಿಂದ ಮನುಜನನ್ನು ಸಂಸಾರ ಸಾಗರದಲ್ಲಿ ತೊಳಲಾಡು-ವಂತೆ ಮಾಡಿರುವೆ. ಮಾಯೆಗೊಳಗಾದ ಪ್ರತಿಯೊಬ್ಬರೂ ಪ್ರತಿಯೊಂದೂ ತನ್ನದೆಂದು ಭ್ರಮಿಸಿ ತೊಳಲಾಡುತ್ತಿರುವರು ಕೆಲವರು ಸತ್ವಗುಣದಿಂದ ಕೂಡಿದವರಾಗಿ ಉತ್ತಮದ ದಯ ಧರ್ಮದಿಂದ ತತ್ವಜ್ಞಾನವನ್ನು ಪಡೆ-ಯಲು ಇಚ್ಛಿಸಿದ್ದಾರೆ. ಅದ್ವಯಿತ ಸ್ವರೂಪದಿಂದಲೇ ನಿನ್ನನ್ನು ಪಡೆಯಲು ಕೆಲವರು ಪ್ರಯತ್ನಿಸುತ್ತಿರುತ್ತಾರೆ. ತತ್ವಜ್ಞಾನಿಗಳು ಯಾವಾಗಲೂ ಪರ-ಮಾನಂದ ಪದವಿಯನ್ನು ಪಡೆಯುತ್ತಿರುತ್ತಾರೆ. ಉಳಿದವರು ವಿಷಯಾಸಕ್ತ ರಾಗಿ ನರಕಭಾಜನರಾಗಿರುತ್ತಾರೆ. ಲೋಕದಲ್ಲಿ ನಿನ್ನ ಚರಣವನ್ನೇ ಭಜಿ-ಸುತ್ತಿರುವವರು ಅಮೃತವನ್ನು ಸೇವಿಸಿದವರಂತೆ ನಿತ್ಯ ಮುಕ್ತರಾಗಿರುತ್ತಾರೆ. ಏನೇ ಆಗಲಿ ! ಏನೇ ಹೋಗಲಿ !! ಅದೊಂದನ್ನೂ ಮನಸ್ಸಿಗೆ ತಾರದೇ ನಿನ್ನ ಧ್ಯಾನದಲ್ಲಿರುವವರು ನಿತ್ಯ ತೃಪ್ತರು; ನಿತ್ಯ ಮುಕ್ತರು ನಿನ್ನ ಭಕ್ತ-ರಾದವರು ದೊರಕಿದಷ್ಟರಿಂದಲೇ ತೃಪ್ತರು. ನಿನ್ನ ಭಕ್ತರ ಸಂಗವೇ ಸದ್ಭಕ್ತಿಗೆ ಕಾರಣ. ಎಲೈ ರಾಘವನೇ ಇಂದು ನಿನ್ನ ಸಂಗದಿಂದ ನನಗೆ ಸಕಲ ಜನ್ಮ ಸಾರ್ಥಕವಾಯಿತು. ಯಾವಾಗಲೂ ನಿನ್ನ ಮೂರ್ತಿಯೇ ನನ್ನ ಹೃದಯಕಮಲದಲ್ಲಿ ವಾಸಿಸಲಿ ಎಂದು ನಾನಾಪ್ರಕಾರವಾಗಿ ಅಗಸ್ತ್ಯನು ರಾಮನ ಗುಣಗಾನ ಮಾಡಿದನು. ನಂತರ ತನ್ನಲ್ಲಿಗುವ ದಿವ್ಯವಾದ ಅಕ್ಷ-ಯಾಸ್ತ್ರವನ್ನೂ ಖಡ್ಗವನ್ನೂ ಶ್ರೀರಾಮನಿಗೆ ಕೊಟ್ಟನು.

ಇಲ್ಲಿಂದ ಎರಡು ಯೋಜನ ದೂರದಲ್ಲಿ ಪಂಚವಟಿಯೆಂಬ ಉತ್ತಮೋತ್ತಮವಾದ ಸ್ಥಳವಿದೆ ಅಲ್ಲಿ ನೀನಿರಬೇಕು. ಅಲ್ಲಿಯೇ ನಿನ್ನಿಂದ ಬಹಳ ಕಾರ್ಯಗಳಾಗಬೇಕಾಗಿದೆ. ಎಂದು ಹೇಳಿ ಆತನನ್ನು ಪಂಚವಟಿ ಕಡೆಗೆ ಕಳುಹಿಸಿಕೊಟ್ಟನು. ಎಂಬಲ್ಲಿಗೆ ಇಪ್ಪತ್ತೆರಡನೆಯ ಸಂಧಿ ಮುಗಿಯಿತು.

ಇಪ್ಪತ್ತೊಂದನೆಯ ಸಂಧಿ - ಎಲೈ ಗಿರಿಜಾತೆಯೇ ಮುಂದಿನ ಕಥೆಯನ್ನು ಕೇಳು.

ಅಗಸ್ತ್ಯ ಋಷಿಯ ಅಪ್ಪಣೆಯ ಪ್ರಕಾರ ಪಂಚವಟಿಗೆ ಶ್ರೀರಾಮ ಸೀತಾ ಲಕ್ಷ್ಮಣರು ಬರುತ್ತಿರುವಾಗ ಮಾರ್ಗಮಧ್ಯದಲ್ಲಿ ಜಟಾಯುವೆಂಬ ಮುದುಕ ಪಕ್ಷಿಯೊಂದನ್ನು ಕಂಡರು. ಅದನ್ನು ಕಂಡು ಶ್ರೀರಾಮನು ಇದು ರಾಕ್ಷಸರ ಮಾಯೆಯೇ ಎಂದು ಊಹಿಸಿ ಧನು ಶರದಿಂದ ಸುಸಜ್ಜಿತನಾದನು ಇವನೇ ಋಷಿಗಳ ಭಕ್ಷಕ. ಈತನನ್ನು ಶಿಕ್ಷಿಸಲೇಬೇಕು ಎಂದು ನುಡಿದ ರಾಮನ ಮಾತನ್ನು ಕೇಳಿ ಆತ ಗಡ ಗಡ ನಡುಗುತ್ತ "ನಾನು ಅಪರಾಧಿ ಅಲ್ಲ. ನಿನ್ನ ತಂದೆಯ ಗೆಳೆಯ ನಾನಾಗಿದ್ದೇನೆ. ನಾನು ಹದ್ದು, ಜಟಾಯು ಎಂದು ನನ್ನ ಹೆಸರು. ನಿನಗೆ ಹಿತವನ್ನೇ ಬಯಸು-ವನು ನಾನು " ಎಂದನು ನೀನು ಬೇಟೆಗೆ ಹೋದ ಸಂದರ್ಭದಲ್ಲಿ ಸೀತೆಯ ರಕ್ಷಣೆಗೆ ನಾನು ನಿಲ್ಲುತ್ತೇನೆ. ಅವನ ಮಾತನ್ನು ಕೇಳಿದ ರಾಮನು ತನ್ನ ಪಿತನ ಗೆಳೆಯನಾದ ಆ ಜಟಾಯುವನ್ನು ಆಲಂಗಿಸಿಕೊಂಡನು. ಅವನಿಗೆ ಧೈರ್ಯ ಕೊಟ್ಟನು ಮುಂದೆ ಪಂಚವಟಿಗೆ ನಡೆದನು ಹೀಗೆ ಹೋಗುತ್ತ ಹೋಗುತ್ತ ಗೌತಮಿ ನದೀ ತೀರದಲ್ಲಿರುವ ಪಂಚವಟಿಯನ್ನು ಕಂಡರು. ಅದು ಅತ್ಯಂತ ಸುಂದರವಾದ ಸ್ಥಳವಾಗಿತ್ತು. ಲಕ್ಷ್ಮಣನು ಅಲ್ಲಿಯೇ ಒಂದು ಪರ್ಣಕುಟಿಯನ್ನು ರಚಿಸಿದನು. ಆ ಸ್ಥಳವು ಕದಳಿ, ಮಾವು, ಖರ್ಜುರ ಮೊದಲಾದ ಪಣ್ಫಲಗಳಿಂದ ಕೂಡಿದ ರಮ್ಯ ಸ್ಥಳವಾಗಿತ್ತು. ನಿತ್ಯವೂ ಲಕ್ಷ್ಮಣನು ಕಂದ ಮೂಲ ಫಲಾದಿಗಳನ್ನು ತರುತ್ತಿದ್ದನು. ಅವ-ರೆಲ್ಲರೂ ಸಂತೋಷದಿಂದ ಅವನ್ನು ಭುಂಜಿಸಿ ಸುಖದಿಂದ ಇದ್ದರು ರಾತ್ರಿ ಲಕ್ಷ್ಮಣನು ರಾಮ ಸೀತೆಯರಿಗೆ ಕಾವಲಾಗಿ ಎಚ್ಚರದೀಂದಿರುತ್ತಿದ್ದನು. ಈ ರೀತಿ ಸುಖದಿಂದ ಈ ರೀತಿ ಸುಖದಿಂದ ದಿನ ಕಳಿಯುತ್ತಿರು-ವಾಗ ಒಂದು ದಿನ ಲಕ್ಷ್ಮಣನು ಜಗನ್ಮಾಯ ರೂಪದಲ್ಲಿರುವ ಅಣ್ಣನನ್ನು ಕೇಳಿದನು, ವಿನಯದಿಂದ ವಂದಿಸಿ ತನಗೆ ತತ್ವಜ್ಞಾನವನ್ನು ಬೋಧಿಸ-ಬೇಕು ಎಂದು. ಮೋಕ್ಷಕ್ಕೆ ಸಾಧನವಾದ ತತ್ವ ಯಾವದು ? ನೀನು ಒಲಿದು ತನಗೆ ತಿಳಿಸಬೇಕು ಎಂದು ಕೇಳಿಕೊಂಡನು. ಎಲೈ ತವಮ್ಮಾ ನೀನು

ಒಳ್ಳೆಯದನ್ನೇ ಮಾಡಿದೆ. ಗೌಪ್ಯದಲ್ಲಿ ಗೋಪ್ಯವಾದ ಉತ್ಕೃಷ್ಟವಾದ ಈ ವಿದ್ಯೆಯನ್ನು ನೀನು ಕೇಳಿದೆ ನಾನು ಹೇಳುತ್ತೇನೆ. ಕೇಳುವಂಥವನಾಗು,

ಮೊದಲು ಮಾಯಾ ಸ್ವರೂಪವನ್ನು ಕೇಳು. ಅದರಿಂದ ವಿಜ್ಞಾನ ವಿಜ್ಞಾನದಿಂದ ಜ್ಞಾನ ನಂತರ ಸಕಲ ಬಂಧನವನ್ನು ಬಿಡಿಸಿ ಆತ್ಮಸುಖ-ವನ್ನು ನೀಡುವ ಆತ್ಮಜ್ಞಾನವನ್ನು ಪಡೆಯಬಹುದು. ದನ್ನದಲ್ಲವ ಈ ದೇಹವನ್ನೇ ತನ್ನದು ಎಂದು ನಂಬುವದೇ ಮಾಯೆ. ಇದೇ ಸಂಸಾರಕ್ಕೆ ಮೂಲ ಕಾರಣ. ಇದನ್ನು ಆವರಣ ವಿಕ್ಷೇಪ ಎಂಬೆರಡು ಆವರಿಸಿ-ಕೊಂಡಿದೆ. ಪಂಚಭೂತಗಳು ಮೊದಲಾದವುಗಳೆಲ್ಲ ಆವರಿಸಿಕೊಂಡು ವಿಶ್ವದ ಕಲ್ಪನೆಯಲ್ಲಿ ಕಾಣುತ್ತಿರುವದು. ಹಗ್ಗವನ್ನೇ ಹಾವು ಎಂದು ಭ್ರಮಿಸು-ವಂತೆ ಪ್ರತಿಯೊಂದು ಹುಸಿಯ ಸ್ವರೂಪವಾಗಿದೆ. ಎಲ್ಲವೂ ಕನಸಿನಂತೆ ತೋರುವದು ಅಷ್ಟೇ ! ಈ ಸಂಸಾರವೃಕ್ಷಕ್ಕೆ ಅಹಂಕಾರವೇ ಮೂಲ. ನಂತರ ಪುತ್ರ ಮಿತ್ರ ಕಳತ್ರಾದಿಗಳು ಆಮೇಲೆ ಪಂಚಭೂತದ ಸ್ವರೂಪ-ಗಳಾದ ರೂಪ, ರಸ, ಸ್ಪರ್ಶ, ಗಂಧ ಮೊದಲಾದವುಗಳು. ಹೀಗೆ ಇವೆಲ್ಲ-ವುಗಳ ಸಮ್ಮೇಳನವೇ ಕ್ಷೇತ್ರ. ಸುಕೃತ ದುಷ್ಕೃತಗಳೇ ಅದರ ಬೆಳೆಗಳು. ಮನುಜ ಭೂಮಿಯಲ್ಲಿ ಸರಿಯಾದ ಬೆಳೆ ಬೆಳೆಯದಿದ್ದರೆ ಬೆಟ್ಟ ಬೆಳೆಯು-ವಂತೆ ಈ ಕ್ಷೇತ್ರದಲ್ಲಿಯೂ ಕೂಡ ಉತ್ತಮ ಬೆಳೆ ಬೆಳೆಯಬೇಕು. ಇಲ್ಲ-ದಿದ್ದರೆ ಕೆಡುಕು.

ಈ ಜೀವ ಪರಮಾತ್ಮರ ಸಂಬಂಧವನ್ನು ಹೇಳುವೆನು ಕೇಳು-ತಿಳಿದವರು ಜೀವ ಪರಮಾತ್ಮ ಇವರಲ್ಲಿ ಭೇದವೆಣಿಸುವದಿಲ್ಲ ಜೀವನೇ ಪರಮಾತ್ಮನಾಗುತ್ತಾನೆ ಆದರೆ ವಿದ್ಯೆಯು ಸರಿಯಾಗಿಲ್ಲದಿದ್ದರೆ ಆತ್ಮನೊಬ್ಬ-ನನ್ನೇ ಮಾತ್ರ ತಿಳಿಯುತ್ತಾನೆ ಯಾರಿಗೂ ಕೆಡುಕನ್ನು ಎಣಿಸದೆ ಹಿತವನ್ನೇ ಕಾಯಾ ವಾಚಾ ಮನಸಾ ಎಣಿಸಬೇಕು ಪರರಿಗೆ ಪೀಡೆ ಕೊಡುವದೇ ಪಾಪ ಪರರಿಗೆ ಹಿತವನ್ನು ಬಯಸುವದೇ ಪುಣ್ಯ ಎಂದರಿಯಬೇಕು ಅಹಂ-ಕಾರದಿಂದ ಶರೀರಕ್ಕೆ ಬಾಧೆ ಬಂದೊದಗುವದು. ತನುವೇ ತನ್ನದು ಎಂದು ಹೇಳುತ್ತ ಬೇರೆಯವರನ್ನು ಜರೆಯದೆ ಹಂಗಿಸದೆ ನೀತಿ, ದಯೆ, ಧೈರ್ಯ, ಪ್ರೀತಿ, ಸದ್ಗುಣ ಮೊದಲಾದ ಸೇವೆಯಲ್ಲಿಯೇ ನಿರತರಾಗಿರಬೇಕು. ವಿಷ-

ಯಾಸಕ್ತರಾಗದೇ ತನುವ ದಂಡಿಸಬೇಕು ಮಾತಿನಲ್ಲಿಯೂ ಒಳ್ಳೆಯವನಾಗಿರಬೇಕು. ಯಾರಿಗೂ ಬಾಧೆಯನ್ನು ಕೊಡದೆ ದೇವ, ಗುರು, ವಿಪ್ರರನ್ನು ಪೂಜಿಸಬೇಕು. ಮನಸ್ಸನ್ನು ಸದ್ಬ್ರಹ್ಮದ ಕಡೆಗೆ ತಿರುಗಿಸಬೇಕು. ಪುತ್ರ ಮಿತ್ರ ಬಂಧು ಬಳಗ ಮೊದಲಾದ ಆಗು ಹೋಗುಗಳ ಬಗ್ಗೆ ಹರ್ಷ ಶೋಕ ಮೊದಲಾದವುಗಳನ್ನು ವ್ಯಕ್ತಪಡಿಸದೆ ಸಮಚಿತ್ತನಾಗಿರಬೇಕು ಗುರುವನ್ನು ಸೇವಿಸಬೇಕು. ಆತನೇ ನಿಜವಾದ ಮಾರ್ಗದರ್ಶಕ, ಆತನಿಂದಲೇ ತತ್ವಜ್ಞಾನ ಪಡೆಯಬೇಕು. ಬಾಹ್ಯಾಚರಣೆ, ಅಂತರಾಚರಣೆ ಇವೆಲ್ಲ ಶುದ್ಧವಾಗಿರಬೇಕು. ಈ ದೇಹ ಪುಣ್ಯದಿಂದ ದೊರಕಿದ ದೇಹ. ಪುಣ್ಯ ಕಾರ್ಯಕ್ಕಾಗಿಯೇ ಈ ದೇಹ ಇರಬೇಕು. ವಿಷಯೇಂದ್ರಿಯ ಮೋಹ ಬುದ್ಧಿಗಳಿಂದ ಬೇರಾದ ಚಿನ್ಮಯ ವಸ್ತುವೇ ಜ್ಞಾನ, ಇದನ್ನು ನೀನು ಅರಿಯಬೇಕು. ಸರ್ವವೂ ತಾನು ಸಕಲವನ್ನೂ ತಾನು ಬೆಳಗುತ್ತಿದ್ದೇನೆ. ಇದು ಸಚ್ಚಿದಾನಂದ ಸ್ವರೂಪವಾಗಿದೆ ಎಂದು ತಿಳಿ ಇದು ಹೀನ ವೃತ್ತಿಗಳಿಂದ ಕೂಡಿಲ್ಲ ಉತ್ತಮ ಗುರುವಿನ ಉಪದೇಶದಿಂದ ಇದೆಲ್ಲವನ್ನೂ ತಿಳಿಯುವದು. ಆತ್ಮವು ಶುದ್ಧ ಚೈತನ್ಯ ಸ್ವರೂಪವಾಗಿರುವದು. ತತ್ವಮಸಿಯರ್ಥವನ್ನು ಚೆನ್ನಾಗಿ ತಿಳಿದುಕೋ, ಇದೇ ನಿಜವಾದ ಜ್ಞಾನ, ಇದರಿಂದ ಪರಮಾನಂದವನ್ನು ಪಡೆ ಇದುವೇ ಮೋಕ್ಷದ ಸ್ವರೂಪ. ನಮಗೆ ಬೇಕಾದ ವಸ್ತುವು ರಾತ್ರಿಯಲ್ಲಿ ದೀಪವಿಲ್ಲದೇ ಹೇಗೆ ದೊರಕುವದಿಲ್ಲವೋ ಎಷ್ಟೇ ಶಾಸ್ತ್ರಗಳನ್ನು ಅರಿತರೂ ನನ್ನ ಭಕ್ತಿಯ ಸೂತ್ರವಿಲ್ಲದೇ ಆತ್ಮಜ್ಞಾನವು ದೊರಕಲಾರದು. ನನ್ನ ಪಾದಸೇವನೆಯನ್ನು ಅತ್ಯಂತ ಭಕ್ತಿಯಿಂದ ಮಾಡು. ನನ್ನ ರಾಮಾಯಣದ ಮಹಿಮೆಯನ್ನು ಅನ್ಯರಿಗೂ ಕೇಳಿಸುವಂಥವನಾಗು. ಸಾಧು ಸಜ್ಜನರ ಸಂಗ, ಉತ್ತಮರ ಸಂಪರ್ಕ ಇದೇ ಮುಕ್ತಿಗೆ ಕಾರಣ. ಹೀಗೆ ನಿನಗೆ ಆತ್ಮಜ್ಞಾನದ ವಿವರವನ್ನೆಲ್ಲ ತಿಳಿಸಿದ್ದೇನೇ ಇದನ್ನು ಯಾವ ಕಾಲಕ್ಕೂ ನನ್ನ ಭಕ್ತಿ ಹೀನರಿಗೆ ಒರೆಯಬೇಡ. ಯಾರಿದನ್ನು ಶ್ರದ್ಧಾ ಭಕ್ತಿಭಾವದಿಂದ ಪಠಿಸುವರೋ ಧ್ಯಾನಮಾಡುವರೋ ಅವರು ಅಜ್ಞಾನಾಂಧಕಾರವನ್ನು ಹೋಗಲಾಡಿಸಿಕೊಂಡು ಮೋಕ್ಷಾನಂದವನ್ನು ಪಡೆಯುವರೆಂಬಲ್ಲಿಗೆ ಈ ಸಂಧಿ ಮುಗಿಯುತ್ತದೆ.

ಇಪ್ಪತ್ತನಾಲ್ಕನೆಯ ಸಂಧಿ :- ಲೋಲಲೋಚನೆಯೇ ಮುಂದಿನ ಕಥಾಭಾಗವನ್ನು ಆಲಿಸುವಂಥವಳಾಗು,

ಈ ರೀತಿ ರಾಮ ಸೀತಾ ಲಕ್ಷ್ಮಣರು ಪಂಚವಟಿಯಲ್ಲಿ ಸುಖದಿಂದ ಕಾಲಕಳೆಯುತ್ತಿದ್ದರು. ಆ ವನದಲ್ಲಿ ಕಾಮರೂಪಿಣಿಯಾದ ಮಹಾರಾಕ್ಷಸಿ-ಯೊಬ್ಬಳು ಇದ್ದಳು. ಅವಳು ಒಂದು ದಿನ ಗೌತಮೀ ನದಿಯ ತೀರಕ್ಕೆ ವಿಹಾರಾರ್ಥವಾಗಿ ಬಂದಾಗ ಅಲ್ಲಿ ಪದ್ಮಾಂಕುಶ ಸುರೇಖೆಗಳಿಂದಲಂಕೃತ-ವಾದ ಪಾದರೇಖೆಗಳನ್ನು ಕಂಡು ಕಾಮಮೂರ್ಛಿತಳಾದಳು. ಅದನ್ನೇ ಅನುಸರಿಸಿ ಬಂದ ಆಕೆ ರಾಮನನ್ನು ಕಂಡಳು. ಅವನನ್ನು ಮಾತನಾಡಿ-ಸಿದಳು. ಎಲೈ ಸುಂದರಾಂಗನೇ ನೀನಾರು ? ಈ ಮಹಾಶ್ರಮಕ್ಕೆ ಜಟಿ ವಲ್ಕಲಯುಕ್ತನಾಗಿ ಯಾಕೆ ಬಂದಿರುವಿ ? ಅತ್ಯಂತ ನೇಮನಿಷ್ಠೆಯಿಂದ ಯಾಕೆ ಇದ್ದಿ ? ನಾನು ಶೂರ್ಪನಖಿ ಎನ್ನುವವಳು. ರಾವಣಾಸುರನ ಅನುಜೆ ಕಾಮರೂಪಿಣಿಯೂ ಹೌದು. ನನ್ನ ಭ್ರಾತೃ ಖರನೆಂಬವನು. ನಾನು ಯಾವಾಗಲೂ ಈ ವನದಲ್ಲಿ ಚರಿಸುತ್ತ ಮುನಿಗಳನ್ನು ಭಕ್ಷಿಸುತ್ತ ಇದ್ದೇನೆ. ನಿನ್ನಲ್ಲಿ ನಾನು ಮೋಹಗೊಂಡಿದ್ದೇನೆ. ಆಗ ರಾಮನು-ನಾನು ಅಯೋಧ್ಯೆಯ ರಾಜನಾದ ದಶರಥನ ಪುತ್ರ ರಾಮನೆಂಬವನು ಇವಳು ನನ್ನ ಹೆಂಡತಿ ಸೀತೆ, ಸುರೂಪಿ ಈತ ನನ್ನ ಅನುಜನಾದ ಲಕ್ಷ್ಮಣ ಅಡವಿಗಾಗಿ ಬಂದಿ-ದ್ದೇವೆ ನಿನ್ನದೇನಾದರೂ ಇದ್ದರೆ ಹೇಳು.

ರಾಮನ ಮಾತನ್ನು ಕೇಳಿದ ಆಕೆ ನಾನು ನಿನ್ನಲ್ಲಿ ಮೋಹ-ಗೊಂಡಿದ್ದೇನೆ. ಈ ವನದಲ್ಲಿ ಗಿರಿ ಕಾನನದಲ್ಲಿ ನನ್ನೊಡನೆ ಬೇಕಾದಷ್ಟು ಕಾಲ ರಮಿಸು. ಸಂತೋಷಿಸು. ನಾನು ಕಾಮಪೀಡಿತಳಾಗಿದ್ದೇನೆ ಎನ್ನಲು- ಎಲೈ ನಾರಿಯೇ ನಾನು ಏನು ಹೇಳಲಿ ! ನನ್ನ ಹೆಂಡತಿ ಸೀತೆ ಇಲ್ಲೇ ಇದ್ದಾಳೆ. ನೀನು ಅವಳ ಸವತಿಯಾಗಬೇಕಾಗುತ್ತದೆ. ಕಾರಣ ನನ್ನ ತಮ್ಮ-ನನ್ನು ವರಿಸುವಂಥವಳಾಗು. ಅವಳು ಲಕ್ಷ್ಮಣನಿದ್ದಲ್ಲಿಗೆ ಹೋಗಿ ತನ್ನ ಮನದಿಂಗಿತವನ್ನು ವ್ಯಕ್ತಪಡಿಸುತ್ತಾಳೆ. ಆಗ ಲಕ್ಷ್ಮಣನು ತಿಳಿಸಿದ್ದೇನೆಂದರೆ ನಾನು ರಾಮನ ದಾಸ, ನೀನೂ ಸಹ ರಾಮಸೀತೆಯರ ತೊತ್ತಾಗಬೇಕಾಗು-ತ್ತದೆ ವಿಚಾರಮಾಡಿ ನೋಡು ! ರಾಮನನ್ನೇ ವರಿಸುವುದು ಉತ್ತಮ.

ಅವಳು ಪುನಃ ರಾಮನ ಬಳಿಗೆ ಬಂದಳು. ಸೀತೆಯು ಕಾರಣದಿಂದಲೇ ರಾಮನು ತನ್ನನ್ನು ವರಿಸಲಾರ. ಕಾರಣ ಸೀತೆಯನ್ನೇ ನುಂಗುವೆನು ಎನ್ನುತ್ತ ವಿಕಾರ ರೂಪ ಧರಿಸಿ ಬರಲು, ರಾಮನ ಆಣತಿಯಂತೆ ಲಕ್ಷ್ಮಣನು ಅವಳ ಕಿವಿ ಮೂಗುಗಳನ್ನು ತನ್ನ ಹರಿತವಾದ ಕತ್ತಿಯಿಂದ ಕೊಯ್ದುಬಿಟ್ಟನು. ಅವಳು ಸುರಿಯುತ್ತಿರುವ ರಕ್ತಧಾರೆಯಿಂದಲೇ ಕೂಗುತ್ತ ಖರನ ಬಳಿ ಓಡಿದಳು ಖರನು ಅವಳ ವೃತ್ತಾಂತವನ್ನೆಲ್ಲ ಕೇಳಿದನು. ಅವಳ ಸಂಗತಿ-ಯನ್ನು ಕೇಳಿದ ಅವನು ರೋಷಭೀಷಣನಾಗಿ ತನ್ನ ದೈತ್ಯ ಸೇನೆಯೊಂದಿಗೆ ರಾಮಾಶ್ರಮವನ್ನು ಮುತ್ತಿದನು ಭಯಂಕರವಾದ ಕೋಲಾಹಲವನ್ನು ಕೇಳಿದ ರಾಮನು ಎಲೈ ಲಕ್ಷ್ಮಣನೇ ರಕ್ಕಸರು ದಂಡೆತ್ತಿ ಬಂದಿದ್ದಾರೆ. ಯುದ್ಧ ಪ್ರಾರಂಭವಾಗಲಿದೆ. ನೀನು ಸೀತೆಯನ್ನು ಕರೆದುಕೊಂಡು ಹೋಗಿ ಗುಹೆಯಲ್ಲಿದ್ದು ಕಾವಲಿರು. ನಾನು ರಾಕ್ಷಸರ ಸಂಹಾರಮಾಡಿ ಬರುತ್ತೇನೆ ಎಂದನು. ರಾಮನೆಂದಂತೆಯೇ ಲಕ್ಷ್ಮಣನು ಸೀತೆಯನ್ನು ಕಾಯುತ್ತಿದ್ದನು. ರಾಮನಾದರೋ ಶರ ತೂಣೀರ ಚಾಪವನ್ನು ಏರಿಸಿ ಯುದ್ಧಕ್ಕೆ ತಯಾ-ರಾಗಿ ನಿಂತನು. ಘನಘೋರ ಯುದ್ಧ ಪ್ರಾರಂಭವಾಯಿತು. ಕೆಚ್ಚೆದೆಯ ರಾಮನು ಖರದೂಷಣ ತ್ರಿಶಿರರನ್ನೆಲ್ಲ ಕ್ಷಣಾರ್ಧದಲ್ಲಿ ಕೊಂದನು. ವನ ನಿಷ್ಕಂಟಕವಾಯಿತು ರಾಕ್ಷಸರನ್ನು ಕೊಂದ ರಾಮನನ್ನು ಸೀತೆ ಆನಂದ-ದಿಂದ ಆಲಂಗಿಸಿದಳು. ಆತನ ಯುದ್ಧದ ದಣಿವನ್ನು ದೂರ ಮಾಡಿದಳು.

ಕೂಡಲೇ ಇದನ್ನು ನೋಡಿದ ಶೂರ್ಪನಖಿಯು ಲಂಕಾಧಿಪತಿ-ಯಾದ ರಾವಣನಿದ್ದಲ್ಲಿಗೆ ಓಡಿದಳು ರಾವಣನ ಪಾದ ತಲದಲ್ಲಿ ಬಿದ್ದು ತನ್ನ ಗೋಳನ್ನು ತೋಡಿಕೊಂಡಳು. ರಾವಣನು ತನ್ನ ತಂಗಿಯನ್ನು ಕೇಳಿದನು. ನಿನಗೆ ಈ ರೀತಿ ಭಂಗವನ್ನು ಉಂಟು ಮಾಡಿದವರು ಯಾರು ? ಇಂದ್ರನೋ ಯಮನೋ, ವರುಣನೋ, ವಾಯುವೋ ಯಾರು ? ಹೇಳು. ಯಾರಾ-ದರೇನು ಅವರನ್ನು ಯಮಸದನಕ್ಕೆ ಅಟ್ಟುವೆನು. ಶೂರ್ಪನಖಿಯು ರಾವಣನ ಮನ ಕರಗುವಂತೆ ಹೇಳಿದಳು – ನೀನೀಗ ರಾಜ್ಯವಾಳಲು ತಕ್ಕವನಲ್ಲ. ಊರ ಬಿಟ್ಟೋಡು. ಖರ ದೂಷಣ ತ್ರಿಶಿರ ಮೊದಲಾದ ರಾಕ್ಷಸ ಸಮೂಹವೆಲ್ಲ ನಿನ್ನೆ ಮರಣ ಹೊಂದಿತು. ನಮ್ಮ ವನಕ್ಕೆ ರಾಮನೆಂಬವ

ತನ್ನ ಹೆಂಡತಿ ಸೀತೆ, ತಮ್ಮ ಲಕ್ಷ್ಮಣನೊಡನೆ ಬಂದಿದ್ದಾನೆ. ಅವನಿಂದ ಮುನಿಗಳಿಗೆಲ್ಲ ನಿರ್ಭಯವಾಯ್ತು. ನಾನು ಗೌತಮೀ ನದೀ ತೀರದಲ್ಲಿಯ ಪಂಚವಟಿಗೆ ಹೋದೆನು. ಅಲ್ಲಿ ರಾಮ ಲಕ್ಷ್ಮಣರೊಡನೆ ಸುರಸುಂದರಿ-ಯಾದ ಸೀತೆಯೆಂಬವಳಿದ್ದಾಳೆ ದೇವ ಗಂಧರ್ವಾದಿ ಕನ್ನೆಯರಿಗಿಂತಲೂ ಸುಂದರಿ. ಇವಳು ನಾರೀವೃಂದಕ್ಕೆ ಮುಕುಟಪ್ರಾಯದವಳಾಗಿದ್ದಾಳೆ. ನಿನಗೆ ಅವಳನ್ನು ತಂದುಕೊಡಬೇಕೆಂದು ಹೋದರೆ ನನಗೆ ಈ ರೀತಿ ಆಯಿತು. ಯುದ್ಧಕ್ಕೆ ಹೋದ ರಾಕ್ಷಸರ ಕುಲವನ್ನೆಲ್ಲ ಒಂದೇ ಕ್ಷಣದಲ್ಲಿ ಸಂಹಾರ ಮಾಡಿದನು ರಾಮನಿದಿರಿನಲ್ಲಿ ಯಾರೂ ನಿಲ್ಲಲು ಶಕ್ತರಲ್ಲ. ನೀನು ಧೀರನೇ ಆಗಿದ್ದ ಪಕ್ಷದಲ್ಲಿ ಸೀತೆಯನ್ನು ಪಡೆಯುವಂಥವನಾಗು. ಸೀತೆ ದೊರಕಿದರೆ ಸಾಕು. ಮತ್ತೇನೂ ಬೇಡ. ಷಂಢನಾಗಬೇಡ ಎಂದಿತ್ಯಾದಿ-ಯಾಗಿ ಹೇಳಿ ಅವನನ್ನು ಜರೆದಳು. ಸೀತೆಯನ್ನು ತರಬೇಕಾದರೆ ರಾಮ-ನನ್ನು ಯುಕ್ತಿಯಿಂದ ಮೋಹಿಸಿಯೇ ತರಬೇಕು. ಹೀಗೆ ಹೇಳಿದ ಅವಳನ್ನು ಸಂತೈಸಿ ರಾವಣನು ಕಳುಹಿದನು. ಆ ರಾತ್ರಿ ಅದೇ ಚಿಂತೆಯಲ್ಲಿ ನಿದ್ರೆ-ಯಿಲ್ಲದೇ ಕಳೆದನು. ರಾಮ ನಿಜವಾದ ಮಾನವನಲ್ಲ. ಮಾನವನಾದರೆ ಆತನಿಂದ ಖರ ದೂಷಣರನ್ನೆಲ್ಲ ಕೊಲ್ಲಲು ಶಕ್ಯವಿಲ್ಲ ಆತ ಸಾಕ್ಷಾತ್ ಲಕ್ಷ್ಮೀ ವಲ್ಲಭನೇ ಸರಿ ! ಆತನೇ ಮನುಕುಲದಲ್ಲಿ ರಾಘವನಾಗಿ ಅವತರಿ-ಸಿದ್ದಾನೆ. ಕಮಲಜನು ಬೇಡಿಕೊಂಡಂತೆ ಆತ ಈತನನ್ನು ಕಳುಹಿಸಿದ್ದಾನೆ. ರಾಮನೊಡನೆ ಸೆಣಸಾಡಿ ಮಡಿದುದಾದರೆ ವೈಕುಂಠ ರಾಜ್ಯವೇ ನನಗೆ ದೊರೆಯುತ್ತದೆ ವೇದೋಪನಿಷತ್ತುಗಳು ಆತನನ್ನು ವರ್ಣಿಸಲು ಸಾಧ್ಯ-ವಾಗದೇ ಇವೆ ಅಂಥಾ ರಾಮನನ್ನು ನನ್ನ ತುಂಬು ಕಣ್ಣುಗಳಿಂದ ನೋಡುತ್ತೇನೆ. ರಾಮನು ತನ್ನನ್ನು ಕೊಲ್ಲದೇ ಇದ್ದರೆ ಸಕಲ ಭೋಗಸೌಭಾಗ್ಯ ವನ್ನು ಹೊಂದುವೆನು. ಎರಡರಲ್ಲಿ ಒಂದಾದರೂ ದೊರೆಯುವದು, ಎಂದು ಆಲೋಚಿಸುತ್ತಿದ್ದನು. ವೈರ ಭಾವದಿಂದಲೇ ಆ ಶ್ರೀರಾಮನನ್ನು ಸೇರಬೇಕು ಎಂದು ರಾಮನನ್ನು ನೆನೆಯುತ್ತ ರಾಮಧ್ಯಾನದಲ್ಲಿಯೇ ತಲ್ಲೀನನಾದ ಎಂಬಲ್ಲಿಗೆ ಸಂಧಿ ಮುಕ್ತಾಯಗೊಳ್ಳುತ್ತದೆ

ಇಪ್ಪತ್ತೈದನೆಯ ಸಂಧಿ - ಎಲೈ ಪಾರ್ವತಿಯೇ ಮುಂದಿನ ಕಥಾಭಾಗವನ್ನು ಒಮ್ಮನಸ್ಸಿನಿಂದ ಕೇಳುವಂಥವಳಾಗು.

ಈ ರೀತಿಯಾಗಿ ರಾವಣನು ರಾತ್ರಿಯನ್ನು ಕಳೆದು ಬೆಳಗಾದ ಕೂಡಲೇ ಎದ್ದು ತನ್ನ ಮಾವನಾದ ಮಾರೀಚನ ಬಳಿಗೆ ರಥವೇರಿ ಹೊರ-ಟನು. ಮಾರೀಚನು ತನ್ನ ಆಶ್ರಮದಲ್ಲಿ ಜಟೆವಲ್ಕಲಗಳನ್ನು ಧರಿಸಿ ಮುನಿಯಂತಿದ್ದು ರಾಮಧ್ಯಾನದಲ್ಲಿ ನಿರತನಾಗಿದ್ದನು ರಾವಣನನ್ನು ಕಂಡು ಆತನನ್ನು ಆಲಿಂಗಿಸಿ ಆತನ ಕುಶಲ ಕ್ಷೇಮ ಸಮಾಚಾರವನ್ನು ಕೇಳಿದನು. ಅತಿಥಿ ಸತ್ಕಾರ ಮಾಡಿದನು ನೀನು ಬಂದ ಕಾರಣವೇನು ? ಮನಸ್ಸೇಕೆ ಚಿಂತಾತುರವಾಗಿದೆ ? ಮೋರೆ ಕಳೆಯಿಲ್ಲದಂತಾಗಿದೆ ಕಾರಣವೇನು ತಿಳಿಸು. ನಿನಗೆ ಹಿತವನ್ನೇ ನಾನು ಬಯಸುವಂಥವನಾಗಿದ್ದೇನೆ. ಕೆಟ್ಟ ಮಾರ್ಗ-ವನ್ನು ಮಾತ್ರ ಹೇಳಬೇಡ. ಸನ್ಮಾರ್ಗವನ್ನು ನಿವೇದಿಸು ಎಂದು ಹೇಳಲು ರಾವಣನು ಈ ರೀತಿ ಹೇಳಿದನು - ಈ ಭೂಮಂಡಲದಲ್ಲಿ ಸಾಕೇತಾಧಿ-ಪತಿಯಾದ ದಶರಥನಿದ್ದಾನೆ. ಅವನ ಜ್ಯೇಷ್ಠ ಪುತ್ರ ರಾಮ ಈಗ ಆತ ಸತಿ ಸೀತೆ ತಮ್ಮ ಲಕ್ಷ್ಮಣ ಸಹಿತ ದಂಡಕಾವನಕ್ಕೆ ಬಂದಿದ್ದಾನೆ. ಸೀತೆ ಸುಂದರಿ. ಸ್ಫುರದ್ರೂಪಿ. ದಂಡಕಾವನದಲ್ಲಿರುವ ನಿರಪರಾಧಿಗಳಾದ ಖರ ದೂಷಣ ಮೊದಲಾದ ರಾಕ್ಷಸರನ್ನು ಸಂಹಾರ ಮಾಡಿದ್ದಾನೆ. ಶೂರ್ಪ-ನಖಿಯ ಕಿವಿ ಮೂಗು ಕೊಯ್ದಿರುತ್ತಾನೆ. ಈ ಪರಿ ಅಪರಾಧಗೈದ ಶ್ರೀರಾಮಚಂದ್ರನ ಪ್ರಾಣವಲ್ಲಭೆಯಾದ ಸೀತೆಯನ್ನು ಅಪಹರಿಸಿ ತರ-ಬೇಕಾಗಿದೆ. ಅದಕ್ಕೆ ನಿನ್ನ ಸಹಾಯ ಅತ್ಯವಶ್ಯ ನೀನು ಮಾಯಾ ಮೃಗ-ವಾಗಿ ಅವಳ ಬಳಿ ಸುಳಿದಾಡು ರಾಮ ಲಕ್ಷ್ಮಣರನ್ನು ಅವಳಿಂದ ದೂರ-ಮಾಡು. ನಾನು ಸೀತೆಯನ್ನು ಸೆಳೆದು ತರುತ್ತೇನೆ. ನಂತರ ನೀನು ಸುಖ-ದಿಂದಿರು ಎಂದು ಹೇಳಿದನು.

ಯಾವದೇ ಶಬ್ದವನ್ನು ಕೇಳಿದೊಡನೆಯೇ ರಾಮ ಬಂದ ಎಂದು ತಿಳಿದು ಬೆಚ್ಚಿಬೀಳುವ ಕನಸಿನಲ್ಲಿಯೇ ರಾಮನನ್ನು ಕಂಡು ಹೆದರುವ, ಹೀಗೆ ನಿರಂತರವೂ ರಾಮನ ಹೆದರಿಕೆಯಲ್ಲಿರುವ ಮಾರೀಚನು ರಾವಣಗೆ ಹೇಳಿದನು - ನನಗೆ ಆ ರಾಮನ ಸಹವಾಸವೇ ಬೇಡ, ನಾನು ರಾಮ ಚಿಂತೆಯಿಂದಲೇ ಬಸವಳಿದು ಬೆಂಡಾಗಿದ್ದೇನೆ. ನಿನಗೆ ಹಿತಕರವಾದ ಮಾತನ್ನು ಹೇಳುತ್ತೇನೆ. ಕೇಳು - ರಾಮನು ಸಾಕ್ಷಾತ್ ಪರದೈವ. ಆತನೇ ದೇವ

ದೇವೇಶ ಶ್ರುತಿ ತತಿಗಳಿಗೂ ಅಗೋಚರನಾದವ. ನೀನು ಅವನಲ್ಲಿ ದ್ವೇಷ ಭಾವವನ್ನು ಬಿಡು. ಆತನಲ್ಲಿ ನವವಿಧ ಭಕ್ತಿಯನ್ನಿಟ್ಟು ಅವನನ್ನು ಪೂಜಿಸು ನಿನ್ನದೆಲ್ಲವನ್ನೂ ಅವನಲ್ಲಿ ಸಮರ್ಪಿಸು . ದೇವತೆಗಳು ಮುನಿಗಳು ಮೊದಲಾದವರ ಪ್ರಾರ್ಥನೆಗೆ ಒಲಿದ ದೇವರು ಹೇಳಿದ್ದೇನೆಂದರೆ - ನಾನು ದಶರಥಗೆ ಮಗನಾಗಿ ಜನಿಸಿ ದಶಕಂಠನನ್ನ ಸವರುವೆ ಎಂಬ ಅಭಯವಿತ್ತಿದ್ದಾನೆ. ರಾಮ ನಿಜವಾಗಿ ಮಾನವನಲ್ಲ ಸಾಕ್ಷಾತ್ ಪರಮ ಪುರುಷ. ಆತ ಭೂಮಿ ಭಾರವ ಕಳೆಯಲು ಭೂಮಿಗೆ ಅವತರಿಸಿ ಬಂದಿದ್ದಾನೆ. ನೀನು ಯಾವದೇ ಆಲೋಚನೆ ಮಾಡದೇ ಮನೆಗೆ ಹೋಗು ಪರಸತಿಗೆ ಆಶೆಮಾಡಬೇಡ ಇದು ನರಕಕ್ಕೆ ಕಾರಣ. ನೀನಂತೂ ನೀತಿ ಶಾಸ್ತ್ರವನ್ನು ತಿಳಿದಂಥವನು. ಹೆಚ್ಚೇನು ಹೇಳಲಿ ! ನನ್ನ ಮಾತನ್ನು ಕೇಳು ಎಂದನು.

ಈ ಮಾರೀಚೋಕ್ತಿ ರಾವಣನಿಗೆ ಹಿಡಿಸಲಿಲ್ಲ. ರಾವಣ ಹೇಳಿದನು- ನೀನು ರಾಮ ಪರಾತ್ಪರನೆಂದು ಹೇಳಿದೆ ತನ್ನನ್ನು ಕೊಲ್ಲಲು ಜನಿಸಿದ್ದಾನೆ ಎಂದೆ. ಈಶ್ವರ ಸಂಕಲ್ಪವನ್ನು ತಪ್ಪಿಸಲು ಯಾರಿಂದಲೂ ಶಕ್ಯವಿಲ್ಲ ಆದ್ದರಿಂದ ಸೀತೆಯನ್ನು ಈಗಲೇ ತರಬೇಕು ದುರಾಗ್ರಹವಿಲ್ಲದೇ ರಾಮ ತನ್ನಲ್ಲಿ ನೆಣಸಲಾರ. ಪರಮಾತ್ಮ ಪದವಿಯನ್ನು ಪಡೆಯಲು ಇದೇ ಸರಿಯಾದ ಮಾರ್ಗ ರಾಮನೊಡನೆ ಜಗಳಾಡಿದ ಹೊರತು ಯಾವ ಕಾರ್ಯವೂ ಸಾಧಿಸುವದಿಲ್ಲ. ಆದ್ದರಿಂದ ಕೂಡಲೇ ಹೊರಡು. ಮಾಯಾಮೃಗದ ರೂಪ ಧರಿಸು. ರಾಮಾಶ್ರಮದ ಎದುರಿನಲ್ಲಿ ಸುಳಿದಾಡು. ನಾನಾ ಪ್ರಯತ್ನದಿಂದ ರಾಮ ಲಕ್ಷ್ಮಣರನ್ನು ಸೀತೆಯಿಂದ ದೂರಮಾಡು. ಇಲ್ಲದೇ ಇದ್ದರೆ ಈ ನನ್ನ ಖಡ್ಗದಿಂದಲೇ ನಿನ್ನ ತಲೆಯನ್ನು ಚಂಡಾಡುವೆನು. ನನ್ನ ಮಾತಿಗೆ ಪ್ರತಿಯಾಡಬೇಡ. ಈ ಮಾತನ್ನು ಕೇಳಿ ಮಾರೀಚನು ಆಲೋಚಿಸಿದ. ಕೆಡುವ ಕಾಲಕ್ಕೆ ಬುದ್ಧಿಯಿಲ್ಲ ಎನ್ನುವಂತೆ ರಾಮನಿಂದ ಮರಣ ಹೊಂದಿದರೆ ಪರಮಪದ ಪ್ರಾಪ್ತಿಯೆಂದು ತಿಳಿದು - ಈತನಿಂದ ಮರಣ ಹೊಂದಿದರೆ ಮುಕ್ತಿಯಿಲ್ಲ ಎಂದು ತಿಳಿದು - ಹೇಗೆ ಇದ್ದರೂ ನನಗೆ ಮರಣ ತಪ್ಪಿದ್ದಲ್ಲ. ರಾಮ ಶರದಿಂದ ಮರಣ ದೊರೆತರೆ ಸದ್ಗತಿ ದೊರೆಯುತ್ತದೆ ಎಂದು ತಿಳಿದು ರಾವಣನೆಂದಂತೆ ಮಾಡಲು ತಯಾರಾದನು.

ಒಡೆಯನ ಆಜ್ಞೆಯನ್ನು ಮೀರುವದು ಪಾಪಕ್ಕೆ ಸಮಾನ ಆದು-ದರಿಂದ ನಿನ್ನ ಆಣತಿಯಂತೆ ನಡೆಯುವೆ ಎಂದು ಹೇಳಿದನು. ಮತ್ತು ಆತನ ರಥದ ಮೇಲೆ ಕುಳಿತು ರಾಮಾಶ್ರಮಕ್ಕೆ ಹೋದನು. ಅಲ್ಲಿ ಬಂಗಾರ ವರ್ಣದ ಮೃಗವಾಗಿ ಪರ್ಣಶಾಲೆಯ ಎದುರಿಗೆ ಆಡ್ಡಾ-ಡತೊಡಗಿದನು. ಸೀತೆಯ ಮುಂದೆ ತನ್ನ ಕುಣಿದಾಟವನ್ನು ಪ್ರಾರಂಭಿಸಿ ಮರುಳುಗೊಳಿಸತೊಡಗಿದನು ಎಂಬಲ್ಲಿಗೆ ಸಂಧಿ ಪೂರ್ಣಗೊಳ್ಳುತ್ತದೆ.

ಇಪ್ಪತ್ತಾರನೆಯ ಸಂಧಿ : ಮಡದಿ ಪಾರ್ವತಿಯೇ ಮುಂದೆ ರಾವಣ ಮಾರೀಚರು ಮಾಡಿದ ಚೇಷ್ಟೆಯ ವಿವರಗಳನ್ನೆಲ್ಲ ಕೇಳುವಂಥವಳಾಗು

ಮುಂದಾಗತಕ್ಕದ್ದನ್ನು ಮೊದಲೇ ಊಹಿಸಿದ ಶ್ರೀರಾಮಚಂದ್ರನು ಸೀತೆಯನ್ನು ಕರೆದು ಇಂತೆಂದನು - ಎಲೈ ಸೀತೆಯೇ ರಾವಣನು ಭಿಕ್ಷು-ವೇಷದಿಂದ ನಿನ್ನ ಬಳಿಗೆ ಬರುವನು. ಕಾರಣ ನಿನ್ನ ಛಾಯೆಯಾದ ಮಾಯಾ ಸೀತೆಯನ್ನು ಇಲ್ಲಿರಿಸು, ಹಾಗೂ ನೀನು ನನ್ನಾಜ್ಞೆಯಿಂದಲೇ ವಹ್ನಿ (ಅಗ್ನಿ) ಯಲ್ಲಿ ಅಡಗಿರು. ಆ ದುರಾತ್ಮನನ್ನು ಕೊಂದ ನಂತರ ನನ್ನ ಬಳಿಗೆ ಬಾ ರಾಮಾಜ್ಞೆಯಂತೆ ಸೀತೆಯು ಅಗ್ನಿಯಲ್ಲಿ ಗೌಪ್ಯವಾಗಿ ಅಡ-ಗಿದಳು. ಹಾಗೂ ಮಾಯಾ ಸೀತೆಯನ್ನು ಹೊರಗಿರಿಸಿದಳು. ಆ ಮಾಯಾ ಸೀತೆಯು ಬಂಗಾರದ ಮಾಯಾ ಮೃಗವನ್ನು ಕಂಡು ರಾಮನನ್ನು ಕುರಿತು ಅದು ತನಗೆ ಬೇಕೆಂದು ಕೇಳಿದಳು ಈ ಮೃಗವನ್ನು ಹಿಡಿದು ತಂದು-ಕೊಡದರೆ ನಾನು ಆ ಮೃಗದೊಡನೆ ಆಡುತ್ತ ವೇಳೆ ಕಳೆಯುವೆ. ಆಗ ರಾಮನು ಧನುವನ್ನು ಹಿಡಿದು ಅದನ್ನು ಹಿಡಿತರಲು ಹೊರಟನು. ಹೋಗುವಾಗ ಲಕ್ಷ್ಮಣನಿಗೆ ಸೀತೆಯ ಕಾವಲಾಗಿರಲು ತಿಳಿಸಿದನು. ಇದು ಮಾಯಾ ಮೃಗವು. ಈ ಪರಿಯ ಮೃಗವಿರಲು ಶಕ್ಯವಿಲ್ಲ ಎಂದು ತಿಳಿಸಿದರೂ ಕೂಡ ರಾಮನು ಅದನ್ನು ಹಿಡಿದು ತರಲು ಹೊರಟನು. ನಿರ್ವಿಕಾರನೂ ನಿರೀಹನೂ ಪರಿಪೂರ್ಣನೂ ಆದ ಆ ರಾಮನೆಲ್ಲಿ ! ಆ ಮಾಯೆಯೆಲ್ಲಿ !! ರಾಮನು ಆಕೆಯ ವಚನವನ್ನು ಸಲಿಸಲೋಸುಗ ಮೃಗದ ಬೆಂಬತ್ತಿದನು.

ಭಕ್ತರ ಅನುಗ್ರಹಕ್ಕಾಗಿಯೇ ಆತ ಹೋದ ಎನ್ನುವ ವಿಚಾರವನ್ನು ಕವಿ ಹೇಳುತ್ತಾನೆ. ಆ ಮೃಗ ಒಮ್ಮೆ ಓಡುವದು; ಒಮ್ಮೆ ಅಡಗುವದು ; ಒಮ್ಮೆ ಕಾಣಿಸಿಕೊಳ್ಳುವದು ಇತ್ಯಾದಿಯಾಗಿ ಮಾಡುತ್ತ ರಾಮನನ್ನು ದೂರ ಕೊಂಡೊಯ್ದಿತು. ರಾಮನು ಈತ ಸಾಕ್ಷಾತ್ ರಾಕ್ಷಸನೆಂದು ತಿಳಿದು ಆತನನ್ನು ತನ್ನ ಬಾಣದಿಂದ ಹೊಡೆದನು. ದಾನವನು ತನ್ನ ಮೊದಲಿನ ರೂಪ ಧರಿಸಿ ಹಾ ಲಕ್ಷ್ಮಣಾ ! ಹಾ ಸೀತೇ !! ಎಂದು ಕೂಗಿ ಗತಪ್ರಾಣನಾದನು. ಸಾಯುವ ಕಾಲದಲ್ಲಿ ರಾಮಾ ಎಂಬೆರಡಕ್ಷರವನ್ನು ಉಚ್ಚರಿಸಿದುದರಿಂದ ಆತನಿಗೆ ಮೋಕ್ಷ ದೊರಕಿತು ಆತನ ಶರೀರದಿಂದ ಒಂದು ದಿವ್ಯಜ್ಯೋತಿಯು ಹೊರಟು ರಾಮನಲ್ಲಿ ಲೀನವಾಯಿತು. ಇದನ್ನು ನೋಡಿದ ದೇವತೆಗಳು ಆಶ್ಚರ್ಯಭರಿತರಾಗಿ ರಾಮನ ಮಹಿಮೆಯನ್ನು ಕೊಂಡಾಡತೊಡಗಿದರು. ಶೂರನಾಗಿರಲಿ, ಪಾಪನಿರತನಾಗಿರಲಿ, ವಿಕಾರಿಯಾಗಿರಲಿ ಬ್ರಾಹ್ಮಣನಾಗಿರಲಿ ಘೋರ ರಾಕ್ಷಸನೇ ಕೂಡ ಆಗಿರಲಿ ರಾಮನನ್ನು ನೆನೆದರೆ ನಿಜಪದವಿಯನ್ನು ಪಡೆಯುತ್ತಾನೆ. ರಾಮನು ದುಃಖದಿಂದ ಕಳವಳಿಸತೊಡಗಿದ ಈತ ಸಾಯುವಾಗ ಹಾ ಲಕ್ಷ್ಮಣಾ ಎಂದು ನನ್ನ ದನಿಯಂತೆ ಒದರಿದ. ಸೀತೆ ಕಳವಳಿಸುವಳು ಎಂದು ಹಳಹಳಿಸುತ್ತ ತನ್ನ ಆಶ್ರಮಕ್ಕೆ ಮರಳಿ ಬರುತ್ತಿದ್ದ. ಇತ್ತ ಸೀತೆ ಈ ಮಾರೀಚೋಕ್ತಿಯನ್ನು ಕೇಳಿ ಕಳವಳಿಸುತ್ತ ಎಲೈ ಲಕ್ಷ್ಮಣನೇ ರಾಮನಿಗೆ ಏನೋ ಆಗಿದೆ. ಕೂಡಲೇ ಹೋಗು ಎಂದು ಅವಸರಪಡಿಸತೊಡಗಿದಳು. ಆಗ ಲಕ್ಷ್ಮಣ ಹೇಳಿದ – ಇದು ರಾಮನ ನುಡಿಯಲ್ಲ. ದನುಜ ಸಾಯುವಾಗ ಹೇಳಿದ ಮಾತಿದು ಈ ಪ್ರಕಾರ ರಾಮ ನುಡಿಯಲು ಶಕ್ಯವಿಲ್ಲ. ಆತನಿಗೆ ಸಕಲರನ್ನು ಜಯಿಸುವ ಸಾಮರ್ಥ್ಯವಿದೆ. ಈ ಮಾತನ್ನು ಕೇಳಿದ ಸೀತೆ ಕೋಪದಿಂದ ಲಕ್ಷ್ಮಣನ ಕಡೆ ನೋಡಿ ಇಂತೆಂದಳು – ನೀನು ಭರತನ ಆಣತಿಯಂತೆ ರಾಮವಧೆಗಾಗಿಯೇ ಬಂದವನು ! ರಾಮನ ಮರಣಾನಂತರ ನನ್ನನ್ನು ಕರೆತರಲು ಭರತನೇ ಕಳುಹಿಸಿರುವನು, ನೀನು ಭಾರ್ಯಾಪಹಾರಿ ಎಂಬ ಮಾತಿಗೆ ಕಾರಣನಾಗುತ್ತೀ ! ನಾನು ನಿನ್ನನ್ನಾಗಲೀ ಭರತನನ್ನಾಗಲೀ ಮುಟ್ಟಲಾರೆ ಎಂದು ದುಃಖಿಸುತ್ತ ನುಡಿದಳು. ಆ ನುಡಿಗಳಿಗೆ

ಲಕ್ಷ್ಮಣನು ಸಂಭ್ರಾಂತನಾದನು. ಕರ್ಣ ಕಠೋರವಾದ ಮಾತು ಕೇಳಿ ದುಃಖಿಸಿದ ನಂತರ ವನದೇವತೆಯರಿಗೆ ಸೀತೆಯ ರಕ್ಷಣೆಯ ಭಾರವನ್ನು ವಹಿಸಿ ರಾಮನ ಶೋಧಕ್ಕಾಗಿ ಹೊರಟುಬಿಟ್ಟನು.

ಇತ್ತ ರಾವಣನು ಭಿಕ್ಷುಕ ವೇಷದಿಂದ ಸೀತೆಯಿದ್ದಲ್ಲಿಗೆ ಬಂದನು. ಆ ಭಿಕ್ಷುಕನು ಯತಿಯೆಂದೇ ಭ್ರಮಿಸಿ ಆತನಿಗೆ ಅರ್ಘ್ಯಪಾದ್ಯಾದಿಗಳನ್ನು ನೀಡಿದಳು. ತಿನ್ನಲು ಗೆಡ್ಡೆ ಗೆಣಸು ಮೊದಲಾದವುಗಳನ್ನು ಕೊಟ್ಟಳು. ಎಲೈ ಮುನಿಯೇ ಸ್ವಲ್ಪ ವಿಶ್ರಾಂತಿ ಪಡೆ. ನನ್ನವರು ಈಗಲೇ ಬರುವರು. ನೀವಿಲ್ಲಿ ಬಂದ ಕಾರಣವೇನೆಂದು ಭಿಕ್ಷು ಕೇಳಲು ಸೀತೆ ಹೇಳಲುಪಕ್ರಮಿಸಿದಳು - ಅಯೋಧ್ಯಾ ಪಟ್ಟಣದ ದೊರೆ ದಶರಥ ಆತನ ಹಿರಿಯ ಮಗ ರಾಮ. ಆತನ ಸತಿ ನಾನು ಸೀತೆ. ದಶರಥನ ಆಜ್ಞೆಯ ಪ್ರಕಾರ ಹದಿನಾಲ್ಕು ವರ್ಷ ವನವಾಸದಲ್ಲಿರಲು ಬಂದಿದ್ದೇವೆ. ನೀವು ಯಾರು ? ಎಂದು ವಿಚಾರಿಸಲು ಆತ ಹೇಳಿದ - ನಾನು ರಾಕ್ಷಸರೊಡೆಯ ರಾವಣ. ಪೌಲಸ್ತ್ಯನ ತನಯ ನಿನ್ನ ಕಂಡು ಕಾಮಮೋಹಿತನಾಗಿ ಈ ಮುನಿಯ ವೇಷದಿಂದ ಬಂದಿದ್ದೇನೆ. ಆ ರಾಮನನ್ನು ಬಿಟ್ಟು ನನ್ನನ್ನು ಭಜಿಸು ನನ್ನ ಮನೆಯ ಭೋಗವನ್ನು ಅನುಭವಿಸು ಈ ಕಂದ ಗಡ್ಡೆ ಗೆಣಸುಗಳಿಂದೇನು ಫಲ ? ಈ ಮಾತನ್ನು ಕೇಳಿದ ಸೀತೆ ಭಯಭೀತಳಾಗಿ ಗಡಗಡ ನಡುಗತೊಡಗಿದಳು.

ಎಲವೋ ದುಷ್ಟ ! ನಿನ್ನನ್ನೀಗಳೇ ರಾಮನು ಕೊಲ್ಲುವನು ತನ್ನ ತನುಜ ಸಹಿತ ಈಗಲೀಗಳೇ ಬಹನು. ಎಲೈ ಹೇಡಿಯೇ ನೀನು ಈಗಿಂದೀಗಲೇ ಇಲ್ಲಿಂದ ತೊಲಗು ಎಂದಳು. ಆಗ ಕೋಪಗೊಂಡ ರಾವಣನು ತನ್ನ ನಿಜರೂಪ ಧರಿಸಿ, ನೆಲ ಸಹಿತವಾಗಿ ಸೀತಾದೇವಿಯನ್ನೆತ್ತಿಕೊಂಡು ತನ್ನ ರಥದಲ್ಲಿ ಕೂಡ್ರಿಸಿಕೊಂಡು ಆಕಾಶಮಾರ್ಗದಿಂದ ಲಂಕೆಯ ಕಡೆಗೆ ಸಾಗತೊಡಗಿದನು. ಅವಳು ಹಾ ರಾಮಾ ! ಹಾ ಸೌಮಿತ್ರಾ !! ಎಂದು ವಿಲಾಪಿಸತೊಡಗಿದಳು ರಾಮನನ್ನೇ ನೆನೆಯತೊಡಗಿದಳು

ಈ ಆಕ್ರಂದನವನ್ನು ಕೇಳಿ ಜಟಾಯುವು ಕೂಡಲೇ ಅಲ್ಲಿಗೆ ಆಗಮಿಸಿದನು. ಎಲೈ ಕಳ್ಳ ನಿಲ್ಲು ! ನಿಲ್ಲು !! ಎಲೈಯೂ ಗರುಡನ ಮಾ-

ಯನ್ನು ತುಡುಕಿದಂತಾಯಿತು ನಿನ್ನ ರೀತಿ. ಉತ್ತಮವಾದ ಹವಿಸ್ಸನ್ನು ನಾಯಿ ತಿನ್ನುವಂತಾಯಿತೋ ! ಎನ್ನುತ್ತ ತನ್ನ ಚುಂಚಿನಿಂದ ಆತನ ರಥಕ್ಕೆ ಹೊಡೆಯಲು ರಥವು ತುಂಡಾಗಿ ಬಿದ್ದಿತು. ರಾವಣನ ಧನುಸ್ಸನ್ನು ಜಟಾಯುವು ಮುರಿದು ಹಾಕಿದನು. ಕೂಡಲೇ ದನುಜನು ಖಡ್ಗವನ್ನು ಹಿಡಿದು ಸನ್ನದ್ಧನಾದನು. ಆ ದುಷ್ಟ ರಾವಣನು ಜಟಾಯುವಿನ ಎರಡೂ ರೆಕ್ಕೆಗಳನ್ನು ಕಡಿದುರುಳಿಸಿದನು ಪ್ರತಿ ರಥದಲ್ಲಿ ಸೀತೆಯನ್ನು ಒಯ್ಯತೊಡಗಿದನು ರಾಮ ರಾಮಾ ನನ್ನನ್ನು ರಕ್ಷಿಸು ಎಂದು ಸೀತೆಯೊರಲತೊಡಗಿದನು. ಲಕ್ಷ್ಮಣಾ ನನ್ನ ಅಪರಾಧವನ್ನು ಮನ್ನಿಸು. ಪ್ರಾರಬ್ಧ ಕರ್ಮವನ್ನು ಅನುಭವಿಸುತ್ತಿದ್ದೇನೆ ಎಂದು ಅಳತೊಡಗಿದಳು. ವಾಯುವೇಗದಿಂದ ರಥವು ಚಲಿಸುತ್ತಿರಲು ಪರ್ವತಾಗ್ರದ ಮೇಲೆ ವಾನರರನ್ನು ಕಂಡು ತನ್ನ ಆಭರಣಗಳನ್ನೆಲ್ಲ ವಸ್ತ್ರಾರ್ಧದಲ್ಲಿ ಗಂಟು ಕಟ್ಟಿ ಅವರ ಕಡೆ ಎಸೆದಳು ಮತ್ತು ಈ ವಿಷಯವನ್ನು ರಾಮನಿಗೆ ಅರುಹುವದು ಎಂದು ಸಂಜ್ಞೆ ಮಾಡಿದಳು. ಈ ಪ್ರಕಾರವಾಗಿ ರಾವಣನು ಮಾಯಾ ಸೀತೆಯನ್ನು ಲಂಕೆಗೆ ತಂದನು. ಅಶೋಕಾವನದಲ್ಲಿ ಆಕೆಯನ್ನಿಟ್ಟನು. ರಾಕ್ಷಸಿಯರನ್ನು ಆಕೆಯ ಕಾವಲಿಗೆ ಇಟ್ಟನು. ರಾಕ್ಷಸಿಯರನ್ನು ಆಕೆಯ ಕಾವಲಿಗೆ ಇಟ್ಟನು. ಶೋಕ, ಮೋಹ ಯಾರಿಗೂ ತಪ್ಪಿದ್ದಲ್ಲ. ದೇಹಕ್ಕೆ ದುಃಖ ಮೋಹಗಳು ಆವರಿಸಿರುವದು. ಸಹಜ ಇದನ್ನು ಅರಿತವರು ದೇಹ ಭಾವವನ್ನು ತೊರೆದು ವೈರಾಗ್ಯದಿಂದ ಜೀವಿಸುತ್ತಾರೆ. ವಿಷಯಾದಿ ಭೋಗಗಳನ್ನು ತುಚ್ಛವೆಂದು ತಿಳಿದು ಆತ್ಮ ತತ್ವದಲ್ಲಿಯೇ ನಿರತರಾಗಿರುತ್ತಾರೆ ರಾಕ್ಷಸಿಯರಿಂದ ಸುತ್ತುವರಿಯಲ್ಪಟ್ಟ ಸೀತೆಯು ಮಾನಸಿಕ ವೇದನೆಯನ್ನು ಅನುಭವಿಸುತ್ತ ಬಸವಳಿದು ರಾಮಾ ರಾಮಾ ಎಂದು ಹಲುಬುತ್ತ ತನ್ನನ್ನು ಸಲಹು ಎಂದು ಗೋಳಿಡುತ್ತಿದ್ದಳು ಎಂಬಲ್ಲಿಗೆ ಇಪ್ಪತ್ತಾರನೆಯ ಸಂಧಿ ಮುಗಿಯಿತು.

ಇಪ್ಪತ್ತೇಳನೆಯ ಸಂಧಿ :- ಪಾರ್ವತಿಯೇ ಮುಂದಿನ ಕಥಾಭಾಗವನ್ನು ಕೇಳುವಂಥವಳಾಗು.

ಶ್ರೀರಾಮನು ಮಾಯಾ ಮಾರೀಚನನ್ನು ಕೊಂದು ತನ್ನಾಶ್ರಮದ ಕಡೆಗೆ ಬರುತ್ತಿರುವಾಗ ಬಾಡಿದ ಮೋರೆಯುಳ್ಳ ಲಕ್ಷ್ಮಣನು

ಬರುತ್ತಿರುವವನನ್ನು ಕಂಡನು. ಮಾಯಾ ಸೀತೆಯನ್ನು ದನುಜನೊಯ್ದ. ಇದನ್ನು ಲಕ್ಷ್ಮಣ ಅರಿಯ. ಈಗ ನಾನೂ ಸಹ ನನ್ನ ದುಃಖವನ್ನು ತನ್ನ ತಮ್ಮನಿಗೆ ತೋರ್ಪಡಿಸಬೇಕು ಎನ್ನುತ್ತ ಪ್ರಾಕೃತದ ಮಾನವನಂತೆ ವರ್ತಿಸಿ ಸೀತೆಯನ್ನರಸುತ್ತ ಮುಂದುವರಿಯಬೇಕು ರಾವಣಾದಿಗಳನ್ನೆಲ್ಲ ಕೊಲ್ಲಬೇಕು. ಅಗ್ನಿಯಲ್ಲಡಗಿದ ಸೀತೆಯನ್ನು ಪುನಃ ಪಡೆಯಬೇಕು. ತನ್ನ ಜಾನಕಿಯೊಡಗೂಡಿ ಅಯೋಧ್ಯಾ ಪಟ್ಟಣಕ್ಕೆ ಬಂದು ರಾಜ್ಯಕಾರಭಾರ ನಡೆಸಬೇಕು ನಾನು ಮಾನವನಂತೆ ವರ್ತಿಸಿ ಮುಂದಿನವರಿಗೆ ದಾರಿದೀಪವಾಗಬೇಕು ಕಲಿಕಾಲದಲ್ಲಿ ಜನಿಸುವವರಿಗೆ ತನ್ನ ಕೀರ್ತನೆ, ಪೂಜೆ, ಮೂರ್ತಿಧ್ಯಾನ ಸೇವೆ ಮೊದಲಾದವುಗಳನ್ನು ಬಿಟ್ಟು ಬೇರಿಲ್ಲ. ಇದೇ ಅವರ ಪಾಪನಾಶಕ್ಕೆ ಕಾರಣೀಭೂತವಾಗಿದೆ ಜನರಲ್ಲಿ ಸನ್ಮಾರ್ಗ ಪ್ರವೃತ್ತಿಯನ್ನು ಬೆಳೆಸಬೇಕು ಎಂದಾಲೋಚಿಸಿ ಮುಂದೆ ಬರುತ್ತಿರುವ ಲಕ್ಷ್ಮಣನನ್ನು ನೋಡಿ ದುಃಖಿಸುತ್ತ ಲಕ್ಷ್ಮಣಾ ಸೀತೆಯನ್ನು ಬಿಟ್ಟು ಯಾಕೆ ಬಂದೆ ? ಸೀತೆಯನ್ನು ದಾನವರು ತಿಂದರೋ ಪಾತಕಿಗಳು ಕದ್ದೊಯ್ದರೋ ಅವಳು ನನ್ನನ್ನು ನೋಡಲು ಕಾತರಿಸುವಳೋ ಎಂದು ಕೇಳತೊಡಗಿದ. ಆಗ ನಿಮ್ಮ ಮಾತಿನ ಕರೆಯು ಕೇಳಲು ಭಯದಿಂದ ಆಕೆಯು ಕರ್ಣಕಠೋರವಾದ ಮಾತಿನಿಂದ ನಿನ್ನನ್ನರಸುತ್ತ ಬಂದೆನು ರಕ್ಕಸರು ಆಕೆಯನ್ನು ತಿಂದರೋ ಅಥವಾ ಕದ್ದೊಯ್ದರೋ ಹೇಳಲಾರೆ ಎಂದೆನ್ನುತ್ತ ಸಂಶಯಪಡುತ್ತ ಆಶ್ರಮಕ್ಕೆ ಬಂದರು. ಅಲ್ಲಿ ಸೀತೆಯನ್ನು ಕಾಣದೆ ದುಃಖಿತರಾದರು.

ಹಾ ಸೀತೆ ! ಹಾ ರಮಣಿ !! ನನ್ನ ಹತ್ತಿರ ಯಾಕೆ ಬರಲಾರೆ ! ಚೇಷ್ಟೆಗಾಗಿ ಎಲ್ಲಾದರೂ ಅಡಗಿರುವೆಯಾ ? ಎಲೈ ವನದೇವಿಯರಿರಾ ನನ್ನ ಸೀತೆಯನ್ನು ನೀವು ಕಂಡಿರೇ ? ಮೃಗ ನಿಕರವೇ ಪಕ್ಷಿ ಸಂಕುಲವೇ ಕಮಲನೇತ್ರೆಯಾದ ಸೀತೆಯನ್ನು ಕಂಡಿರೇ ? ಹೀಗೆ ಎದುರಿಗೆ ಕಂಡ ಪ್ರತಿಯೊಂದನ್ನು ಕೇಳುತ್ತ ಸೀತೆಯನ್ನು ಕಾಣದೇ ಕಳವಳಿಸುತ್ತ ವಿಲಾಪಿಸುತ್ತಿದ್ದನು. ಮನುಜಲೀಲೆಯೋ ಎಂಬಂತೆ ಸರ್ವಾತ್ಮನಾದ ಆ ಪರಮಾತ್ಮನು ಶೋಕಿಸುತ್ತಿದ್ದಾನೆ. ನನ್ನ ಹೆಂಡತಿ ಸೀತೆ ಎಂದು ಗೋಳಾಡುತ್ತಿದ್ದಾನೆ, ಅಜ್ಞರು ರಾಮನ ಈ ಮಾಯಾ ಸ್ವರೂಪವನ್ನು ತಿಳಿಯ-

ಲಾರರು. ಸಶಿಯಗಲಿಕೆಯಿಂದ ಸಾಮಾನ್ಯ ಮಾನವರಂತೆ ಮಾಯಾ ವಶನಾಗಿ ದುಃಖುತ್ತಿದ್ದಾನೆ. ಈತ ಪರಿಮಾನಂದ ಪರಪೂರ್ಣನಾಗಿದ್ದರೂ ಕೂಡ ರಾಗರಹಿತನಾಗಿದ್ದರೂ ರಾಗಾಸಕ್ತರಾದವರಂತೆ ದುಃಖಿತನಾಗಿದ್ದಾನೆ. ಹೀಗೆ ಸೀತೆಯನ್ನು ಹುಡುಕುತ್ತ ಮುಂದುವರಿಯುತ್ತಿರುವಾಗ ಯುದ್ಧ ನಡೆದ ಸ್ಥಳವನ್ನೂ, ಮುರಿದ ಬಿದ್ದ ರಥವನ್ನೂ ಕಂಡರು ಸೀತೆಯನ್ನು ಬಿಡಿಸಿಕೊಳ್ಳಲು ಯಾರೋ ಇವನೊಂದಿಗೆ ಯುದ್ಧ ಮಾಡಿದ್ದಾರೆ ಹೀಗೆ ಹೇಳುತ್ತ ಸ್ವಲ್ಪ ದೂರ ಬರಬರುತ್ತ ಪಕ್ಷಿಯು ( ಜಟಾಯುವು ) ಬಿದ್ದ ಸ್ಥಳಕ್ಕೆ ಬಂದು ತಲುಪಿದರು ಎಲೈ ಲಕ್ಷ್ಮಣನೇ ಸೀತೆಯನ್ನು ನುಂಗಿದ ಪಕ್ಷಿಯು ಇಲ್ಲಿ ಬಿದ್ದಿದೆ ನೋಡು. ಕಪಟಿಯಾದ ರಾಕ್ಷಸನು ಸೀತೆಯನ್ನು ತಿಂದು ಈ ರೂಪ ಧರಿಸಿ ಇಲ್ಲಿ ಬಿದ್ದಿದ್ದಾನೆ. ಶರವನ್ನು ತಾ. ಈತನನ್ನು ಈಗಲೇ ಕೊಲ್ಲುತ್ತೇನೆ ಎಂದೆನಲು ನರಳುತ್ತ ಬಿದ್ದ ಜಟಾಯುವು ಕ್ಷೀಣ ಸ್ವರದಲ್ಲಿ ರಾಮನಿಗೆ ಹೀಗೆ ಹೇಳಿದನು. ನನ್ನನ್ನು ಕೊಲ್ಲಬೇಡ- ನಿನ್ನ ಪ್ರಿಯೆಗಾಗಿಯೇ ಈ ದೇಹವನ್ನು ಮುಡುಪಾಗಿ ಇಟ್ಟೆ ನಾನು ಜಟಾಯು ರಾವಣನು ಸೀತೆಯನ್ನು ಕದ್ದೊಯ್ಯುವಾಗ ಆತನೊಡನೆ ಕಾದಿದೆ. ಆತನ ರಥವನ್ನು ಪುಡಿಪುಡಿಮಾಡಿದೆ. ಆತನ ಇಪ್ಪತ್ತು ತೋಳುಗಳನ್ನು ಮುರಿದೆ. ಆದರೆ ಕಡೆಯಲ್ಲಿ ಆತನು ಮೋಸದಿಂದ ನನ್ನ ಪಕ್ಷಗಳನ್ನು ತರಿದು ಈ ರೀತಿ ಮಾಡಿದನು. ನಿನ್ನ ಬಳಿಯಲ್ಲಿಯೇ ಪ್ರಾಣ ಬಿಡುತ್ತೇನೆ ಗತಪ್ರಾಣ-ನಾದ ಜಟಾಯುವನ್ನು ಕಂಡು ರಾಮನು ದುಃಖದಿಂದ ಆತನನ್ನು ಸ್ಪರ್ಶಿ-ಸಿದನು ತನ್ನ ಹಸ್ತದಿಂದ ಆತನ ಮೈಯನ್ನು ನೇವರಿಸುತ್ತ ನನ್ನ ವಲ್ಲಭೆ-ಗಾಗಿ ನೀನು ಪ್ರಾಣವನ್ನುತೆತ್ತೆ. ಸೀತೆಯನ್ನು ಒಯ್ದವನಾರು ಹೇಳೆನಲು ರಾವಣನೆಂಬ ರಕ್ಕಸನು ತನ್ನ ರಥದಲ್ಲಿ ಸೀತೆಯನ್ನು ದಕ್ಷಿಣಾಭಿಮುಖ-ವಾಗಿ ಒಯ್ದಿದ್ದಾನೆ. ಇನ್ನು ಮಾತನಾಡಲಾರೆ. ಈ ಭೌತಿಕ ದೇಹವನ್ನು ನಿನ್ನಿದಿರಲ್ಲೇ ಬಿಡುತ್ತೇನೆ ಎಂದನು ನನ್ನ ಪ್ರಾಣೋತ್ಕ್ರಮಣ ಕಾಲದಲ್ಲಿ ನೀನು ನನಗೆ ಗೋಚರನಾದೆ. ಜಗನ್ಮಯನಾದ ಆ ವಿಷ್ಣುವೇ ನೀನು ಮಾಯಾ ರೂಪ ಧರಿಸಿ ಮನುಜನಾಗಿದ್ದೀ. ನಿನ್ನ ಹಸ್ತದಿಂದ ಮತ್ತೊಮ್ಮೆ ನನ್ನನ್ನು ಸ್ಪರ್ಶಿಸು ಎಂದನು. ರಾಮನು ತನ್ನ ಕರಕಮಲದಿಂದ ಆತನನ್ನು ಮುಟ್ಟಲು ಜಟಾಯುವು ಸಂತೋಷದಿಂದ ಪ್ರಾಣಬಿಟ್ಟನು. ರಾಮನು ಪ್ರಾಣ ಬಿಟ್ಟ

ಆತನ ಶರೀರವನ್ನು ಚಿತೆಗೇರಿಸಿ ದಹಿಸಿದನು. ಆತನ ಪಿತೃ ಕರ್ಮವನ್ನೂ ಕೂಡ ನೆರವೇರಿಸಿದನು. ಆಗ ಜಟಾಯುವು ತೇಜೋಮಯದ ರೂಪ ಧರಿಸಿದ. ವಸ್ತ್ರಾಭರಣಗಳಿಂದ ಶೋಭಿಸಿದ. ಮಹಾವಿಷ್ಣುವಿನಂತೆ ನಾಲ್ಕು ಭುಜಗಳಿಂದಲೂ ಶಂಖಚಕ್ರಗದಾಬ್ಜಂದಲೂ ಶೋಭಿಸಿದ ಮತ್ತು ದಿವ್ಯ ವಿಮಾನವನ್ನೇರಿ ಸ್ವರ್ಗ ಸೇರಿದ, ಹೋಗುವಾಗ ಪುನಃ ರಾಮನನ್ನು ಅನೇಕ ರೀತಿಯಿಂದ ಅನೇಕ ವಿಧವಾಗಿ ಸ್ತುತಿಸಿದ ರಾಮನೇ ಗತಿ ಎಂದು ವಂದಿಸಿದ. ಆತನ ಸ್ತುತಿ ಕೇಳಿ ಪರಮಾನಂದ ಭರಿತನಾದ ರಾಮನು ನಿನ್ನೀ ಸ್ತುತಿಗೆ ಮೆಚ್ಚಿದೆ ನನ್ನ ನಿಜಪದವನ್ನು ನೀನು ಸೇರು ಎಂದು ಹೇಳಿ ಆತನನ್ನು ಬೀಳ್ಕೊಟ್ಟನು. ಯಾರು ಈ ವಿಷಯವನ್ನು ಹೇಳುವರೋ, ಕೇಳುವರೋ, ಪಠಿಸುವರೋ? ಅವರೆಲ್ಲ ಘೋರ ತಾಪತ್ರಯಗಳನ್ನು ಕಳೆದು ಪರಮ ಗತಿಯನ್ನು ಪಡೆಯುವರು ಎಂದು ಹೇಳಿದನೆಂಬಲ್ಲಿಗೆ ಈ ಸಂಧಿ ಮುಗಿಯಿತು.

ಇಪ್ಪತ್ತೊಂಬತ್ತನೆಯ ಸಂಧಿ :– ಎಲ್ಲೈ ಅಘಾರಂಗಿಯೇ ಅತ್ಯಂತ ಕುತೂಹಲ ಕರವಾದ ಆ ಶ್ರೀರಾಮನ ಮುಂದಿನ ಕಥಾನಕವನ್ನು ಕೇಳುವಂಥವಳಾಗು.

ನಂತರ ಶ್ರೀರಾಮನು ಲಕ್ಷ್ಮಣನೊಡನೆ ಸೀತೆಯನ್ನರಸುತ್ತ ಅರಣ್ಯದಲ್ಲಿ ಮುಂದುವರಿಯುತ್ತಿದ್ದನು. ಅಷ್ಟರಲ್ಲಿ ಅಲ್ಲಿ ಮುಂದೆ ಒಂದು ಅದ್ಭುತವನ್ನು ಕಂಡರು ಶಿರಪಾದಗಳೇನೂ ಇಲ್ಲದ ವಕ್ರರೂಪನಾದ ಬಳ್ಳಿಯ ಆಕಾರದಲ್ಲಿರುವ ಉದ್ದವಾದ ಎರಡು ತೋಳುಗಳನ್ನು ಧರಿಸಿದ ಒಬ್ಬ ವ್ಯಕ್ತಿಯನ್ನು ಕಂಡರು. ಅವನ ಹೆಸರು ಕಬಂಧ ಎಂಬುದು. ತನ್ನೆರಡು ಕೈಗಳಿಂದ ಸಕಲ ಜೀವ ಜಂತುಗಳನ್ನು ಬಾಚಿ ಬಾಚಿ ಬಾಯಲ್ಲಿ ತುಂಬಿಕೊಳ್ಳುತ್ತಿದ್ದನು. ಈ ರೀತಿ ಆತ ಮಾಡುತ್ತಿರುವಾಗ ರಾಮ ಲಕ್ಷ್ಮಣರು ಆತನ ತೋಳುಗಳ ಮಧ್ಯದಲ್ಲಿ ಸಿಲುಕಿದರು. ಆಗ ರಾಮನು ಲಕ್ಷ್ಮಣನೊಡನೆ ಹೀಗೆಂದ – ಶಿರ ಪಾದಗಳಿಲ್ಲದ ಈತನ ಕೈಯಲ್ಲಿ ನಾವು ಸಿಲುಕಿದ್ದೇವೆ. ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ ಈಗೇನು ಮಾಡುವದು ? ಕೂಡಲೇ ಈತನ ಬಾಹುಗಳೆರಡನ್ನೂ ಕತ್ತರಿಸೋಣ. ಎನ್ನುತ್ತ ರಾಮ ಲಕ್ಷ್ಮಣರು ಆತನ ಬಲಗೈ ಹಾಗೂ ಎಡಗೈ ಎರಡನ್ನೂ ಕತ್ತರಿಸಿ ಕೆಡಹಿದರು.

ತೋಳನ್ನು ಕತ್ತರಿಸಿದ ಕೂಡಲೇ ರಾಕ್ಷಸನು ಆಕಾಶಕ್ಕೆ ಹಾರಿ ನಿಂತು ಈ ರೀತಿ ನುಡಿದನು – ನರ ಶ್ರೇಷ್ಠರಾದ ನೀವಾರು ? ನನ್ನ ಭುಜಗಳನ್ನು ಕಡಿವ ಶಕ್ತಿ ನಿಮಗೆಂತು ಉಂಟಾಯಿತು ? ಆಗ ರಾಮ ಹೇಳಿದ ನಾನು ದಶರಥ ರಾಜನ ಹಿರಿಯ ಮಗ ರಾಮ ಈತ ನನ್ನ ಅನುಜ ಲಕ್ಷ್ಮಣ ಕಪಟಿಗಳಾದ ರಾಕ್ಷಸರನ್ನು ಕೊಲ್ಲಲು, ಮರ್ದಿಸಲು ದಮನಮಾಡಲು ಬಂದವರು ನಾವು. ನನ್ನ ಹೆಂಡತಿಯ ಹೆಸರು ಮೂರು ಲೋಕಕ್ಕೂ ಮನೋಹರೆಯಾದ ಸೀತೆ ಎಂಬುದು. ತನ್ನ ನಾಶಕ್ಕಾಗಿಯೇ ಯಾವನೋ ಒಬ್ಬ ದಾನವನು ಈಕೆಯನ್ನು ಕದ್ದೊಯ್ದಿದ್ದಾನೆ. ಅವನನ್ನು ಅರಸುತ್ತ ನಾವು ಈ ವನಕ್ಕೆ ಬಂದಿದ್ದೇವೆ. ನೀನು ನಿನ್ನ ಆಹಾರಕ್ಕಾಗಿ ಹುಡುಕು- ತ್ತಿರಲು ನಾವು ನಿನ್ನ ತೋಳಿನಲ್ಲಿ ಸೆರೆ ಸಿಕ್ಕೆವು ನಿನ್ನ ಭುಜ ಕಡಿದೆವು. ನೀನು ಯಾರು ಎಂಬುದನ್ನು ತಿಳಿಸು ಎಂದು ಹೇಳಿದನು. ಆಗ ರಾಕ್ಷಸನು ಹೀಗೆ ಹೇಳಿದನು – ನಾನು ಒಬ್ಬ ಗಂಧರ್ವ ರಾಜ. ರೂಪು ಯೌವ್ವನ ಮದದಿಂದ ಕೂಡಿದೆ. ಬ್ರಹ್ಮನನ್ನು ಜಪಿಸಿ ಆತನಿಂದ ಯಾರಿಂದಲೂ ಮರಣ ಬರದಂತೆ ವರ ಪಡೆದೆ. ನಾರಿಯರನ್ನು ಮೋಹಿಸುತ್ತ ಇರುವ ನಾನು ಒಮ್ಮೆ ಅಷ್ಟಾವಕ್ರ ಮುನಿಯನ್ನು ನೋಡಿದೆ. ಆತನನ್ನು ಹಾಸ್ಯ ಮಾಡಿದೆ. ಆತನು ನೀನು ರಾಕ್ಷಸನಾಗಿ ಭೂಮಿಗೆ ಬೀಳು ಎಂದು ಶಪಿಸಿದ. ಆಗ ನಾನು ಭಯದಿಂದ ಕೇಳಿಕೊಳ್ಳಲು ಮುಂದೆ ತ್ರೇತಾಯುಗದಲ್ಲಿ ಪರ- ಮಾತ್ಮನು ದಶರಥನಲ್ಲಿ ರಾಮನಾಗಿ ಜನಿಸುತ್ತಾನೆ. ವನವಾಸಿಯಾದ ಆತ ನಿನ್ನ ತೋಳುಗಳನ್ನು ಕತ್ತರಿಸುತ್ತಾನೆ. ಆಗ ನೀನು ನಿನ್ನ ನಿಜಸ್ವರೂಪ- ವನ್ನು ಪಡೆವೆ ಎಂದು ಹೇಳಿ ಮುನೀಶ್ವರನು ತನ್ನ ಹಾದಿ ಹಿಡಿದು ಹೋದನು. ಅಂದಿನಿಂದ ನಾನು ರಾಕ್ಷಸನಾಗಿ ಲೋಕಕ್ಕೆಲ್ಲ ಮೃತ್ಯು ಕಂಟಕನಾದೆ. ಆಗ ಇಂದ್ರ ನನ್ನ ಪಾದಗಳೆರಡನ್ನೂ ಖಂಡಿಸಿದ. ತಲೆ ಹೊಟ್ಟೆಯಲ್ಲಿ ಹೊಕ್ಕಿತು ಬ್ರಹ್ಮನ ವರದ ಬಲದಿಂದ ಮೃತ್ಯು ಬರಲಿಲ್ಲ. ಆಗ ಇಂದ್ರ ದಯದಿಂದ ಇವನು ಆಯುಷ್ಯವಿರುವವರೆಗೆ ಇದ್ದಲ್ಲಿಯೇ ಇದ್ದು ಕೈಗೆ ಸಿಕ್ಕಿದ್ದನ್ನು ತಿನ್ನಲಿ ಎಂದು ಹೇಳಿ ಕೈಗಳು ಯೋಜನದಳತೆಗಳಾಗು- ವಂತೆ ಕರುಣಿಸಿದ. ಅಂದಿನಿಂದ ಈ ವನದಲ್ಲಿಯೇ ಇದ್ದು ನನ್ನ ಆಹಾರ- ವನ್ನು ದೊರಕಿಸಿಕೊಳ್ಳುತ್ತಿದ್ದೇನೆ ಈ ದಿನ ನೀನು ನನ್ನ ಕೈಗಳನ್ನು ಕಡಿದು

ಉಪಕರಿಸಿದೆ. ಇಲ್ಲಿಯೇ ಒಂದು ಹೊಂಡತೋಡಿ ನನ್ನ ಶರೀರವನ್ನು ಹಾಕಿ ಕಟ್ಟಿಗೆಯೊಟ್ಟಿ ದಹಿಸು. ನೀನು ದಹಿಸಿದ್ದೇ ಆದರೆ ನಾನು ನನ್ನ ಮೊದಲಿನ ರೂಪವನ್ನು ಪಡೆದು ನಿನ್ನ ಹೆಂಡತಿ ಹೋದ ಮಾರ್ಗವನ್ನು ತಿಳಿಸುವೆ ಎಂದನು

ರಾಮನು ಲಕ್ಷ್ಮಣನ ಸಹಾಯದಿಂದ ಅಂತೆಯೇ ಮಾಡಲು ಸರ್ವಾಂಗ ಭೂಷಣ ಪರಿಪೂರಿತನಾದ ಗಂಧರ್ವನು ಎದ್ದು ಬಂದನು. ರಾಮನಿಗೆ ವಂದಿಸಿ ಆತನ ಸ್ತೋತ್ರ ಮಾಡಿದನು. ನೀನೇ ಸಾಕ್ಷಾತ್ ವಿಷ್ಣು ನಿತ್ಯಶುದ್ಧನು, ಪರಿಪೂರ್ಣನು ನೀನೇ ವಿರಾಟ್ ಸ್ವರೂಪನು ಭೂತ ವರ್ತಮಾನ ಭವಿಷ್ಯತ್ತುಗಳಿಗೂ ನೀನೇ ಕಾರಣನು. ನಿನ್ನಿಂದಲೇ ಎಲ್ಲವೂ ವಿಕಲ್ಪವಡೆದು ಮಾಯಾ ರೂಪದಿಂದ ಈ ಜಗತ್ತನ್ನು ನಡೆಸುತ್ತಿದ್ದೀ. ನಿನ್ನಲ್ಲಿಯೇ ಸಕಲ ಲೋಕವೂ ಅಡಗಿದೆ. ಈ ರೀತಿಯಾಗಿ ಹಲವು ಬಗೆ-ಯಿಂದ ಸ್ತೋತ್ರ ಮಾಡಿದ ಈಗ ನಿನ್ನೀ ಸ್ಥೂಲರೂಪವನ್ನು ಕಂಡೆ ಅದನ್ನೇ ನೆನೆಯುತ್ತ ಈ ಮಾಯೆಯನ್ನು ದೂರಮಾಡುತ್ತ ಸೌಖ್ಯವನ್ನು ಪಡೆವೆ. ಆತ ರಾಮನ ಪ್ರತಿಯೊಂದು ಅಂಗಾಂಗವನ್ನು ವರ್ಣಿಸುತ್ತ ಪುಳ-ಕಿತನಾದ ಗಂಧರ್ವನ ನಿರ್ಮಲವಾದ ಭಕ್ತಿಗೆ, ಸ್ತುತಿಗೆ ಮೆಚ್ಚಿದ ಶ್ರೀರಾಮನು ಆತನಿಗೆ ಸನಾತನ ಪದವನ್ನು ಕರುಣಿಸಿದ ಯಾರು ನನ್ನನ್ನು ಈ ರೀತಿ ಭಜಿಸುತ್ತಾರೋ ಅವರೆಲ್ಲ ಈ ಮಹಾ ಪದವಿಯನ್ನು ಪಡೆಯು-ತ್ತಾರೆ ಹೊಂದುತ್ತಾರೆ ಎಂಬಲ್ಲಿಗೆ ಸಂಧಿ ಮುಕ್ತಾಯವಾಗುತ್ತದೆ.

**ಇಪ್ಪತ್ತೊಂಭತ್ತನೆಯ ಸಂಧಿ :** ಮುಡದಿಯಾದ ಪಾರ್ವತಿಯೇ ಮುಂದಿನ ಕಥೆಯನ್ನು ವಿವರಿಸುತ್ತೇನೆ. ಕೇಳುವಂಥವಳಾಗು.

ಹೀಗೆ ರಾಮನಿಂದ ವರ ಪಡೆದ ಗಂಧರ್ವನು ಹೇಳಿದ್ದೇನೆಂದರೆ – ಇಲ್ಲಿಂದ ಮುಂದಕ್ಕೆ ಹೋಗಿರಿ. ಅಲ್ಲಿ ಶಬರಿಯಾಶ್ರಮವಿದೆ ಅಲ್ಲಿ ತಂಗಿದರೆ ನಿಮಗೆ ಒಳ್ಳೆಯದಾಗುವದು. ಮುಂದಿನ ಸಂಗತಿ ತಿಳಿಯುವದು. ಎಂದು ಹೇಳಿ ತನ್ನ ಲೋಕಕ್ಕೆ ಹೋದನು.

ಆತನ ಹೇಳಿಕೆಗೆ ಅನುಗುಣವಾಗಿ ರಾಮ ಲಕ್ಷ್ಮಣರು ಅಲ್ಲಿಂದ ಮುಂದೆ ಶಬರಿಯಾಶ್ರಮದ ಕಡೆಗೆ ಹೊರಟರು. ಆಕೆಯ ಆಶ್ರಮದಲ್ಲಿ

ಶಬರಿಯನ್ನು ಕಂಡರು. ಆಕೆ ರಾಮನನ್ನು ಕಂಡು ಹರ್ಷಾತಿರೇಕದಿಂದ ರಾಮನ ಪಾದತಲದಲ್ಲಿ ಮೈಯ್ಯಿಕ್ಕಿದಳು ರಾಮ ಲಕ್ಷ್ಮಣರೇ ನನ್ನ ಮನದಿಚ್ಛೆಯಂತೆ ನೀವಿಲ್ಲಿಗೆ ಬಂದಿರಿ ಎಂದೆನ್ನುತ್ತ ಉಚಿತಾಸನದಲ್ಲಿ ಕುಳ್ಳಿರಿಸಿ ರಾಮನ ಪಾದದ್ವಯವನ್ನು ತೊಳೆದು ಆ ನೀರನ್ನು ತಲೆಯಲ್ಲಿ ಧರಿಸಿದಳು ನಿನ್ನಂಘ್ರಿಕಮಲವನ್ನು ಪಡೆದು ನಾನು ಧನ್ಯನಾದೆ ಆಕೆ ವಿಧಿ ವಿಧಾನದಿಂದ ಶ್ರೀ ರಾಮನನ್ನು ಪೂಜಿಸಿದಳು. ಉತ್ತಮವಾದ ಫಲಗಳನ್ನು ನೀಡಿದಳು ರಾಮಾಂಘ್ರಿಯನ್ನು ಉತ್ತಮವಾದ ಹೂಗಳಿಂದ ಪೂಜಿಸಿದಳು. ನಂತರ ರಾಮನಿಗೆ ಕರ ಮುಗಿಯುತ್ತ ಈ ರೀತಿ ನುಡಿದಳು - ನಾನಿದ್ದ ಸ್ಥಳ ನನ್ನ ಗುರುಗಳಾದ ಋಷಿಗಳು. ನಾನಿಲ್ಲಿ ಅವರ ಸೇವೆ ಮಾಡುತ್ತ ಬಹಳ ಸಹಸ್ರ ವರ್ಷ ಇದ್ದೆನು. ಅವರು ಬ್ರಹ್ಮ ಪಥವಿಗೆ ಹೋಗುವ ಸಂದರ್ಭದಲ್ಲಿ ನನಗೆ ಈ ರೀತಿ ನೇಮಿಸಿದರು. ನೀನಿಲ್ಲಿಯೇ ಇರು. ಇದರಿಂದ ನಿನಗೆ ಮುಂದೆ ಒಳ್ಳೆಯದಾಗುವದು. ದಶರಥಗೆ ಮಗನಾಗಿ ಜನಿಸಿದ ಶ್ರೀರಾಮಚಂದ್ರನು ಇಲ್ಲಿಗೆ ಬರುವನು ಆತ ಸಾಕ್ಷಾತ್ ಮಹಾವಿಷ್ಣುವೇ. ಆ ಶ್ರೀರಾಮನಿಗೆ ಆತನ ವಲ್ಲಭೆಯ ಜರವನ್ನು ತಿಳಿಸು ಅಂದಿನಿಂದ ರಾಮ ಎಂದು ಬರುವನೋ ಎಂದು ಕಾದಿದ್ದೆ ನಿನ್ನನ್ನು ಕಂಡ ನಂತರ ಈ ದೇಹವನ್ನು ಸುಟ್ಟು ಮೋಕ್ಷಭಾಗಿಯಾಗು ಎಂದರು. ಅಂದಿನಿಂದ ನಿನ್ನ ಧ್ಯಾನದಲ್ಲಿಯೇ ನಿರತನಾಗಿದ್ದೆ. ಇಂದು ನೀನು ನನಗೆ ಗೋಚರನಾದೆ. ಆ ಋಷಿಗಳ ವಾಕು ಸಫಲತೆಯನ್ನು ಪಡೆಯಿತು ಎಂದು ಹೇಳುತ್ತ ನಾನಾ ಪ್ರಕಾರವಾಗಿ ರಾಮನನ್ನು ಸ್ತುತಿಸಿದಳು ನೀನೇ ನನಗೆ ಗತಿ. ನೀನೇ ನನ್ನ ಮತಿ ಭಕ್ತಿಗೆ ಜಾತಿ ಮೊದಲಾದ ಯಾವದೇ ಅಡೆತಡೆಗಳಿಲ್ಲ. ನಾನು ಮತ್ತೇನನ್ನೂ ಬಲ್ಲವಳಲ್ಲ ನಿನ್ನಲ್ಲಿ ಭಕ್ತಿಯೊಂದನ್ನು ಮಾತ್ರ ಇರಿಸಿಕೊಂಡವಳಾಗಿದ್ದೇನೆ ಎಂದಳು. ರಾಮ ಹೇಳಿದ್ದೇನೆಂದರೆ - ನನ್ನ ಭಕ್ತಿಯೇ ಸದ್ಭಕ್ತಿ ನನ್ನ ಚರಿತೆಯನ್ನು ಗುಣಗಾನ ಮಾಡುವುದೇ ನನ್ನ ಎರಡನೆಯ ಭಕ್ತಿ ನನ್ನ ಅವತಾರ ಲೀಲೆಗಳನ್ನು ಕೇಳುವುದು ಮೂರನೆಯ ಭಕ್ತಿ ಇದನ್ನು ಬೇರೆಯವರಿಗೆ ಹೇಳುವದು ನಾಲ್ಕನೆಯ ಭಕ್ತಿ ಐದನೆಯದು ಕಪಟವನ್ನು ಬಿಟ್ಟು ನನ್ನ ಸೇವೆ ಮಾಡುವದು. ಅದುದರಿಂದ ವಾದಿಸದೆ, ವಂಚಿಸದೆ, ಹಿತವನ್ನೇ ಸಾಧಿಸುತ್ತ ಶಾಸ್ತ್ರದಲ್ಲಿ ಹೇಳಿದಂತೆ ಪ್ರತಿಯೊಂದರ ಆಚರಣೆ-

ಯಲ್ಲಿರುವದೇ ವಿಹಿತ. ದಾನ ಧರ್ಮ ಮಾಡುವದು ಆರನೇಯದು ಗಂಧಾ ಕ್ಷತೆಗಳಿಂದ ಪೂಜಿಸುವದೇ ನಿಜವಾದ ಕರ್ತವ್ಯ ಯಮ ನಿಯಮ ಆಸನ-ಗಳಿಂದ ಪೂಜೆಮಾಡುವದು ಏಳನೆಯದು ಎಲ್ಲ ಭೂತಜೀವಿಗಳಲ್ಲಿಯೂ ಪರಮಾತ್ಮನಿದ್ದಾನೆ ಎಂದರಿಯುವದು ಎಂಟನೆಯದು. ತತ್ವ ವಿಚಾರದಿಂದ ಆತ್ಮತತ್ವವನ್ನು ತಾನೇ ತಿಳಿಯುವದು ಒಂಭತ್ತನೆಯದು. ಜೀವ ಭ್ರಾಂತಿ-ಯನ್ನು ಬಿಟ್ಟು ನಿಜ ಚೈತನ್ಯದೊಳಗೆ ಒಂದಾಗುವದೇ ಒಂಭತ್ತನೆಯದು ಈ ಪ್ರಕಾರ ನಾನಾವಿಧ ಭಕ್ತಿಯಿಂದ ಭಜಿಸಬೇಕು. ನನ್ನ ಭಕ್ತಿಯೇ ಎಲ್ಲ ಶಾಸ್ತ್ರಗಳ ಸಾರವು ನನ್ನ ಪಾದಪದ್ಮವನ್ನು ಅತ್ಯಂತ ಋಜು ಸ್ವಭಾವದಿಂದ ಭಜಿಸಿದ ಕಾರಣ ನನ್ನ ದರ್ಶನ ನಿನಗಾಗಿದೆ ಈಗ ಸೀತೆಯೆಲ್ಲಿ ಎಂಬುದನ್ನು ತಿಳುಹು ಎಂದು ಕೇಳಿದನು ನನ್ನ ಅರ್ಧಾಂಗಿಯಾದ ಸೀತೆಯನ್ನು ಎಲ್ಲಿಗೆ ಚೋರರು ಕೊಂಡೊಯ್ದಿದ್ದಾರೆ ? ನೀನು ನೋಡಿದರೆ ತಿಳಿಸು ಎನಲು ಶಬರಿ ಈ ರೀತಿ ನುಡಿದಳು — ಸರ್ವಜ್ಞನಾದ ನೀನು ಎಲ್ಲವನ್ನೂ ಬಲ್ಲೆ. ಆದರೂ ನನ್ನಿಂದ ತಿಳಿಯಲಪೇಕ್ಷಿಸುತ್ತೀಯೆ ಹೇಳುತ್ತೇನೆ: ಕೇಳು-ದೇವತೆಗಳ ವೈರಿಯಾದ ರಾವಣನು ಸೀತೆಯನ್ನು ಕದ್ದೊಯ್ದು ಲಂಕೆಯ ಅಶೋಕ ವನದಲ್ಲಿ ಆಕೆಯನ್ನಿರಿಸಿದ್ದಾನೆ ಜೋಕೆಯಿಂದ ಮುಂದಿನ ಮಾರ್ಗವನ್ನು ಆಲೋಚಿಸು ಇಲ್ಲಿಂದ ಮುಂದೆ ಪಂಪಾಸರೋವರವಿದೆ. ಅಲ್ಲಿ ಋಷ್ಯಮೂಕ ಪರ್ವತದಲ್ಲಿ ಮಂತ್ರಿಸಹಿತನಾದ ಸುಗ್ರೀವನಿದ್ದಾನೆ. ಆತ ತನ್ನ ಅಗ್ರಜ ವಾಲಿಯ ಭೀತಿಯಿಂದ ಅಲ್ಲಿ ನೆಲಸಿದ್ದಾನೆ ಮುನಿಯ ಶಾಪದ ಕಾರಣದಿಂದ ವಾಲಿ ಋಷ್ಯಮೂಕಕ್ಕೆ ಬರಲಾರ ಕಾರಣ ಸುಗ್ರೀವನ ಗೆಳೆತನವನ್ನು ಮಾಡು ನಿನ್ನ ಕಾರ್ಯಕ್ಕಾಗಿ ಸುಗ್ರೀವ ಪ್ರಯತ್ನಿಸುತ್ತಾನೆ. ಹೆದರಬೇಡ ಎಂದಳು ಈಗಲೇ ನಿನ್ನಿದಿರಲ್ಲೇ ಅಗ್ನಿಪ್ರವೇಶ ಮಾಡಿ ಸ್ವರ್ಗಕ್ಕೇರಲು ಇಚ್ಛಿಸಿದ್ದೇನೆ ನಾನು ಈ ತನುವ ಕಳಚುವ ತನಕವೂ ನಿನ್ನ ಮೂರ್ತಿಯನ್ನು ನೋಡುತ್ತಿರಬೇಕೆಂದು ನನ್ನ ಇಚ್ಛೆ ಕಾರಣ ನೀನು ನನ್ನ ಇದಿರಿಗೇ ಇರು ಎಂದು ಹೇಳಿದಳು ರಾಮನನ್ನು ಸ್ಮರಿಸುತ್ತ ಆತನನ್ನು ನೋಡುತ್ತ ಈ ಪಂಚ ಭೌತಾತ್ಮಿಕವಾದ ದೇಹವನ್ನು ಅಗ್ನಿಯಲ್ಲಿ ಈಡಾಡಿದಳು ಮತ್ತು ಮುಕ್ತಿ ಐದಿದಳು ಅತಿ ದುರ್ಲಭವಾದ ಮುಕ್ತಿ ಸಾಮ್ರಾಜ್ಯವನ್ನು ಆಕೆ ಪಡೆದಳು ಯಾವನು ರಾಮಧ್ಯಾನ ನಿರತನಾಗಿದ್ದಾನೋ ಸದಾಕಾಲವೂ ರಾಮನನ್ನು ನೆನೆಯುತ್ತಾನೋ ಆತನು ಸದ್ಗತಿಯನ್ನು ಸಂಶಯವಿಲ್ಲದೇ ಪಡೆಯು-

ತ್ತಾನೆ ಅದ್ದರಿಂದ ಎಲ್ಲವನ್ನೂ ಬಿಟ್ಟು ಶ್ರೀ ರಾಮನನ್ನೇ ಭಜಿಸಬೇಕು. ಎಂದು ಹೇಳುತ್ತಿದ್ದನೆಂಬಲ್ಲಿಗೆ ಸಂಧಿ ಮುಕ್ತಾಯಗೊಂಡಿತು ಹಾಗೂ ರಾಮಾಯಣದಲ್ಲಿಯ ಅರಣ್ಯಕಾಂಡವು ಮುಕ್ತಾಯಗೊಂಡಿತು.

## ಕಿಷ್ಕಿಂಧಾ ಕಾಂಡ

ಮೂವತ್ತನೆಯ ಸಂಧಿ :

ಎಲೈ ಗಿರಿಜೆಯೇ ಆ ಮಹಾಮಹಿಮನಾದ ಶ್ರೀ ರಾಮಚಂದ್ರನ ಮುಂದಿನ ಕಿಷ್ಕಿಂಧಾ ಕಾಂಡದ ಕಥೆಯನ್ನು ವರ್ಣಿಸುತ್ತೇನೆ ಸಾವಧಾನ ದಿಂದ ಕೇಳುವಂಥವಳಾಗು

ರಾಮ ಲಕ್ಷ್ಮಣರು ಶಬರಿಗೆ ಮೋಕ್ಷವನ್ನು ಕರುಣಿಸಿ ಆಕೆಯ ಅಣತಿ ಯಂತೆ ಪಂಪಾಸರೋವರದ ಸಮೀಪಕ್ಕೆ ಬಂದರು ಬರಬರುತ್ತ ಜಲದಿಂದ ಪರಿಪೂರ್ಣವಾದ ಆ ಪಂಪಾ ಸರೋವರವನ್ನು ನೋಡಿದರು ಅದನ್ನು ನೋಡಿ ವಿಸ್ಮಯಪಟ್ಟರು ಅತ್ಯಂತ ವಿಸ್ತೀರ್ಣವೂ ಕಮಲ ಕುಮುದ ಕಲ್ಹಾರ ಮೊದಲಾದ ಹೂಗಳಿಂದ ಸುಶೋಭಿತವಾದ ಚಕ್ರವಾಕ ಪಕ್ಷಿಗಳಿಂದ ತುಂಬಿದ ಆ ಸರೋವರವನ್ನು ನೋಡಿದರು ಆ ನೀರನ್ನು ಸವಿದು ತಮ್ಮ ಶಾರೀರಿಕ ಶ್ರಮವನ್ನೆಲ್ಲ ಹೋಗಲಾಡಿಸಿಕೊಂಡರು. ಸಾವಕಾಶವಾಗಿ ಋಷ್ಯಮೂಕ ಪರ್ವತದ ಕಡೆಗೆ ಸಾಗಿದರು ಧನುರ್ಧರರೂ ಜಟಾವಲ್ಕಲ ಧಾರಿಗಳೂ ಆದ ರಾಮಲಕ್ಷ್ಮಣರನ್ನು ಸುಗ್ರೀವನು ತನ್ನ ಮಂತ್ರಿಗಳ ಸಹಿತ ವಾಗಿ ನೋಡಿದನು. ಅವರನ್ನು ನೋಡಿ ಭೀತನಾದ ಸುಗ್ರೀವನು ತನ್ನ ಮಂತ್ರಿಗಳಿಗೆ ಇಂತೆಂದನು - ಅಲ್ಲಿ ನೋಡಿರಿ ಆ ವೀರರನ್ನು ! ಬಹುಶಃ ವಾಲಿಯು ಅವರನ್ನು ಕಳುಹಿಸಿರಬೇಕು. ಹನುಮನೇ ನೀನು ವಟು ವೇಷ ಧರಿಸಿ ಅವರನ್ನು ನೋಡಿ ಬಾ ಅವರ ಹೃದಯವನ್ನು ಪರೀಕ್ಷಿಸು ಅವರು ನಿಷ್ಠುರಿಗಳಾದರೆ ಸಂಜ್ಞೆ ಮಾಡು ಸುಜನರಾದರೆ ಪ್ರೀತಿಯಿಂದ ನೋಡು ಆಗ ಹನುಮನು ವಟು ರೂಪ ತಾಳಿ ರಾಮನ ಮುಂದೆ ಸುಳಿದನು ಮತ್ತು ವಿನಯದಿಂದ ಬಂದು ರಾಮನಿಗೆ ಕೈ ಮುಗಿದು ನೀವು ಯಾರು ? ಶೌರ್ಯ ವಂತರಾದ ವಿಕ್ರಮಶಾಲಿಗಳಾಗಿದ್ದೀರಿ ಈ ಭೂಮಂಡಲವನ್ನು ಬೆಳಗುವ ತೇಜೋವಂತರಾಗಿದ್ದೀರಿ ನನ್ನನ್ನೇ ಕೇಳಿದರೆ ನೀವೇ ಮೂರುಲೋಕದ

ತೇಜೋವಂತರಾಗಿದ್ದೀರಿ ನನ್ನನ್ನೇ ಕೇಳಿದರೆ ನೀವೇ ಮೂರುಲೋಕದ ಕರ್ತೃಗಳೆಂಬುದನ್ನು ಬಲ್ಲೆ ನೀವೇ ಕಾರಣ ಪುರುಷರು ನೀವು ಮಾಯಾ ಮನುಜರಾಗಿ ಕಾಣುತ್ತಿದ್ದೀರಿ ನೀವು ಭೂಭಾರ ಹರಣಕ್ಕಾಗಿಯೋ ಭೂರಕ್ಷಣಕ್ಕಾಗಿಯೋ ಜನ್ಮತಾಳಿದವರಂತೆ ತೋರುತ್ತೀರಿ ನೀವು ನರನಾರಾಯಣ ಸ್ವರೂಪಿಗಳು ಎಂದು ತೋರುತ್ತದೆ ಎಂದನು

ಆಗ ರಾಮನು ತನ್ನ ತಮ್ಮನಿಗೆ ಇಂತೆಂದನು — ಲಕ್ಷ್ಮಣನೇ ಈತನ ವಿನಯಗುಣಗಳನ್ನು ನೋಡು ರೂಪವನ್ನು ನೋಡು ಈತ ವೇದ ವೇದಾಂಗಗಳನ್ನು ಬಲ್ಲವನಂತೆ ಕಾಣುತ್ತಾನೆ ಮಾತಿನಲ್ಲಿ ಅಪಶಬ್ದವಿಲ್ಲ, ನಂತರ ರಾಮನು ಹನುಮನ ಕಡೆಗೆ ತಿರುಗಿ ತನ್ನ ಪರಿಚಯ ಹೇಳಿಕೊಂಡ ನಾನು ದಶರಥ ಪುತ್ರ ರಾಮಚಂದ್ರ ಈತ ತನ್ನ ತಮ್ಮ ಲಕ್ಷ್ಮಣ ಸೀತೆಯೊಡನೆ ತಂದೆಯ ಆಜ್ಞಾನುಸಾರವಾಗಿ ವನಕ್ಕೆ ಬಂದೆವು ದಂಡಕಾವನದಲ್ಲಿದ್ದಾಗ ರಾವಣನು ಸೀತೆಯನ್ನು ಕದ್ದೊಯ್ದನು. ಆಕೆಯನ್ನು ಹುಡುಕುತ್ತ ಇಲ್ಲಿಗೆ ಬಂದೆವು. ಇನ್ನು ನಿನ್ನ ಪರಿಚಯವನ್ನು ಹೇಳು ಎಂದನು ಆಗ ವಟುವು ಹೇಳಿದನು- ನಾನು ಸುಗ್ರೀವ ಎಂಬ ರಾಜನ ಮಂತ್ರಿಯು ನಾವು ನಾಲ್ವರಿದ್ದೇವೆ. ಗಿರಿ ಶಿಖರವೇ ನಮ್ಮ ಮನೆ ವಾಲಿಯ ಚೇಷ್ಟೆಯನ್ನು ಸಹಿಸಲಾರದೆ ಇಲ್ಲಿದ್ದೇವೆ. ವಾಲಿಯು ಸುಗ್ರೀವನ ಭಾರ್ಯೆಯನ್ನು ಅಪಹರಿಸಿ ಸುಗ್ರೀವನನ್ನು ಕಿಷ್ಕಿಂಧೆಯಿಂದ ಹೊರಪಡಿಸಿದ್ದಾನೆ ಸುಗ್ರೀವ ಇಲ್ಲಿ ಮಂತ್ರಿಗಳೊಡನೆ ಕಾಲಕಳೆಯುತ್ತಿದ್ದಾನೆ. ನಾನು ವಾಯುಪುತ್ರ ನನ್ನ ತಾಯಿ ಅಂಜನಾ ದೇವಿ ನನ್ನ ಹೆಸರು ಹನುಮಂತ ನೀನು ಸುಗ್ರೀವನೊಡನೆ ಸಖ್ಯವನ್ನು ಬೆಳೆಸಿದ್ದಾದರೆ ಆತ ನಿನಗೆ ಸೀತಾದೇವಿಯನ್ನೊಯ್ದವನ ಕೊಲೆಗೆ ಸಹಾಯಮಾಡುವನು ಇದು ನಿನ್ನ ಮನಸ್ಸಿಗೆ ಒಪ್ಪಿಗೆಯಾದರೆ ಈಗಲೇ ಸುಗ್ರೀವನಿದ್ದಲ್ಲಿ ಹೋಗೋಣ ಎಂದು ಹೇಳಿ ತನ್ನ ನಿಜ ರೂಪವನ್ನು ತೋರಿಸಿದನು ಈಗ ನೀವಿಬ್ಬರೂ ನನ್ನ ಹೆಗಲನ್ನೇರಿರಿ ನಿಮ್ಮನ್ನು ಪರ್ವತಾಗ್ರಕ್ಕೆ ಕೊಂಡೊಯ್ದು ಸುಗ್ರೀವನ ಭೆಟ್ಟಿಮಾಡಿಸುವೆ ಎನಲು ಇಬ್ಬರೂ ಆತನ ಹೆಗಲನ್ನೇರಿದರು ಸುಗ್ರೀವನ ಬಳಿಗೆ ಬಂದನಂತರ ಸುಗ್ರೀವನಿಗೆ ರಾಮ ಲಕ್ಷ್ಮಣರ ವೃತ್ತಾಂತವನ್ನರುಹಿದನು. ರಾಮನಲ್ಲಿ ಬೇಗನೇ ಅಗ್ನಿ ಸಾಕ್ಷಿಯಾಗಿ ಗೆಳೆತನವನ್ನು ಬಯಸು ನಿನಗೆ ಒಳ್ಳೆಯದಾಗುವದು ಎಂದನು ಎಲ್ಲರೂ ಪರ್ಣಾಸನದ ಮೇಲೆ ಕುಳಿತಿರುವಾಗ ಲಕ್ಷ್ಮಣನು

ಸುಗ್ರೀವನಿಗೆ ತಮ್ಮ ವೃತ್ತಾಂತವನ್ನು ತಿಳಿಸಿದನು ಈ ವಿಷಯವನ್ನು ಕೇಳಿದ ಸುಗ್ರೀವ ಈ ರೀತಿ ಹೇಳಿದ-ನಾನು ಮಂತ್ರಿ ಸಹಿತವಾಗಿ ಶಿಖರಾಗ್ರದಲ್ಲಿರಲು ಯಾವನೋ-ಒಬ್ಬನು ಸ್ತ್ರೀಯೊಬ್ಬಳನ್ನು ಕೊಂಡೊಯ್ಯುತ್ತಿದ್ದ ಆಕೆರಾಮ ರಾಮಾ ಎಂದು ಹಲುಬುತ್ತಿದ್ದಳು. ನಮ್ಮನ್ನು ಕಂಡು ತನ್ನ ಆಭರಣಗಳೆಲ್ಲ ವನ್ನು ಕಳಚಿ ವಸ್ತ್ರದಲ್ಲಿ ಕಟ್ಟಿ ನಮ್ಮತ್ತ ಎಸೆದಳು ಅದನ್ನು ನಾನು ಕಾದಿಟ್ಟಿದ್ದೇನೆ ನೋಡು ಎನ್ನುತ್ತ ಆ ಆಭರಣಗಳ ಗಂಟನ್ನು ರಾಮನ ಮುಂದೆ ತಂದು ಇಟ್ಟನು ಅದನ್ನು ನೋಡಿ ಇದು ಸೀತೆಯದೇ ಆಭರಣ ನೋಡು! ಲಕ್ಷ್ಮಣಾ ಎನ್ನುತ್ತ ಹಳಹಳಿಸಿ ದುಃಖಿಸತೊಡಗಿದ ದುಃಖವನ್ನು ಕಡಿಮೆ ಮಾಡಿಕೊಂಡು ನಾವು ಸುಗ್ರೀವನ ಸಹಾಯದಿಂದ ರಾವಣನನ್ನು ಕೊಂದು ಸೀತೆಯನ್ನು ತರೋಣ ಎಂದು ಲಕ್ಷ್ಮಣನಿಗೆ ಹೇಳಿದನು ಸುಗ್ರೀವ ರಾಮರು ಪ್ರತಿಜ್ಞೆ ಮಾಡಿದರು ಇಬ್ಬರೂ ಸಖ್ಯವನ್ನು ಪಡೆದರು. ವಾಲಿಯು ದುಷ್ಕೃತ್ಯವನ್ನು ಸುಗ್ರೀವ ವಿವರಿಸತೊಡಗಿದ ಮಯಸುತನಾದ ಮಾಯಾವಿ ಎಂಬ ದಾನವನು ಒಮ್ಮೆ ಕಿಷ್ಕಿಂಧಾ ಪಟ್ಟಣಕ್ಕೆ ಬಂದ ವಾಲಿಯನ್ನು ಯುದ್ಧಕ್ಕೆ ಕರೆದ ಭಯಂಕರವಾದ ಯುದ್ಧ ಜರುಗಿತು. ಮಾಯಾವಿ ಹೆದರಿ ಓಡುತ್ತ ಒಂದು ಗುಹೆಯನ್ನು ಹೊಕ್ಕ ಬಾಲಿಯೂ ಆತನನ್ನು ಬೆನ್ನಟ್ಟಿದ ನಾನೂ ಸಹ ಅತನ ಸಂಗಡ ಬಿಲವನ್ನು ಹೊಗಲು ಪ್ರಯತ್ನಿ ಸುತ್ತಿರುವಾಗಲೇ ನನ್ನನ್ನು ತಡೆದು ನೀನಿಲ್ಲಿರು ನಾನು ಅವನನ್ನು ಕೊಂದು ಬರುತ್ತೇನೆ ಎಂದು ಗುಹೆಯನ್ನು ಹೊಕ್ಕ. ತಿಂಗಳುಗಳು ಕಳೆದವು ಗುಹೆಯ ಬಾಗಿಲಿಗೆ ರಕ್ತದ ಹೊಳೆ ಹರಿದು ಬಂತು ಬಹುಶಃ ಬಾಲಿ ಮಡಿದ ಎಂದು ತಿಳಿದು ದುಃಖದಿಂದ ಗುಹೆಯ ಬಾಗಿಲಿಗೆ ದೊಡ್ಡ ಬಂಡೆಗಲ್ಲಿಕ್ಕಿ ಬಂದೆನು ಮತ್ತು ಎಲ್ಲ ವೃತ್ತಾಂತವನ್ನು ಪುರಜನರಿಗೆ ತಿಳಿಸಿದೆ ಅವರು ನನಗೆ ಪಟ್ಟ ಗಟ್ಟಿದರು. ಕೆಲವುಕಾಲ ಕಳೆದ ಮೇಲೆ ಬಾಲಿ ಆ ಬಿಲದಿಂದ ಹೊರಟು ಬಂದ ಸಿಟ್ಟಿನಿಂದ ನನಗೆ ಘಾತಿಸಿದ. ಆತನ ಹೊಡೆತ ತಾಳಲಾರದೆ ಈ ಋಷ್ಯಮೂಕ ಪರ್ವತಕ್ಕೆ ಓಡಿಬಂದೆ ಋಷಿಯ ಶಾಪದ ಕಾರಣದಿಂದ ಬಾಲಿ ಇಲ್ಲಿಗೆ ಬರುವದಿಲ್ಲ. ನನ್ನ ಹೆಂಡತಿಯನ್ನು ಸಹ ಕದ್ದೊಯ್ದ. ಇಂದು ನಿನ್ನ ದರುಶನದಿಂದ ಸಂತೋಷಿತನಾದೆ. ನನ್ನ ಶೋಕವನ್ನು ನೀನೇ ಬಲ್ಲೆ. ಆಗ ರಾಮನೆಂದ-ನಿನ್ನ ಹೆಂಡತಿಯನ್ನು ಕದ್ದೊಯ್ದವನನ್ನು ಕೊಲ್ಲು ವದಕ್ಕೆ ನನ್ನ ಸಹಾಯವಿದೆ. ನನಗೆ ಯಾವ ಕಾರ್ಯ ತಿಳಿಸು.

ಒಮ್ಮೆ ಸ್ಥೂಲಕಾಯದ ಬಲಶಾಲಿಯಾದ ದುಂದುಭಿ ಎಂಬ ದಾನವನು ಬಾಲಿಯೊಡನೆ ಯುದ್ಧಕ್ಕೆ ಬಂದ ಯುದ್ಧದಲ್ಲಿ ಅವನನ್ನು ಕೊಂದು ಆತನ ದೇಹವನ್ನು ಮುದ್ದೆ ಮಾಡಿ ಹೊರಕ್ಕೆ ಎಸೆದು ಅದು ಈ ಮತಂಗಾಶ್ರಮದ ಸಮೀಪ ಬಿತ್ತು. ಮುನಿಯ ಆಶ್ರಮದಲ್ಲೆಲ್ಲ ರಕ್ತದ ಓಕುಳಿಯಾಯಿತು. ಇದರಿಂದ ಸಿಟ್ಟಿಗೆದ್ದ ಮತಂಗ ಋಷಿಯು ಆತನಿಗೆ ಶಾಪವಿತ್ತ-ಬಾಲಿ ಇಲ್ಲಿಗೆ ಬಂದರೆ ತಲೆಯೊಡೆದು ಸಾಯಲಿ ಎಂದು ಅದನ್ನು ತಿಳಿದೇ ನಾನು ಇಲ್ಲಿ ಇದ್ದೇನೆ ಪರ್ವತೋಪಮವಾದ ಆತನ ಶಿರ ದೇಹ ಇಲ್ಲಿದೆ ನೋಡು. ನೀನು ಇದನ್ನು (ಮೊಗಚಿದ್ದೇ) ಕದಲಿಸಿದ್ದೇ ಆದರೆ ನೀನು ಬಾಲಿಯನ್ನು ಕೊಲ್ಲಲು ಸಮರ್ಥ ಎಂದನು ಆಗ ರಾಮನು ತನ್ನ ಪಾದಾಂಗುಷ್ಠದಿಂದ ಅದನ್ನು ಹತ್ತು ಯೋಜನ ದೂರ ಎಸೆದನು. ನಂತರ ಇಲ್ಲಿ ಬೆಳೆದಿರುವ ಏಳು ತಾಳೆಮರಗಳಿವೆ. ಅವನ್ನು ಒಂದೇ ಬಾಣದಿಂದ ತುಂಡರಿಸಬೇಕು. ಎನ್ನಲು ರಾಮನು ಒಂದೇ ಬಾಣದಿಂದ ಅದನ್ನು ತುಂಡರಿಸಿದನು ಸುಗ್ರೀವನಿಗೆ ಸಮಾಧಾನವಾಯಿತು ರಾಮನನ್ನು ನಾನಾ ರೀತಿಯಿಂದ ಹೊಗಳಿದ. ನನ್ನ ಪೂರ್ವಜನ್ಮದ ಸುಕೃತದಿಂದಲೇ ನಿನ್ನ ಸಮಾಗಮವಾಯಿತು. ನನ್ನ ಭಾಗ್ಯಕ್ಕೆ ಸರಿಯೇ ಇಲ್ಲ ಎಂದನು ನನಗೆ ನಿನ್ನ ಸ್ವರೂಪದ ಪರಿಚಯ ಮಾಡಿಕೊಡು. ತತ್ವಜ್ಞಾನವನ್ನೂ ತಿಳಿಸು. ನಿನ್ನಲ್ಲಿ ಶತ್ರು ಮಿತ್ರರು ಎಂಬ ಭೇದವಿಲ್ಲ. ನಾನು ನಿನ್ನ ಮಾಯಾ ಬಂಧದಲ್ಲಿ ಸಿಲುಕಿದ್ದೇನೆ. ನಿನ್ನ ಧ್ಯಾನದಲ್ಲಿಯೇ ನನ್ನ ಮನವನ್ನು ನಿಲ್ಲಿಸಲು ಪ್ರಯತ್ನಿಸುತ್ತೇನೆ ನಾನು ನಿನ್ನ ಸೇವಕ. ನಿನ್ನ ಸೇವೆ ಮಾಡಲು ಇಚ್ಛಿಸುತ್ತೇನೆ. ನಿನಗೆ ಪುನಃಪುನಃ ನಮಸ್ಕರಿಸುತ್ತೇನೆ ಎಂದನೆಂಬಲ್ಲಿಗೆ ಮೂವತ್ತನೆಯ ಸಂಧಿ ಮುಗಿಯಿತು.

ಮೂವತ್ತೊಂದನೆಯ ಸಂಧಿ : ಎಲೈ ಪಾರ್ವತಿಯೇ ಶ್ರೀ ರಾಮಚಂದ್ರನ ಮುಂದಿನ ಕಥೆಯನ್ನು ಕೇಳುವಂಥವಳಾಗು.

ರಾಮನ ಬಗ್ಗೆ ಇರುವ ಸಂಶಯವೆಲ್ಲ ದೂರವಾಗಲು ಸುಗ್ರೀವನು ಅಗ್ನಿ ಸಾಕ್ಷಿಕವಾಗಿ ಆತನ ಗೆಳೆತನವನ್ನು ಮಾಡಿದನು. ರಾಮನು ಸುಗ್ರೀವನೊಡನೆ ಹೀಗೆಂದನು.ವಾಲಿಯನ್ನು ಯುದ್ಧಕ್ಕೆ ಕರೆ ಎಂದು ಆತನನ್ನು ಪ್ರೇರೇಪಿಸಿ ಕಳುಹಿಸಿಕೊಟ್ಟನು. ತಮ್ಮನ ಪೌರುಷದ ವಾಕ್ಯವನ್ನು ಕೇಳಿ ವಾಲಿಯು ಕ್ರುದ್ಧನಾದನು. ಮತ್ತು ಯುದ್ಧಕ್ಕೆ ಹೊರಟನು. ಇಬ್ಬರೂ ಘನಘೋರ ಕಾಳಗವನ್ನು ಮಾಡಿದರು. ಇಬ್ಬರ ರೂಪವೂ ಒಂದೇ ಆದುದರಿಂದ ರಾಮನು

ವಿಸ್ಮಯಪಟ್ಟು ಮುಂದೇನು ಮಾಡುವದೆಂದು ತಿಳಿಯದೆ ಸುಮ್ಮನೆ ನಿಂತನು ವಾಲಿಯ ಹೊಡೆತವನ್ನು ತಾಳಲಾರದೆ ಸುಗ್ರೀವ ತನ್ನ ಗಿರಿಗೆ ಓಡಿದ ರಾಮನನ್ನು ಕಂಡು ತನ್ನ ದುಃಖವನ್ನು ತೋಡಿಕೊಂಡ ಬಾಲಿಯೊಡನೆ ಯುದ್ಧ ಮಾಡಿಸುವದಕ್ಕಿಂತ ನೀನೇ ನನ್ನನ್ನು ಖಡ್ಗದಿಂದ ಕೊಂದುಬಿಡು ನಿನ್ನನ್ನು ಶರಣಾಗತ ರಕ್ಷಕ ಎಂದು ನಂಬಿಕೆಟ್ಟೆ. ಆಗ ರಾಮ ಹೇಳಿದ್ದೇನೆಂ. ದರೆ–ಹೆದರಬೇಡ. ನಿಮ್ಮಿಬ್ಬರ ಭೇದ ತಿಳಿಯದೆ ಒಂದೇ ರೂಪಿನಿಂದಿರುವ ನಿಮ್ಮನ್ನು ನೋಡಿ ಸುಮ್ಮನೆ ನಿಂತೆ ಈಗ ನಿನ್ನ ಗುರುತು ತಿಳಿಯುವಂತೆ ಮಾಡಿ ಕಳುಹುವೆ. ವಾಲಿಯನ್ನು ಇನ್ನೊಮ್ಮೆ ಯುದ್ಧಕ್ಕೆ ಕರೆ ನನ್ನ ಶಪಥವನ್ನು ಪೂರ್ತೈಸಿಯೇ ತೀರುತ್ತೇನೆ. ಕೂಡಲೇ ಲಕ್ಷ್ಮಣನನ್ನು ಕರೆದು ಈತನ ಕೊರಳಿಗೆ ಒಂದು ಹೂಮಾಲೆಯನ್ನು ತೊಡಿಸು ಎಂದು ಹೇಳಿ ಆತನಿಗೆ ಪುಷ್ಪ ಮಾಲೆಯನ್ನು ಹಾಕಿಸಿದನು ಮತ್ತೊಮ್ಮೆ ಪುನಃ ಸುಗ್ರೀವನನ್ನು ಯುದ್ಧಕ್ಕೆ ಕಳುಹಿದನು. ಪುನಃ ಬಂದ ಸುಗ್ರೀವನ ದನಿಯನ್ನು ಕೇಳಿ ವಾಲಿ ವಿಸ್ಮಿತನಾದ. ಕ್ರೋಧದಿಂದ ಯುದ್ಧಕ್ಕೆ ಹೊರಡುವ ವಾಲಿಯನ್ನು ಆತನ ಹೆಂಡತಿ ತಡೆದು ಇಂತೆಂದಳು ಸೋತು ಓಡಿದ ಸುಗ್ರೀವ ಪುನಃ ಬರಬೇಕಾದರೆ ಈತನಿಗೆ ಯಾರದೋ ಸಹಾಯವುಂಟೆಂದು ತೋರುತ್ತದೆ. ಈಗ ಹೋಗುವದು ಬೇಡ. ವಾಲಿ ಕೇಳದೇ ಯುದ್ಧಕ್ಕೆ ಹೊರಟ. ಆದರೂ ಆಕೆ ತಡೆದು ರಾಮ ಬಂದಿರುವ ಸಂಗತಿಯನ್ನೂ ಇಬ್ಬರೂ ಅಗ್ನಿ ಸಾಕ್ಷಿಕ–ವಾಗಿ ಗೆಳೆಯರಾದುದನ್ನೂ ಹೇಳಿದಳು. ಅವರು ನಿನ್ನನ್ನು ನಿಶ್ಚಯವಾಗಿ ಕೊಲ್ಲುವರು ಈಗ ಹೋಗುವದು ಬೇಡ. ಸುಗ್ರೀವನೊಡನೆ ಗೆಳೆತನ ಬಯಸಿ ಆತನನ್ನು ಕರೆಸಿ ಅವನಿಗೆ ರಾಜ್ಯ ನೀಡು ರಾಮನ ಗೆಳೆತನ ಬಯಸು ಆದರೆ ತಾರೆಯ ಮಾತನ್ನು ಬಾಲಿ ಕೇಳಲಿಲ್ಲ ರಾಮ ಬಂದಿರುವ ಸಂಗತಿ ತಿಳಿದ ಮೇಲೆ ಸುಮ್ಮನಿರುವದು ತರವಲ್ಲ. ರಾಮ ಸಾಕ್ಷಾತ್ ನಾರಾಯಣನು ರಾಕ್ಷಸರ ಸಂಹಾರಕ್ಕಾಗಿ ಈ ಭುವಿಯ ಮೇಲೆ ಅವತರಿಸಿದ್ದಾನೆ. ಎಂಬದನ್ನು ಕೇಳಿದ್ದೇನೆ ಅವನ ಭೀತಿ ನನಗೆ ಯಾಕೆ ? ಆತ ನನ್ನು ಕರೆತಂದು ನನ್ನ ಶರೀರವನ್ನು ಆತನ ಪಾದತಲಕ್ಕರ್ಪಿಸುವೆ. ಅವನು ಭಕ್ತವತ್ಸಲ. ಸುಗ್ರೀವನೇ ಯುದ್ಧಕ್ಕೆ ಕರೆಯಬಂದಾಗ ಹೋಗದೇ ಇರುವದು ಶೂರನಾದ ನನಗೆ ತರವಲ್ಲ ಎಂದು ಆಕೆಯನ್ನು ಸಮಾಧಾನಪಡಿಸಿ ಯುದ್ಧಕ್ಕೆ ಹೊರಟ. ಕಾಲಗತಿಯನ್ನು ಮೀರಲು ಯಾರಿಂದಲೂ

ಶಕ್ಯವಿಲ್ಲ ಎಂದು ತಾರೆ ಹಳಹಳಿಸಿದಳು. ಇತ್ತ ವಾಲಿ ತಮ್ಮನೊಡನೆ ಯುದ್ಧಕ್ಕೆ ಅಣಿಯಾದ ಮುಷ್ಟಾ ಮುಷ್ಟಿ ಹೊಡೆದಾಡಿದರು. ರಾಘವನು ಯುದ್ಧವನ್ನು ವೀಕ್ಷಿಸುತ್ತಿದ್ದನು. ಸುಗ್ರೀವನು ರಾಮನ ಕಡೆಯೇ ನೋಡುತ್ತ ಹೋರಾಡುತ್ತಲಿದ್ದನು ರಾಮನು ಕಾಣದ ಹಾಗೆ ವೃಕ್ಷದ ಬುಡದಲ್ಲಿ ನಿಂತು ವಾಲಿಗೆ ಕೂರಲಗು ಬಿಟ್ಟನು ವಾಲಿಯ ವಕ್ಷಕ್ಕೆ ಬಾಣ ತಾಗಲು ಆತ ಧರೆಗೆ ಬಿದ್ದ ಮೂರ್ಛಿತನಾದ ಕ್ಷಣದಲ್ಲಿ ಎಚ್ಚತ್ತ. ಎದುರಿಗೆ ನಿಂತಿರುವ ಯೋಗಿ ಹೃದಯಾಂತರ್ಗತನಾದ ಆ ಪರಮಾತ್ಮನನ್ನು ಕಂಡ ಚಿರ ವಸನದಿಂದ ಜಟಾಮುಕುಟಧರನಾದ ಸುಂದರಾಂಗನಾದ ರಾಮನ ಮನೋಹರ ರೂಪವನ್ನು ಕಂಡು ರಾಮನ ಕಡೆ ನೋಡಿ ಹೇಳಿದ ನಾನು ನಿನಗೆ ಮಾಡಿದ ಕೆಡುಕೇನು ? ಬರಿದೇ ನನ್ನನ್ನು ಕೊಂದೆ ಧರ್ಮಪಥವನ್ನು ನೀನು ಬಿಟ್ಟೆ ಮರೆಯಲ್ಲಿ ನಿಂತು ಹೊಡೆದೆ ಕಾರಣವೇನು ? ನಿನ್ನ ಕೀರ್ತಿಗೆ ಕಲಂಕ ತಂದುಕೊಂಡೆ. ಸುಗ್ರೀವನ ಕಡೆ ತಿರುಗಿ ಹೇಳಿದ. ಮುಂಡೆ ಬಸಿರಾದಳು ಎಂದು ತಿಳಿದು ಮುತ್ತೈದೆಯನ್ನು ಹೊಡೆದ ರೀತಿಯಾಯ್ತು ನಿನ್ನ ನಡತೆ ! ರಾಮನ ಕಡೆ ತಿರುಗಿ ನಾನೇ ರಾವಣನನ್ನು ಕುಲಸಹಿತ ಬಂಧಿಸಿ ಸೀತೆಯನ್ನು ತರುತ್ತಿದ್ದೆ. ಧರ್ಮಿಷ್ಠನಾದ ನೀನು ವಾನರನಾದ ನನ್ನನ್ನು ಕೊಂದು ಏನು ಸಾರ್ಥಕ ಮಾಡಿದಂತಾಯ್ತು ವಾನರನ ಮಾಂಸವಾದರೂ ಕೂಡ ತಿನ್ನಲು ಯೋಗ್ಯವಲ್ಲ. ಎಂದಿತ್ಯಾದಿಯಾಗಿ ವಾಲಿಯು ರಾಮನನ್ನು ಧಿಕ್ಕರಿಸುತ್ತಿರಲು ರಾಮ ನುಡಿದ. ನಾನು ಲೌಕಿಕ ಧರ್ಮಕ್ಕೆ ಯೋಗ್ಯವಾದ ಬಿಲ್ಲು ಬಾಣಗಳನ್ನು ಧರಿಸಿದ್ದೇನೆ. ಅನ್ಯಾಯನಿರತರನ್ನು ಶಿಕ್ಷಿಸುವದೇ ನನ್ನ ಕೆಲಸ ಭ್ರಾತೃವಿನ ಹೆಂಡತಿಯನ್ನು ರಮಿಸುವ ನಿನ್ನನ್ನು ಶಿಕ್ಷಿಸಬೇಕಾದದ್ದು ಯೋಗ್ಯ. ಧರ್ಮಬಾಹಿರರನ್ನು ಕೊಲ್ಲಬೇಕಾದದ್ದೇ. ಕಾರಣ ನಿನ್ನನ್ನು ಕೊಂದಿದ್ದೇನೆ ಮಹಾತ್ಮರಾದವರು ಈ ಭೂಮಿಯನ್ನು (ಪವಿತ್ರ) ಪಾವನವನ್ನಾಗಿ ಮಾಡುವರು. ಆಗ ರಾಮನ ಮಾತನ್ನು ಕೇಳಿ ಆತನೇ ಪರಮಾತ್ಮನೆಂದು ತಿಳಿದು ನಿನ್ನ ನಿಜವನ್ನರಿಯದೇ ತಪ್ಪು ಮಾತನಾಡಿದೆ ಕ್ಷಮಿಸು ನನ್ನ ದೋಷವನ್ನೆಣಿಸಬೇಡ ಕರುಣಾವಾರಿಧಿಯಾದ ನಿನ್ನನ್ನು ಈ ಕಣ್ಣುಗಳಿಂದಲೇ ಕಣ್ತುಂಬ ನೋಡುತ್ತಿದ್ದೇನೆ. ಮರಣ ಕಾಲದಲ್ಲಿ ನಿನ್ನ ನಾಮಾಕ್ಷರಗಳನ್ನು ಹೇಳಿದವನೇ ಮುಕ್ತಿ ಪಡೆಯಬಲ್ಲ ಆದರೆ ಸಾಕ್ಷಾತ್ ನೀನೇ ಮುಂದೆ ನಿಂತಿರುವಾಗ ಇನ್ನೇನು ? ಆ

ಮಂಗಳಮೂರ್ತಿಯಾದ ಶ್ರೀ ರಾಮನನ್ನು ನೋಡಿ "ಓಂ ನಮಃ ಶಿವಾಯ" ಎಂದು ಕಣ್ಣು ಮುಚ್ಚಿದ. ಹುಟ್ಟಿದವನಿಗೆ ಮರಣ ತಪ್ಪಿದ್ದಲ್ಲ ರಾಘವನೆ ಎದುರಿಗೇ ಮರಣ ಬಂದದ್ದು ನನ್ನ ಸುಕೃತ. ನನ್ನ ಶರೀರದಲ್ಲಿ ನಟ್ಟಿರುವ ಈ ಬಾಣ ತೆಗೆ ಎನ್ನಲು ರಾಮ ಬಾಣ ತೆಗೆದ. ಆತನ ಶರೀರ ಸ್ಪರ್ಶಿಸಿದ. ವಾಲಿ ದಿವ್ಯ ದೇಹವನ್ನು ಪಡೆದು ಅಂತರಿಕ್ಷಕ್ಕೇರಿದ. ಆತ ಪರಮಗತಿಯನ್ನು ಪಡೆದನೆಂಬಲ್ಲಿಗೆ ಈ ಸಂಧಿ ಮುಕ್ತಾಯವಾಗುತ್ತದೆ

ಮೂವತ್ತೆರಡನೆಯ ಸಂಧಿ : ನಗಾಧಿರಾಜನ ಮಗಳಾದ ಪಾರ್ವತಿಯೇ ಇನ್ನು ಮುಂದಿನ ಕಥೆಯನ್ನು ಸಾನಂದದಿಂದ ಕೇಳುವವಳಾಗು

ವಾಲಿಯು ಮಡಿದುದನ್ನು ತಿಳಿದು ಉಳಿದ ಕಪಿಗಳು ಭಯದಿಂದ ಕಿಷ್ಕಿಂಧೆಗೆ ಓಡಿದರು ತಾರೆಗೆ ವಿಷಯವನ್ನೆಲ್ಲ ಸವಿಸ್ತಾರವಾಗಿ ತಿಳಿಸಿದರು ಅಂಗದನ ರಕ್ಷಣೆಯ ಜವಾಬ್ದಾರಿ ನಿನ್ನದು. ಪಟ್ಟದ ರಕ್ಷಣೆ ನಿನ್ನದು. ಅಂಗದನಿಗೆ ಪಟ್ಟಗಟ್ಟಿ ಇತ್ಯಾದಿಯಾಗಿ ಹೇಳಿದರು ವಾಲಿಯ ಮರಣದ ವಾರ್ತೆಯನ್ನು ಕೇಳಿದ ಆಕೆ ಮೂರ್ಛಿತಳಾದಳು. ಇನ್ನು ರಾಜ್ಯವೇತಕ್ಕೆ ? ತನಗೆ ಸಹಗಮನವೇ ಯೋಗ್ಯವೆನ್ನುತ್ತ ಪತಿಯ ಶವದೆಡೆಗೆ ಓಡಿದಳು ಪತಿಯ ಶವವನ್ನು ಕಾಣುತ್ತಲೇ ತಕ್ಕೈಸಿ ಘೋಳಿಡತೊಡಗಿದಳು ಎಲೈ ರಾಮನೇ ವಾಲಿಯನ್ನು ಕೊಂದಂತೆ ನನ್ನನ್ನೂ ಕೊಲ್ಲು ಆತನೊಡನೆ ನಾನೂ ಸ್ವರ್ಗಕ್ಕೈದುವೆ. ಇಲ್ಲಿ ಲವಲೇಶವಾದರೂ ನನಗೆ ಸುಖವಿಲ್ಲ. ರಾಜ್ಯವನ್ನು ಸುಗ್ರೀವನಿಗೆ ಕೊಡು. ಸುಗ್ರೀವನನ್ನು ಕುರಿತು-ನಿನ್ನ ಹೆಂಡತಿಯೊಡಗೂಡಿ ಸುಖದಿಂದ ರಾಜ್ಯವಾಳು ಎಂದು ಹೇಳಿದಳು ಮಹಾಮಹಿಮನಾದ ಶ್ರೀ ರಾಮನು ದುಃಖಿತಳಾದ ಆಕೆಯನ್ನು ಸಂತವಿಸುತ್ತ ಹೇಳಿದನು ಆವಳಿಗೆ ತತ್ವಜ್ಞಾನೋಪದೇಶ ಮಾಡಿದನು. ದೇಹವೇ ಪತಿಯೆಂದು ತಿಳಿಯಬೇಡ. ಇದು ಪಂಚಭೌತಿಕವಾದದ್ದು ಇದು ಕಾಲಾಧೀನವಾದದ್ದು. ಕಾಲ ಕಳೆದ ಕೂಡಲೇ ಪಂಚಭೌತಿಕದಲ್ಲೇ ಲೀನವಾಗತಕ್ಕದ್ದು ಇದಕ್ಕೆ ದುಃಖಿಸುವದು ತರವಲ್ಲ ಜೀವಾತ್ಮ ಪುರುಷನೂ ಅಲ್ಲ ಸ್ತ್ರೀಯೂ ಅಲ್ಲ. ಈತನು ಸರ್ವಗತ ಸರ್ವಶಕ್ತ ; ನಿರ್ವಿಶೇಷ ; ಯಾವುದರ ಲವಲೇಶವೂ ಈತನಿಗೆ ಅಂಟುವದಿಲ್ಲ ಈತ ಅಚಲ ಶುದ್ಧ ಬುದ್ಧ ಸುಖಮಯನು. ನಿನ್ನ ದೇಹಾಭಿಮಾನವನ್ನು ಬಿಡು ಈ ಮಾಯಾ ಮೋಹವನ್ನು ತ್ಯಜಿಸು ಇತ್ಯಾದಿಯಾಗಿ ಜೀವಾತ್ಮರ

ಸಂಬಂಧವನ್ನು ಮಾಯಾ ಸ್ವರೂಪವನ್ನು ತಾರೆಗೆ ತಿಳಿಸುತ್ತಾನೆ. ನೀನು ಭಕ್ತಿಮಾರ್ಗವನ್ನನುಸರಿಸಿ ಸೇವಾಭಾವದಿಂದಿರು ಕಡೆಯಲ್ಲಿ ಸಂಶಯವಿಲ್ಲದೇ ನಿನಗೆ ಮುಕ್ತಿ ದೊರಕುವದು. ಅನ್ಯಭಾವವನ್ನು ಬಿಟ್ಟು ನನ್ನನ್ನೇ ಧ್ಯಾನಿಸು ನನ್ನ ನಿಜರೂಪವನ್ನು ತಿಳಿ ಹೀಗೆ ರಾಮನು ಅವಳಿಗೆ ಆತ್ಮತತ್ವವನ್ನು ಬೋಧಿಸಿದನು ತಾರೆ ಇದನ್ನೆಲ್ಲ ಕೇಳಿ ಸಮಾಧಾನಪಟ್ಟಳು ಮತ್ತು ಮನಸ್ಸನ್ನು ಪರಮಾತ್ಮನಲ್ಲಿಯೇ ನೆಲಸುವಂತೆ ಮಾಡಲು ಪ್ರಯತ್ನಿಸಿದಳು ರಾಮನು ಸುಗ್ರೀವನಿಗೆ ಈ ರೀತಿ ಆಜ್ಞಾಪಿಸಿದನು-ನೀನು ನಿನ್ನ ಅಣ್ಣನ ಶವ ಸಂಸ್ಕಾರವನ್ನು ಯೋಗ್ಯ ರೀತಿಯಲ್ಲಿ ರಾಜೋಪಚಾರದಿಂದ ನಡೆಸು. ನಂತರ ಸುಗ್ರೀವನು ರಾಮನ ಕುರಿತು– ನೀನು ಈ ಕಿಷ್ಕಿಂಧಾ ರಾಜ್ಯವಾಳು. ನಾನು ನಿನ್ನ ಸೇವಕನಾಗಿ ದಿನ ಕಳೆಯುತ್ತೇನೆ ಎನ್ನಲು ರಾಮನೆಂದನೇ ನೆಂದರೆ–ನನ್ನ ಆಜ್ಞೆಯ ಪ್ರಕಾರ ಕಿಷ್ಕಿಂಧೆಯ ರಾಜ್ಯ ವಹಿಸಿಕೋ ಅಂಗದ ನಿಗೆ ಯುವರಾಜ ಪದವಿ ಕಟ್ಟು. ರಾಜ್ಯಭಾರ ನಡೆಸು ನಾನು ತಂದೆಯ ಆಣತಿಯ ಪ್ರಕಾರ ಪುರಪ್ರವೇಶ ಮಾಡ(ಬಾರದು)ಲಿಕ್ಕಿಲ್ಲ ಲಕ್ಷ್ಮಣನನ್ನು ಕರಕೊಂಡು ಹೋಗು. ನಾನು ಇಲ್ಲಿಯೇ ಇರುತ್ತೇನೆ.

ಲಕ್ಷ್ಮಣನು ರಾಮನೆಂದಂತೆ ಸುಗ್ರೀವನಿಗೆ ಪಟ್ಟ ಕಟ್ಟಿ ರಾಜ್ಯಭಾರ ವನ್ನು ವಹಿಸಿಕೊಟ್ಟ. ಅಂಗದನಿಗೆ ಯುವರಾಜ ಪದವಿ ಪಟ್ಟ ಕಟ್ಟಿದ ನಂತರ ಅಣ್ಣನ ಬಳಿಗೆ ಬಂದು ನಿಂತನು. ಆ ಪ್ರವರ್ಷಣ ಗಿರಿಯಲ್ಲಿ ಉತ್ತಮವಾದದ್ದೊಂದು ಗುಹೆಯನ್ನು ಹುಡುಕಿಕೊಂಡು ಅಲ್ಲಿ ವಾಸಿಸಲು ನಿಶ್ಚಯಿಸಿದರು. ಹಾಗೂ ಶ್ರೀ ರಾಮನು ಅಲ್ಲಿಯೇ ವಾಸವಾದಿದನು ಎಂಬಲ್ಲಿಗೆ ಈ ಸಂಧಿ ಮುಗಿಯುತ್ತದೆ.

**ಮೂವತ್ತೊಮ್ಮರನೆಯ ಸಂಧಿ :** ಪಾರ್ವತಿಯೇ ಮುಂದಿನ ಕಥಾಭಾಗ ವನ್ನು ಕೇಳುವಂಥವಳಾಗು ಎಂದು ಮುಂದಿನ ಕಥೆಯನ್ನು ಹೇಳಲು ಪಕ್ರಮಿಸಿದನು.

ಮಳೆಗಾಲವನ್ನು ಆ ಪ್ರವರ್ಷಣ ಗಿರಿಯಲ್ಲಿಯೇ ಕಳೆಯಲು ನಿಶ್ಚ ಯಿಸಿ ಶ್ರೀ ರಾಮನು ಅಲ್ಲಿಯ ಗುಹೆಯಲ್ಲಿ ವಾಸವಾಗಿದ್ದನು. ಆ ಗುಹೆಯ ಸಮೀಪದಲ್ಲಿಯೇ ರುಚಿಕರವಾದ ಪಣ್ಣಲ ಕಂದಮೂಲಗಳೆಲ್ಲವೂ ಬಹಳ ವಾಗಿದ್ದವು ಅವುಗಳನ್ನು ಸೇವಿಸುತ್ತ ಸೀತೆಯ ನೆನಪಿನಲ್ಲಿಯೇ ನೆಲಸಿರಲು

ಮಳೆಗಾಲವು ತಲೆದೋರಿತು ರಾಮನು ಆ ವರ್ಷಾಕಾಲದ ಸೊಬಗನ್ನು ನೋಡುತ್ತ ದಿನಗಳೆಯುತ್ತಿದ್ದನು ರಾಮನು ಹೀಗೆ ಕಾಲಕಳೆಯುತ್ತಿರಲು ಸಿದ್ಧಗಣಗಳೆಲ್ಲ ಪಶು ಪಕ್ಷಿಗಳ ರೂಪದಲ್ಲಿ ಅಲ್ಲಿಗೆ ಬಂದು ರಾಮನನ್ನು ಸೇವಿಸತೊಡಗಿದವು. ಈ ರೀತಿ ಕಾಲಕಳೆಯುತ್ತಿರಲು ಒಂದು ದಿನ ಲಕ್ಷ್ಮಣನು ರಾಮನಲ್ಲಿ ಒಂದು ಬಿನ್ನಹ ಮಾಡಿದನು ಏನೆಂದರೆ-ನನಗೆ ತತ್ವಜ್ಞಾನದ ಮಾರ್ಗವನ್ನು ತಿಳಿಸಿಕೊಡಬೇಕು ನನ್ನ ಮನದ ಸಂಶಯವೆಲ್ಲ ದೂರ-ವಾಗುವಂತಾಗಬೇಕು. ಆತ್ಮಜ್ಞಾನವಾಗಬೇಕು ಇದನ್ನು ತಿಳಿಯುವ ಇಚ್ಛೆಯಾಗಿದೆ. ಅನಾದಿಯೂ ಅಪೌರುಷೇಯವೂ ಆದ ಆತ್ಮಜ್ಞಾನವನ್ನು ಬೋಧಿಸಬೇಕು ಎಂದು ಕೇಳಿಕೊಂಡನು ನಿನ್ನ ಪೂಜೆಯೇ ಮುಕ್ತಿಗೆ ಸಾಧನ, ನಾರದ, ವ್ಯಾಸ, ಕಮಲಜ ಮೊದಲಾದವರು ನಿನ್ನನ್ನು ಪೊಗಳುವರು. ಎಲೈ ರಘುನಾಥನೇ ನಿನ್ನ ಪೂಜಾರಾಧನೆಯ ಕ್ರಮವೇನು ? ಸ್ತ್ರೀ ಶೂದ್ರಾದಿಗಳಿಗೂ ಸಹ ಉತ್ತಮವಾದ ಮುಕ್ತಿಯನ್ನು ಪಡೆಯಲು ಸುಲಭವಾದ ಸಕಲವೇದದ ಸಾರವಾದದ್ದನ್ನು ನಿನ್ನನುಜನಾದ ನನಗೆ ಅರುಹಬೇಕೆಂದು ಕೇಳಿಕೊಂಡು ಆತನ ಚರಣದಲ್ಲಿ ನತಮಸ್ತಕನಾದನು.

ಇದನ್ನು ಕೇಳಿದ ಶ್ರೀ ರಾಮನು ಅತ್ಯಂತ ಸಂತೋಷಗೊಂಡನು ಎಲೈ ತಮ್ಮನೇ ಇದನ್ನು ನಿನಗೆ ಸಂಕ್ಷೇಪಮಾತ್ರದಲ್ಲಿ ವಿವರಿಸುತ್ತೇನೆ. ತನ್ನ ವರ್ಣಾಶ್ರಮ ಧರ್ಮವನ್ನು ಯಾವನೂ ಬಿಡಬಾರದು. ಗುರುವಿನ ಅನುಗ್ರಹದಿಂದಲೇ ನನ್ನ ಮುಕ್ತಿಪಥವನ್ನು ಪಡೆಯಲು ಉತ್ತಮವಾದ ಸಾಲಿ-ಗ್ರಾಮ ಶಿಲೆಯನ್ನು ಪಡೆದು ಆಲಸ್ಯವಿಲ್ಲದೇ ಭಕ್ತಿಯಿಂದ ಪೂಜಿಸಬೇಕು. ಮೊದಲು ವಿಪ್ರರು ಉದಯಕಾಲದಲ್ಲೆದ್ದು ಸ್ನಾನಮಾಡಿ ವೇದಮಂತ್ರದಿಂದ ತುಲಸೀ ಮೊದಲಾದವುಗಳಿಂದ ಪೂಜಿಸಬೇಕು ಅರ್ಘ್ಯ ಪಾದ್ಯಾದಿಗಳನ್ನು ಸಲ್ಲಿಸಬೇಕು. ಅನ್ಯರನ್ನು ಮೆಚ್ಚಿಸುವ ಡಾಂಭಿಕತನವನ್ನು ಬಿಡಬೇಕು. ನನ್ನ ಪ್ರತಿಮೆಯನ್ನು ಅನುದಿನವೂ ಪೂಜಿಸಬೇಕು. ಹೋಮ ಮಾಡಬೇಕು ಜಪತಪ ಮಾಡಬೇಕು ಭಕ್ತಿಯಿಂದ ಇವೆಲ್ಲ ಕೆಲಸವನ್ನು ಮಾಡಬೇಕು ಹೀಗೆ ಜಲಗಂಧ ಪುಷ್ಪ ಮೊದಲಾದವುಗಳಿಂದ ಪೂಜಿಸಿದವನ ಸಕಲ ದುಃಖಗಳನ್ನು ಹೋಗಲಾಡಿಸುವೆ. ಹೀಗೆ ನಾನಾರೀತಿಯ ಅರ್ಚನಾ ವಿಧಾನವನ್ನು ಲಕ್ಷ್ಮಣನಿಗೆ ರಾಮನು ತಿಳಿಸುತ್ತಾನೆ. ತನ್ನ ಶಕ್ತಿಗೆ ತಕ್ಕಂತೆ ಪೂಜೆ ಪುನಸ್ಕಾರ ಮೊದಲಾದವನ್ನು ಮಾಡಿ ಫಲಪಕ್ವ ಶಾಕಾದಿಗಳನ್ನು ನನಗೆ ಸಮ

ರ್ಪಿಸಬೇಕು. ತುಳಸೀದಳಗಳಿಂದ ನೈವೇದ್ಯವನ್ನು ಮಾಡಬೇಕು. ಶ್ರದ್ಧಾ ಭಕ್ತಿಯಿಂದ ಪೂಜೆಮಾಡಬೇಕು ನಿತ್ಯ ನೈಮಿತ್ತಿಕಾಗ್ನಿಯನ್ನು ಕುಂಡದಲ್ಲಿ ಆವಾಹಿಸಿ ಘೃತವನ್ನು ಸಮರ್ಪಿಸಬೇಕು ಆಹುತಿ ಕೊಡಬೇಕು ತತ್ ಶೇಷವನ್ನು ಬಲಿಯೀಯಬೇಕು. ಇಂತು ಕರಚರಣವಾಕ್ಕಾಯಕರ್ಮದಿಂದ ಆ ಪರತತ್ವ ಸ್ವರೂಪನಾದ ನನ್ನನ್ನು ಧ್ಯಾನಿಸಬೇಕು. ಪೂಜಿಸಬೇಕು ಅಂದರೆ ಇಹ ಪರದಲ್ಲಿ ಸಿದ್ಧಿ ಪಡೆಯುತ್ತಾನೆಂಬುವರಲ್ಲಿ ಸಂಶಯವಿಲ್ಲ. ಇದು ರಹಸ್ಯವಾದ ಸಾರಸರ್ವಸ್ವ ಇದು ಸನಾತನವಾದದ್ದು ಸರ್ವರ ಅಭ್ಯುದಯ ಕ್ಕಾಗಿಯೇ ನಿನಗೆ ಇದನ್ನು ಅರುಹಿದ್ದೇನೆ. ಸರ್ವರೂ ಇದನ್ನು ಪಠಿಸಿ ಪೂಜಿಸಿ ಭಕ್ತಿಮಾರ್ಗವಿಡಿದು ತನ್ನ ಹಿತವನ್ನು ಸಾಧಿಸಿಕೊಳ್ಳಲಿ ಎಂದು ಲಕ್ಷ್ಮಣನಿಗೆ ರಾಮ ತಿಳಿಸಿದನು. ಎಲೈ ಗಿರಿಜಾತೆಯೇ ಅದನ್ನೇ ನಿನಗೆ ನಾನು ಸಂಕ್ಷೇಪ ಮಾತ್ರದಲ್ಲಿ ಹೇಳಿದ್ದೇನೆ ಎಂದನು.

ನಂತರ ರಾಮನು ಸೀತಾದೇವಿಯ ದುಃಖದಲ್ಲಿ ಮುಳುಗಿದ್ದವನಂತೆ ತೋರಿದನು. ಇತ್ತ ಕಿಷ್ಕಿಂಧೆಯಲ್ಲಿ ಹನುಮಂತನೇ ಮೊದಲಾದ ಮಂತ್ರಿ ಗಳು ಸುಗ್ರೀವಂಗೆ ಈ ರೀತಿ ಹೇಳಿದರು. ರಾಘವನ ದೆಸೆಯಿಂದ ನಿನಗೆ ಹಿತ ವಾಯಿತು ನಿನ್ನ ಸತಿ ನಿನಗೆ ದೊರಕಿದಳು. ಈಗ ನಿನ್ನ ಸರದಿ ನೀನು ನಿನ್ನ ಕೆಲಸವನ್ನು ಮರೆತೆಯಾದರೆ ನಿನ್ನಷ್ಟು ಕೃತಘ್ನರು ಯಾರೂ ಇಲ್ಲ (ಕೊಟ್ಟ) ಮಾಡಿದ ಶಪಥವನ್ನು ನೆನೆಸಿಕೋ ಆಗ ಸುಗ್ರೀವನು ಅವರ ಮಾತನ್ನು ಮನ್ನಿಸಿ ಸಪ್ತದ್ವೀಪಗಳಲ್ಲೂ ವಾಸವಾಗಿರುವ ತನ್ನ ವಾನರ ದೂತರನ್ನು ಅಟ್ಟಿದನು ವಾಯುವೇಗಿಗಳಾದ ದೂತರನ್ನು ಹನುಮಂತನು ದಿಕ್ಕು ದಿಕ್ಕಿಗೆ ಕಳುಹಿದನು ಎಂಬಲ್ಲಿಗೆ ಸಂಧಿಯು ಮುಕ್ತಾಯಗೊಂಡಿತು.

**ಮೂವತ್ತಾಲ್ಕನೆಯ ಸಂಧಿ :–** ಎಲೈ ಕಾಂತೆಯೇ ಸ್ವಾರಸ್ಯಕರವಾದ ಮುಂದಿನ ಕಥೆಯನ್ನು ಆಲಿಸುವಂಥವಳಾಗು.

ರಾಮನು ಆ ಗುಹೆಯಲ್ಲಿ ಸೀತೆಯ ವಿರಹದಿಂದ ದಿನಕಳೆಯುತ್ತ ಆಕೆ ಇದ್ದಾಳೋ ಸತ್ತಳೋ ಯಾವದೂ ತಿಳಿಯುವದಿಲ್ಲ. ಯಾವನಾದ ರೊಬ್ಬನು ಆಕೆ ಜೀವಿಸಿದ್ದಾಳೆ ಎಂಬ ಸುದ್ದಿಯನ್ನು ತಿಳಿಸಿದರೆ ಸಾಕು ! ಶಿವಶಿವಾ ಹೇಗೆ ಹೇಳಲಿ ನನ್ನ ಮನದ ದುಗುಡವನ್ನು !! ಸೀತೆ ಜೀವಿಸಿ- ದ್ದಾಳೆ ಎಂಬ ಸುದ್ದಿ ತಿಳಿದದ್ದಾದರೆ ಸಾಕು ಆ ರಾಕ್ಷಸರ ಕುಲವನ್ನೆಲ್ಲ

ಧ್ವಂಸ ಮಾಡುವೆನು. ನನ್ನ ಸೀತಾದೇವಿಯನ್ನೊಯ್ದವನನ್ನು ಕುಲಸಹಿತ ನಾಶಮಾಡುವೆನು ಎನ್ನುತ್ತ ಕಳವಳಿಸುತ್ತಿದ್ದನು. ಸುಗ್ರೀವನಿಗೆ ನಾನು ಸಹಾಯ ಸಲ್ಲಿಸಿದೆ. ಆದರೆ ಸುಗ್ರೀವ ತನ್ನ ಅಂತಃಪುರದಲ್ಲಿ ಸುಖದಿಂದ ಇದ್ದಾನೆ ಏನುಮಾಡಿದನೋ ತಿಳಿಯದು. ಇನ್ನೆಷ್ಟು ದಿನ ಕಳೆಯಬೇಕೇ-ನೋ ! ಸೀತೆಯರಸಲು ನಾನು ಸಹಾಯಮಾಡುತ್ತೇನೆ ಎಂದ ಸುಗ್ರೀವನ ಪತ್ತೆಯೇ ಇಲ್ಲ. ಇಂಥ ಕೃತಘ್ನನನ್ನು ಕೊಲ್ಲುವದೇ ಲೇಸು ಎಂದು ಹೇಳುತ್ತಿರಲು ಲಕ್ಷ್ಮಣನು ಹೇಳಿದ್ದೇನೆಂದರೆ- ನಾನೀಗಲೇ ಹೋಗಿ ಆತನನ್ನು ವಿಚಾರಿಸುತ್ತೇನೆ. ಎಂದು ಶರ ತೂಣೀರ ಖಡ್ಗ ಸಹಿತವಾಗಿ ಲಕ್ಷ್ಮಣನು ಕಿಷ್ಕಿಂಧೆಯ ಕಡೆ ಹೊರಟ ಆಗ ರಾಮ ಅವನಿಗೆ ಹೇಳಿದ-ಆತ ನನ್ನ ಗೆಳೆಯ ಕೋಪವಶನಾಗಬೇಡ. ಆತನ ಪರಿಯೆಲ್ಲವನ್ನೂ ತಿಳಿದು ಬೇಗ ಬಾ ಲಕ್ಷ್ಮಣನು ವೀರಾವೇಶದಿಂದಲೇ ಹೊರಟ, ಎಲೈ ಗಿರಿಜೆಯೇ ಇದು ರಾಮನಿಗೆ ಧಿಟವಾದದ್ದೇ ! ಆತ್ಮಜ್ಞಾನಿಯಾದ ಆತನಿಗೆ ಮಾನವನಂತೆ ಶೋಕವೇ ? ಪರಮಾನಂದ ರೂಪನಾದ ಪರಾತ್ಮವಸ್ತುವಾದಾತ್ಮನಿಗೆ ಈ ಸುಖದುಃಖಗಳ ಪರಿಯೆಲ್ಲಿಯದು ಬ್ರಹ್ಮನು ನಿರೂಪಿಸಿದ ಕಾರ್ಯವನ್ನು ಪೂರೈಸಲೋಸುಗ ಈ ರೀತಿ ನಾಟಕ ಮಾಡುತ್ತಿದ್ದಾನೆ ತಾನು ಗುಣ ರಹಿತನಾಗಿದ್ದರೂ ಗುಣಿಗಳಂತೆ ತೋರ್ಪಡಿಸುತ್ತಿದ್ದಾನೆ. ಲೋಕದ ರೀತಿ ನೀತಿಗಳನ್ನು ತಿಳುಹಿಸುತ್ತಿದ್ದಾನೆ ಅಷ್ಟೇ ! ಎಲೈ ಗಿರಿಜೆಯೇ ಮುಂದಿನ ಸಂಗತಿ ಕೇಳುವಂಥವಳಾಗು. ಸಿಟ್ಟಿಗೆದ್ದ ಲಕ್ಷ್ಮಣನು ಕಿಷ್ಕಿಂಧೆಯ ಹೊರ ವಳಯಕ್ಕೆ ಬಂದು ಗರ್ಜಿಸಲು ಕಪಿಗಳು ಹೆದರಿ ಶಿಖರಗಳನ್ನೇರಿದವು-ಮತ್ತು ಕಲ್ಲುಗುಂಡು ಮರಗಳನ್ನು ಹಿಡಿದಿರಲು ಈಗಲೇ ವಾನರರನ್ನು ಸಮೂಲ ನಾಶಮಾಡುವೆನೆಂದು ಲಕ್ಷ್ಮಣ ಗರ್ಜಿಸಿದ ಕೂಡಲೇ ಅಂಗ-ದನು ಬಂದ ಕಪಿಗಳನ್ನು ತಡೆದು ಲಕ್ಷ್ಮಣನ ಕಾಲಿಗೆ ಬಿದ್ದನು ಅಂಗದನನ್ನು ಲಕ್ಷ್ಮಣನು ಹಿಡಿದೆತ್ತಿದನು ನನ್ನ ಆಗಮನದ ವಿಚಾರವನ್ನು ಕೂಡಲೇ ಸುಗ್ರೀವನಿಗರುಹು ರಾಘವನು ಕಳುಹಿಸಿದ್ದಾನೆಂದು ಅಂಗದ ಸುಗ್ರೀವನ ಬಳಿಗೆ ಬಂದು ಲಕ್ಷ್ಮಣ ಶೀಘ್ರ ಕೋಪದಿಂದ ಬಂದಿದ್ದಾನೆ ಎಂದ. ಕೂಡಲೇ ಸುಗ್ರೀವನು ಹನುಮಂತನನ್ನು ಕಳುಹಿಸಿ ಲಕ್ಷ್ಮಣನ ಕೋಪವನ್ನು ಶಮನಿಸಿ ಆತನನ್ನು ಕರೆದು ತಾ ಎಂದ. ಅಂಗದ ಹನುಮಂತ ಇಬ್ಬರೂ ಲಕ್ಷ್ಮಣನನ್ನು ಸಮಾಧಾನಪಡಿಸಿ ಕರೆತಂದರು ಏನೂ ಸಂಶ-

ಯಕ್ಕೆ ಆಸ್ಪದವಿಲ್ಲ ನಾವು ನಮ್ಮ ಕಾರ್ಯ ಮಾಡುತ್ತಿದ್ದೇವೆ. ಎಂದರು ಬಂದಂಥ ಲಕ್ಷ್ಮಣನು ಕಿಷ್ಕಿಂಧೆಯ ವೈಭವವನ್ನು ಕಂಡ ಕೋಟೆ ಕೊತ್ತಳಗಳ ರಚನೆಯನ್ನು ನೋಡಿದ ಲಕ್ಷ್ಮಣನನ್ನು ಇದಿರುಗೊಂಡು ಕರೆದು ಬಾ ಎಂದು ತಾರೆಗೆ ಆಜ್ಞಾಪಿಸಿದ ಲಕ್ಷ್ಮಣನ ಕೋಪವುಳಿದಿದ್ದರೆ ಅದನ್ನು ಶಾಂತಮಾಡು ಎಂದ. ತಾರೆ ಬಂದು ಲಕ್ಷ್ಮಣನನ್ನು ಸಮಾಧಾನಪಡಿಸಿದಳು ನಿಮ್ಮ ಭೃತ್ಯರಾದ ನಮ್ಮ ಮೇಲೆ ಕೋಪವೇಕೆ ? ನಿನ್ನ ರಕ್ಷಣೆಯಿಂದಲೇ ಮನೆಯಲ್ಲಿದ್ದಾನೆ. ಬಲವಂತರಾದ ಕಪಿಗಳನ್ನು ಕರೆತರಲು ದಿಕ್ಕು ದಿಕ್ಕಿಗೆ ದೂತರನ್ನು ಅಟ್ಟಿದ್ದಾನೆ. ಅವರೆಲ್ಲರೂ ಸದ್ಯದಲ್ಲಿಯೇ ಬರಲಿದ್ದಾರೆ ಬಂದ ಕೂಡಲೇ ನಿಮ್ಮಲ್ಲಿಗೆ ಬರುತ್ತಾನೆ ಲಂಕೆಗೆ ಧಾಳಿಯಿಟ್ಟು. ರಾವಣಾದಿಗಳನ್ನೆಲ್ಲ ಸದೆಬಡಿದು ಸೀತೆಯನ್ನು ತಂದೊಪ್ಪಿಸುತ್ತಾನೆ. ಆಗಲೇ ಆತ "ರಾಮಭೃತ್ಯ" ಎಂಬ ಬಿರುದನ್ನು ಪಡೆಯುತ್ತಾನೆ ಎಂದಳು. ಸುಗ್ರೀವನೂ ಸಹ ಬಂಧು ಜನ ಪರಿವಾರ ಜನ ಸಹಿತ ಬಂದು ವಿನಯದಿಂದ ಇದಿರುಗೊಂಡನು. ಆಗ ಲಕ್ಷ್ಮಣನ ಕೋಪವು ಪೂರ್ಣವಾಗಿ ಶಾಂತವಾಯಿತು. ಆದರೂ ಸುಗ್ರೀವನನ್ನು ಕಂಡಕೂಡಲೇ ಮತ್ತೊಮ್ಮೆ ಗುಡುಗಿದ ಆಗ ಹನುಮಂತ ಹೇಳಿದ್ದೇನೆಂದರೆ-ರಾಮ ಪಾದಭಕ್ತಿಯಲ್ಲಿ ಸಂದೇಹವೇ ಬೇಡ ಸುಗ್ರೀವ ಒಂದು ಕ್ಷಣವೂ ಮರೆಯದೇ ರಾಮ ಕಾರ್ಯಾಸಕ್ತನಾಗಿದ್ದಾನೆ. ಇಲ್ಲಿನೋಡು, ಬಂದಿರುವ ಕಪಿಪಡೆಗಳನ್ನು ! ಅವನ್ನೆಲ್ಲ ಈತ ಕರೆಸಿಕೊಂಡಿದ್ದಾನೆ. ಎಂದು ಬಂದ ಕಪಿ ಪಡೆಗಳನ್ನೆಲ್ಲ ತೋರಿಸಿದ ನಂತರ ಲಕ್ಷ್ಮಣನ ಸಿಟ್ಟು ಇಳಿಯಿತು. ಆಗ ಸುಗ್ರೀವ ಅರ್ಘ್ಯಪಾದ್ಯೋಪಚಾರಗಳನ್ನು ಮಾಡಿ ತನ್ನ ಕೆಲಸವನ್ನು ನಿವೇದಿಸಿದ. ಸರ್ವಾಂತರ್ಯಾಮಿಯಾದ ರಾಮನ ಗುಣಗಾನವನ್ನು ಪುನಃ ಪುನಃ ಮಾಡಿದ ಈಗಲೇ ರಾಮನಿದ್ದಲ್ಲಿಗೆ ಹೋಗೋಣ. ಎಂದು ಲಕ್ಷ್ಮಣ ಹೇಳಿದಕೂಡಲೇ ತನ್ನ ಪಡೆ ಸಹಿತ ಹೋಗಲು ಸುಗ್ರೀವ ತಯಾರಾದ ಎಲ್ಲರೂ ರಾಜವೈಭವದಿಂದ ನಡೆದು ರಾಮನ ಬಳಿ ಬಂದು ಸೇರಿದರು ಮನೋಹರ ಶ್ಯಾಮಲಾಂಗನಾದ ಆ ಶ್ರೀ ರಾಮನನ್ನು ದೂರದಿಂದ ಕಂಡರು ರಾಮನನ್ನೇ ಧ್ಯಾನಿಸುತ್ತಾ ಆತನ ಗುಣಗಾನ ಮಾಡುತ್ತಾ ಹೊಂದೇರನ್ನಿಳಿದು ಮೈಯಿಕ್ಕುತ್ತ ರಾಮನ ಬಳಿ ಬಂದರು ಎಂಬಲ್ಲಿಗೆ ಸಂಧಿ ಮುಕ್ತಾಯಗೊಂಡಿತು.

ಮೂವತ್ತೈದನೆಯ ಸಂಧಿ :- ಎಲೈ ಗಿರಿಜಾ ಮಾತೆಯೇ ಮುಂದಿನ ಶುಭ ಪ್ರಸಂಗವನ್ನು ಕೇಳುವಂಥವಳಾಗು.

ರಾಘವನು ಸುಗ್ರೀವನನ್ನು ಆಲಂಗಿಸಿ ಕುಳ್ಳಿರಿಸಿಕೊಂಡನು. ಎಲೈ ರಾಮನೇ ಈ ಮಹಾವಾನರರ ದಂಡನ್ನು ನೋಡು ಇವರೆಲ್ಲ ಬೇರೆ ಬೇರೆ ಗಿರಿ ಪರ್ವತಾಗ್ರಗಳಲ್ಲಿದ್ದವರು. ಕಾಮರೂಪಿಗಳು ರಣ ಪಂಡಿತರು. ಗಜ ಗಜಾಧಿಕ ಬಲವಂತರು. ಕೆಲರು ಅಂಜನಗಿರಿಯಿಂದ ಬಂದವರು ಕೆಲರು ಕನಕಗಿರಿಯಿಂದ ಬಂದವರು. ಕೆಲರು ಕೆಂಪು ಕಣ್ಣುಳ್ಳವರು ಕೆಲರು ಕೃಷ್ಣ ಪಿಂಗಲರು. ಕೆಲರು ದೀರ್ಘದೇಹಿಗಳು ಹೀಗೆ ಹಲವಾರು ವಿಧದವರಾಗಿದ್ದು ಎಲ್ಲರೂ ಕದನೋತ್ಸುಕಿಗಳಾಗಿರುತ್ತಾರೆ. ನಿನ್ನ ಆಜ್ಞೆಗಾಗಿ ಕಾದಿದ್ದಾರೆ. ಮುಂದೇನು ಮಾಡಬೇಕೆಂಬುದನ್ನು ತಿಳಿಸಬೇಕು ಎಂದು ವಿನಯದಿಂದ ಪ್ರಾರ್ಥಿಸಿಕೊಂಡನು.

ಇವನು ಕರಡಿಗಳೊಡೆಯ ಜಾಂಬವ ಮಂತ್ರಿ ಶ್ರೇಷ್ಠ ಇವನು ನಳ ಉತ್ತಮ ಶಿಲ್ಪಿ ಇವನು ನೀಲ ಕದನದಲ್ಲಿ ಬಲು ಪರಾಕ್ರಮಿ ಇವರು ಗವಯ ಗವಾಕ್ಷರೆಂಬುವರು ಹೀಗೆ ಶರಭ, ಗಂಧ ಮಾದನ, ಮೈಂಧ, ಗಜ, ಕಂಪ, ಹಂಪ, ಶತಮುಖ, ಸುಷೇಣ ಮೊದಲಾದ ಹಲವಾರು ವಾನರ ಮುಖ್ಯರ ಪರಿಚಯ ಮಾಡಿಕೊಟ್ಟನು ಇವರೆಲ್ಲರೂ ನಿನ್ನ ಬಗ್ಗಾಗಿ ಪ್ರಾಣಾರ್ಪಣೆ ಮಾಡಲು ತಯಾರಾಗಿದ್ದಾರೆ. ಆದ್ದರಿಂದ ಕಾರ್ಯವೇನೆಂಬುದನ್ನು ಕೂಡಲೇ ಇವರಿಗೆ ಬೆಸಸು ಇವರೆಲ್ಲ ನಿನ್ನ ವಶವಲ್ಲಿಯೇ ಇದ್ದಾರೆ ಇದನ್ನು ಕೇಳಿದ ರಾಮನು ಸೀತೆಯನ್ನರಸಲು ಕಪಿಗಳನ್ನು ದಿಕ್ಕು ದಿಕ್ಕಿಗೆ ಕಳುಹಿಸಬೇಕು. ಎಂದನು. ರಾಮನೆಂದಂತೆಯೇ ಪ್ರತಿಯೊಂದು ದಿಕ್ಕಿಗೆ ಕಪಿನಾಯಕರನ್ನು ಕಪಿಪಡೆ ಸಹಿತ ಕಳುಹಿಸಲು ತಯಾರಾಗಿ ಅವರಿಗೆ ಈ ರೀತಿ ಆಜ್ಞೆ ಮಾಡಿದನು ಒಂದು ತಿಂಗಳೊಳಗೆ ಪ್ರಥ್ವಿಯಲ್ಲರಸಿ ಸೀತೆಯನ್ನು ಹುಡುಕಿಕೊಂಡು ಬರಬೇಕು. ಗೋಪಾದದಷ್ಟು ಜಾಗವನ್ನೂ ಕೂಡ ಬಿಡಬಾರದು ಒಂದು ತಿಂಗಳು ನಂತರ ಬಂದರೆ ನಿಮಗೆಲ್ಲ ಶಿಕ್ಷೆ ಕಾದಿದೆ ಎಂದು ಆಜ್ಞೆ ಮಾಡಿದನು.

ರಾವಣನು ದಕ್ಷಿಣ ದಿಕ್ಕಿಗೆ ಹೋದಕಾರಣ ಆ ದಿಕ್ಕಿಗೆ ಬಲಾಢ್ಯರಾದ ಹನುಮ, ಅಂಗದ, ಜಾಂಬವ, ನಳ, ನೀಲ, ಸುಷೇಣ ಮೊದಲಾದವರಿಗೆ ಹೇಳಬೇಕಾದದ್ದನ್ನೆಲ್ಲ ಹೇಳಿ ಕಳುಹಿದನು ಹೋಗಲು ತಯಾರಾದ ಮಾರುತಿಯನ್ನು ಕರೆದು ರಾಮ ಅವನಿಗೆ ಹೀಗೆ ಹೇಳಿದ-ಸೀತೆಯ ಬಗ್ಗಾಗಿ ಕುರುಹೊಂದನ್ನು ತೆಗೆದುಕೊಂಡು ಹೋಗು ರಾಮನಾಮಾಂಕಿತವಾದ ಈ ಉಂಗುರವನ್ನು ತೆಗೆದುಕೋ ಸೀತೆಗೆ ಏಕಾಂತದಲ್ಲಿ ಇದನ್ನು ಕೊಡುವವ

ನಾಗು. ನಿನ್ನಿಂದಲೇ ಕಾರ್ಯ ಸಾಧ್ಯವಾಗುತ್ತದೆ ನಾನು ನಿನ್ನ ಬಲ ಸತ್ವ ಪರಾಕ್ರಮವನ್ನು ಅರಿತಿದ್ದೇನೆ.

ನಂತರ ಕಪಿಗಳು ದಿಕ್ಕು ದಿಕ್ಕಿಗೆ ಸೀತಾಮಾತೆಯನ್ನು ಹುಡುಕುತ್ತ ಹೊರಟರು. ಮಾರ್ಗಮಧ್ಯದಲ್ಲಿ ಸಿಕ್ಕಿದ ಒಬ್ಬ ರಾಕ್ಷಸನನ್ನು ಇವನೇ ರಾವಣನೆಂದು ಭ್ರಮಿಸಿ ಆತನನ್ನು ಮುಷ್ಟಿಯಿಂದ ಹೊಡೆದು ಕೊಂದರು ನಂತರ ಇವನು ರಾವಣನಲ್ಲ ಎಂದು ತಿಳಿದರು ಗಟ್ಟಿಬೇಣ ಎಲ್ಲಾ ಕಡೆ-ಯಲ್ಲಿಯೂ ಕಷ್ಟವಿಲ್ಲದೆ ಹುಡುಕಿದರು. ಎಲ್ಲಿಯೂ ಸೀತಾದೇವಿಯು ಕಂಡುಬರಲಿಲ್ಲ ನಿರಾಶರಾದರು ಆದರೆ ಮುಂದೆ ಹುಲ್ಲಿನಿಂದಾವೃತವಾದ ಒಂದು ಗುಹೆಯನ್ನು ಕಂಡರು ಅಲ್ಲಿಂದ ಕ್ರೌಂಚ ಹಂಸ ಸಾರಸ ಮೊದಲಾದ ಪಕ್ಷಿಗಳು ಹೊರಬರುತ್ತಿದ್ದವು ಅಲ್ಲಿ ನೀರಿದೆ. ನಾವು ನೋಡುವಾ ಎನ್ನುತ್ತ ಎಲ್ಲರೂ ಆ ಅಂಧಕಾರದ ಗುಹೆಯ ಒಳಹೊಕ್ಕರು.

ಮುಂದೆ ಸ್ಫಟಿಕದಂತೆ ಸ್ವಚ್ಛವಾದ ಜಲವುಳ್ಳ ಸರೋವರವೊಂದನ್ನು ಕಂಡರು ಹಲವಾರು ವೃಕ್ಷಗಳು ಅಲ್ಲಿ ಬೆಳೆದಿದ್ದವು ಮಧುವಾದ ಹಣ್ಣು ಹಂಪಲಗಳಿದ್ದವು ಎಲ್ಲ ಕಡೆಗಳಲ್ಲೂ ವಜ್ರಗಳು ಮಣಿ ಭೂಷಣಗಳು ವಸ್ತ್ರಾಭರಣಗಳು ಉತ್ತಮವಾದ ಆಹಾರ ಕಜ್ಜಾಯ ಮೊದಲಾದವು ಇದ್ದವು. ಆದರೆ ಮನುಷ್ಯ ಮಾತ್ರರ ಸುಳಿವಿಲ್ಲವಾಗಿತ್ತು ಅಲ್ಲಿ ಅವರು ಅಲ್ಲಿ ಒಂದು ಭವನವನ್ನು ಕಂಡರು ಅಲ್ಲಿ ಯೋಗಿನಿಯೊಬ್ಬಳು ಯೋಗನಿಷ್ಠೆಯಲ್ಲಿದ್ದಳು. ಪರಾತ್ಪರ ವಸ್ತುವಾದ ಪರಮಾತ್ಮನನ್ನು ಧ್ಯಾನಿಸುವ ಅವಳನ್ನು ಕಂಡರು ಅವರು ಭಯದಿಂದ ಸ್ತೋತ್ರಮಾಡತೊಡಗಿದರು ಆ ವಾನರರನ್ನು ಕಂಡು ಅವರನ್ನು ಮಾತನಾಡಿಸಿದಳು-ಭೀಮ ಬಲಶಾಲಿಗಳಾದ ನೀವು ಯಾರು ? ಈ ಸುಸ್ಥಳಕ್ಕೆ ನಿಮ್ಮನ್ನು ಯಾರು ಕಳುಹಿದರು ? ನಿಮ್ಮ ಒಡೆಯರು ಯಾರು ? ಎಂದಿತ್ಯಾದಿಯಾಗಿ ಕೇಳಿದಳು. ಅದಕ್ಕೆ ಹನುಮಂತನು ನುಡಿದದ್ದೇನೆಂದರೆ ಅಯೋಧ್ಯಾ ಪಟ್ಟಣದ ದಶರಥರಾಜನ ಮಗನಾದ ಶ್ರೀ ರಾಮಚಂದ್ರನು ತಂದೆಯ ಆಜ್ಞೆಯ ಪ್ರಕಾರ ವನಕ್ಕೆ ಸತಿ ಸಹಿತ ಬಂದ. ಆತನ ವನಿತೆಯಾದ ಸೀತೆಯನ್ನು ದನುಜನೊಬ್ಬನು ಕದ್ದೊಯ್ದ ಆತ ರಾವಣ. ರಾಮ ಸುಗ್ರೀವನಿಗೆ ಸಹಾಯಕನಾದ ಸುಗ್ರೀವ ಸೀತೆಯನ್ನರ-ಸಲು ನಮ್ಮನ್ನು ಕಳುಹಿದ. ಸೀತೆಯನ್ನರಸುತ್ತ ನಾವಿಲ್ಲಿಗೆ ಬಂದೆವು. ಇನ್ನು

ನಿನ್ನ ಸಮಾಚಾರವನ್ನು ಹೇಳುವವಳಾಗು ಎಂದು ವಿನಯದಿಂದ ಬಿನ್ನವಿಸಿಕೊಂಡನು.

ಹನುಮಂತನ ಮಾತನ್ನು ಕೇಳಿದ ಆಕೆ ಅತ್ಯಂತ ಸಂತೋಷದಿಂದ ನೀವೆಲ್ಲ ಬಹಳ ಬಳಲಿದ್ದೀರಿ. ನಿಮಗೆ ಬೇಕಾದ ಹಣ್ಣು ಹಂಪಲಗಳನ್ನು ಪಕ್ವಾದಿ ಭೋಜ್ಯಗಳನ್ನು ಬೇಕಾದಷ್ಟು ಸವಿಯಿರಿ. ಅಮೃತೋಪಮವಾದ ಪಾನೀಯವನ್ನು ಕುಡಿಯಿರಿ ದಣಿವಾರಿಸಿಕೊಳ್ಳಿರಿ. ನಂತರ ನನ್ನ ಕಥೆಯನ್ನು ಹೇಳುತ್ತೇನೆ ಎಂದಳು. ಅವಳು ಹೀಗೆ ಹೇಳಿದನಂತರ ಎಲ್ಲರೂ ಪಣ್ಫಲಗಳನ್ನು ತಿಂದು ಪಾನೀಯಗಳನ್ನು ಕುಡಿದು ದಣಿವಾರಿಸಿಕೊಂಡರು.

ಮುನ್ನ ವಿಶ್ವಕರ್ಮನಿಗೆ. ಹೇಮೆಯೆಂಬ ಮಗಳಿದ್ದಳು ಅವಳು ನಾಟ್ಯದಿಂದ ಈಶ್ವರನನ್ನು ಮೆಚ್ಚಿಸಲು ಆವನು ಈ ಪುರವನ್ನು ಆವಳಿಗೆ ಕೊಟ್ಟನು ಆವಳು ಸಾವಿರ ವರ್ಷ ಈ ಪುರದಲ್ಲಿ ಯೋಗಿನಿಯಾಗಿದ್ದಳು. ಅವಳ ಸಖಿ-ನಾನು ಮೋಕ್ಷವನ್ನೇ ಬಯಸಿ ದೇಹಾಭಿಮಾನವನ್ನು ಬಿಟ್ಟು ಕಾಲನ ಕರೆಗಾಗಿ ಈ ತನುವನ್ನು ಹಿಡಿದಿದ್ದೇನೆ. ಸಾಕ್ಷಾತ್ ಹರಿಯೇ ತನಗೆ ಗತಿಯೆಂದು ಈಕೆಯೊಡನಿದ್ದೆ ನಾನು ಒಬ್ಬ ಗಂಧರ್ವನ ಮಗಳು. ಸ್ವಯಂಪ್ರಭೆ ಎಂದು ಹೆಸರು ವಿಷಯವಾಸನೆಯನ್ನು ಬಿಟ್ಟು ಇಲ್ಲಿಯೇ ಇದ್ದೆ. ಹೇಮೆಯು ಮೋಕ್ಷ ಹೊಂದುವ ಸಂದರ್ಭದಲ್ಲಿ ಹೀಗೆ ಹೇಳಿದಳು-ಇಲ್ಲಿ ಯಾವ ಪ್ರಾಣಿಯೂ ಇಲ್ಲ ನೀನು ತಪಸ್ಸು ಮಾಡುತ್ತಾ ಇಲ್ಲಿಯೇ ಇರು ಮುಂದೆ ನಾರಾಯಣನು ತ್ರೇತಾಯುಗದಲ್ಲಿ ದಶರಥಗೆ ಮಗನಾಗಿ ಭೂಭಾರವನ್ನು ಕಳೆಯಲೋಸುಗ ವನಕ್ಕೆ ಬರುತ್ತಾನೆ ಹೆಂಡತಿಯನ್ನರಸಲು ಕಪಿ ಪಡೆ ಕಳುಹುತ್ತಾನೆ. ಆವರಿಗೆ ನೀನು ಆದರ ಸತ್ಕಾರ ಮಾಡು. ಆ ಮೇಲೆ ಶ್ರೀ ರಾಮನನ್ನು ಕಂಡು ಭಕ್ತಿಯಿಂದ ಆತನ ಸ್ತೋತ್ರ ಮಾಡು. ಆವನಿಂದ ವೈಕುಂಠವನ್ನು ಪಡೆ ಕಾರಣ ನಾನು ಈಗ ರಾಮನ ಬಳಿಗೆ ಹೋಗುವೆ. ನೀವೆಲ್ಲ ಬೇಕಾದ ಹಾಗೆ ಭುಂಜಿಸಿ ಪಾನೀಯ ಕುಡಿದು ದಣಿವಾರಿಸಿಕೊಳ್ಳಿರಿ. ಎಂದಳು ಕಪಿಗಳು ದಣಿವಾರಿಸಿಕೊಂಡನಂತರ ಪುನಃ ಹೊರಕ್ಕೆ ಬಂದರು. ನಂತರ ಸ್ವಯಂಪ್ರಭೆಯೂ ಸಹ ಅಲ್ಲಿಂದ ಹೊರಟು ರಾಮನ ಬಳಿಗೆ ಬಂದಳು. ಸುಗ್ರೀವ ಲಕ್ಷ್ಮಣ ಸಹಿತ ಇರುವ ರಾಮನ್ನು ಕಂಡು ದಂಡಪ್ರಣಾಮ ಮಾಡಿದಳು ಮತ್ತು ಅತ್ಯಂತ ಸಂತೋಷದಿಂದ ಗದ್ಗದ ಹೃದಯದಿಂದ ರಾಮನ ಗುಣಗಾನ ಮಾಡಿದಳು ನಾನು ಆ ಗುಹೆಯಲ್ಲಿದ್ದು ಸದಾ ನಿನ್ನ ಸ್ಮರಣೆ

ಮಾಡುತ್ತಿದ್ದೆ. ನೀನು ಮನುಜಾಕಾರನಾಗಿ ಈ ಭೂಮಿಯಲ್ಲಿ ಅವತರಿಸಿದ್ದೀ. ಭೂಭಾರ ಕಳೆಯಲೋಸುಗ ಬಂದಿದ್ದೀ. ಭಕ್ತರ ಬಂಧುವಾಗಿರುವೆ. ನೀನು ಸಗುಣನೂ ನಿರ್ಗುಣನೂ ಆದಿಮಧ್ಯಾಂತರಹಿತನೂ ಆಗಿರುವೆ. [illegible] ಯಾರೂ ಅರಿಯಲಾಗದ ಪುರಾಣ ಪುರುಷನೂ ಆಗಿದ್ದೀ. ನಾರಿಯೊಬ್ಬ-ಳನ್ನು ಬಿಡಿಸುವ ನೆವದಿಂದ ಭೂಭಾರ ಹರಣಕ್ಕಾಗಿ ಹೊರಟಿದ್ದೆ. ಕೌಸಲ್ಯೆಯು ಹಿಂದೆ ತಪಸ್ಸು ಮಾಡಿದ ಕಾರಣದಿಂದ ಆಕೆಯಲ್ಲಿ ಜನಿಸಿದ್ದೀ [illegible] ಕೆಲವು ದನುಜರನ್ನು ಕೊಲ್ಲಲು ಜನಿಸಿದ್ದೀ ಎಂಬರು ಕೆಲರು ಭಕ್ತರ ಸಲುಗೆಗಾಗಿ ಜನಿಸಿದ್ದೀ. ಎಂಬರು ನಿನ್ನ ಚರಣವನ್ನು ಕಂಡು ಕೆಲವರು, ನಿನ್ನ ಮಹಿಮೆಯನ್ನು ಕೇಳಿ ಕೆಲವರು ನಿನ್ನ ನಾಮವನ್ನು ಪಾಡಿ ಕೆಲವರು, ಇತ್ಯಾದಿಯಾಗಿ ಹೇಳುತ್ತಾರೆ. ಅಂತೂ ನೀನು ಮಾನವನಾಗಿ ಜನಿಸಿದ್ದೀ. ಚೈತನ್ಯಾತ್ಮಪೂರ್ಣನಾದ ನಿನಗೆ ನಮಸ್ಕಾರ ಎನ್ನುತ್ತ ನಮಿಸಿದಳು. ನಾನಾಬಗೆಯಿಂದ ಶ್ರೀ ರಾಮನನ್ನು ಸ್ತುತಿಸಿದಳು. ಎಲೈ ರಘುನಾಥನೇ ಸದಾ ನನ್ನ ನಾಲಿಗೆಯು ನಿನ್ನ ನಾಮವನ್ನು ನೆನೆಯುತ್ತಿರಲಿ. ಕಿವಿ ನಿನ್ನ ನಿಜಗುಣ ಚರಿತ್ರವನ್ನು ಕೇಳುತ್ತಿರಲಿ ಕರವು ನಿನ್ನನ್ನು ಪೂಜಿಸುತ್ತಿರಲಿ. ಶಿರವು ನಿನಗೆ ಸದಾ ಎರಗುತ್ತಿರಲಿ ಹೀಗೆ ಸರ್ವಾಂಗವೂ ನಿನಗೆ ಸಮರ್ಪಿತವಾಗಲಿ ಎನ್ನುತ್ತ ಹಲವು ವಿಧದಿಂದ ರಾಮಗುಣಗಾನ ಮಾಡಿದಳು. ರಾಮನು ಅವಳನ್ನು ಮನ್ನಿಸಿ ಅವಳಿಗೆ ಬದರಿಕಾಶ್ರಮಕ್ಕೆ ಹೋಗಲು ತಿಳಿಸಿದನು ಅಲ್ಲಿಯ ಋಷಿಗಳನೊಡನಿದ್ದು ನಿನ್ನ ಕಳೇಬರವನ್ನು ತ್ಯಜಿಸು. ಅವಳು ರಾಮನೆಂದಂತೆಯೇ ಬದರಿಕಾಶ್ರಮಕ್ಕೆ ಹೋಗಿ ನಿಜ ಶರೀರವನ್ನು ಬಿಟ್ಟು ಪರಂಧಾಮವನ್ನೈದಿದಳು ಎಂಬಲ್ಲಿಗೆ ಸಂಧಿ ಮುಕ್ತಾಯವಾಯಿತು.

ಮೂವತ್ತಾರನೆಯ ಸಂಧಿ :- ಎಲೈ ಗಿರಿರಾಜಪುತ್ರಿಯೇ ಮುಂದಿನ ಕಥಾಭಾಗವನ್ನು ಸಾವಧಾನಚಿತ್ತದಿಂದ ಆಲಿಸುವವಳಾಗು.

ಇತ್ತ ಕಪಿ ಪಡೆಯು ಎಲ್ಲೆಲ್ಲಿಯೂ ಅರಸಿ ಸೀತೆಯನ್ನು ಕಾಣದೆ ಬಳಲಿ ಬಸವಳಿದು ಬೆಂಡಾದರು. ಅವರ ಮುಖಂಡನಾದ ಅಂಗದನು ಕಪಿಗಳಿಗೆ ಈ ರೀತಿ ಹೇಳಿದನು-ನಾವು ಅರಸುತ್ತ ತಿಂಗಳುಗಳೇ ಕಳೆದೆವು. ಅವಧಿ ತೀರುತ್ತ ಬಂತು ಆದರೆ ಸೀತೆಯನ್ನು ಕಾಣಲಾರದಾದೆವು. ಪುನಃ ತಿರುಗಿ ಹೋದರೆ ನಮಗಿನ್ನೇನು ಕಾದಿದೆಯೋ ? ಮೊದಲೇ ನಾನು ಆ ಸುಗ್ರೀವನ ಶತ್ರುವಿನ ಮಗನು. ನನ್ನನ್ನು ಆತ ಘಾತಿಸದೇ ಬಿಡಲಾರ.

ಆತನ ಬಳಿಯಲ್ಲಿ ಈ ಸಮಯದಲ್ಲಿ ದಯೆಯೆಂಬುದು ಇರಲಿಕ್ಕಿಲ್ಲ. ನಾವೆಲ್ಲ ಸಾಯುವಂತಾಯಿತೇ ಎಂದು ಕಣ್ಣೀರು ಸುರಿಸುತ್ತ ದುಃಖಿಸ ತೊಡಗಿದ.

ಆಗ ಕಪಿಗಳು ಹೇಳಿದ್ದೇನೆಂದರೆ ನಾವು ಇಲ್ಲಿಂದ ಹೋಗುವದೇ ಬೇಡ- ಇಲ್ಲಿಯ ಗುಹೆಯಲ್ಲಿಯೇ ವಾಸವಮಾಡೋಣ ನಾವು ನಿನ್ನನ್ನು ರಾಜನನ್ನಾಗಿ ಮಾಡಿಕೊಳ್ಳುವೆವು ಎಂದುಸುರಿದರು ಆಗ ಹನುಮಂತ ಅಂಗದನನ್ನು ತಕ್ಕಿಸಿಕೊಂಡು ಮಗನೇ ನಿನಗೇಕೆ ಇಂಥ ದುರ್ಬುದ್ಧಿ ಹುಟ್ಟಿತು ? ನೀನು ಸುಗ್ರೀವನಿಗೆ ಅತ್ಯಂತ ಪ್ರಿಯನು ರಾಮಲಕ್ಷ್ಮಣರು ನಿನ್ನನ್ನು ಪ್ರೀತಿ ಯಿಂದ ಕಾಣುತ್ತಿದ್ದಾರೆ ಸುಗ್ರೀವನಿಗಿಂತಲೂ ಹೆಚ್ಚು ಪ್ರೀತಿ ರಾಮನಿಗೆ ನಿನ್ನಲ್ಲಿ ಉಂಟು ನಾ ನಿನಗೆ ಸಂತೋಷವೀಯುತ್ತೇನೆ. ಮರುಳು ಕಪಿಗಳ ಮಾತು ಕೇಳಿ ಇಲ್ಲಿಯೇ ಉಳಿದಿದ್ದಾದರೆ ರಾಮಬಾಣಕ್ಕೆ ಅಭೇದ್ಯವಾದುದು ಯಾವುದು ? ನಿನ್ನ ಜೀವನ ಗಾಳಿಗೊಡ್ಡಿದ ಸೊಡರಿನಂತೆ ಎಂಬುದನ್ನು ಅರಿ ಒಂದು ಗುಪಿತದ ಮಾತು ಹೇಳುತ್ತೇನೆ ಕೇಳು ರಾಮ ಮಾನವನಲ್ಲ ಆತ ಸಾಕ್ಷಾತ್ ಪರಮಾತ್ಮ. ಸೀತೆ ಜಗನ್ಮಾತೆ ಆಕೆ ಮೂಲ ಪ್ರಕೃತಿ ಫಣಿಪತಿಯೇ ಲಕ್ಷ್ಮಣ ನಾವೆಲ್ಲ ದೇವಾಂಶ ಸಂಭೂತರು ಬ್ರಹ್ಮನು ಬೇಡಿ ಕೊಂಡ ಕಾರಣ ಪರಮಾತ್ಮನು ಮನುಜನಾಗಿ ಈ ಭೂಮಿಗೆ ಅವತರಿಸಿ. ದ್ದಾನೆ ರಾಕ್ಷಸರ ನಾಶಕ್ಕೋಸ್ಕರ ಜನಿಸಿದ್ದಾನೆ. ನಾವೆಲ್ಲ ಅವನ ಭಜಕರು ಅವನನ್ನು ಸೇವಿಸಲು ಕಪಿಗಳಾಗಿದ್ದೇವೆ ಅಷ್ಟೇ! ಈಗ ಅವನನ್ನು ಸೇವಿಸಿ ಮುಂದೆ ವೈಕುಂಠದಲ್ಲಿ ಅವನ ಸಂಗಡವೇ ಇರುತ್ತೇವೆ ಈ ಶರೀರವೇ ತಾನು ಎಂದು ತಿಳಿಯಬೇಡ ವಿಷಯ ಸುಖಕ್ಕೆಳಸಬೇಡ ಪ್ರಕೃತಿ ಪುರು ಷರ ಸಮನ್ವಯದಿಂದ ಅಹಂಕಾರ ಉತ್ಪತ್ತಿಯಾಯ್ತು ಬಳಿಕ ಮೂರು ಗುಣದಿಂದ ಈ ಜಗತ್ತು ಹುಟ್ಟಿತು ಆಮೇಲೆ ಈ ಪ್ರಪಂಚವು ಪಂಚ ಭೂತಾತ್ಮಕವಾಗಿ ಮಾಯೆಯಿಂದ ನಡೆಯತೊಡಗಿತು. ಮರುಳು ಮಾನವನಂತೆ ಮುದ್ದುಮುದ್ದಾಗಿ ಏನಾದರೂ ಆಡಬೇಡ. ಈ ಪ್ರಕಾರವಾಗಿ ಜೀವ ಅಹಂಕಾರ ಮೊದಲಾದವುಗಳ ತತ್ವವನ್ನು ತಿಳುಹಿ ಶ್ರೀ ಹರಿಯ ಸೇವೆಯೇ ಮುಖ್ಯ ಎಂದನು ಮತ್ತು ಸೀತೆಯನ್ನರಸುತ್ತ ಮಹೇಂದ್ರ ಪರ್ವತಕ್ಕೆ ನಡೆತಂದರು ಅಲ್ಲಿ ಭಯಂಕರವಾದ ಆಲ್ಲೋಲ ಕಲ್ಲೋಲವಾದ ಸಾಗರವನ್ನು ಕಂಡರು. ಆ ಸಮುದ್ರವನ್ನು ನೋಡುತ್ತ ಕಪಿಬಲವು ನಿಂತಿತು ಸೀತೆಯನ್ನು ಹುಡುಕ

ಹೊರಟರೆ ಈ ಮಹಾಸಮುದ್ರ ಎದುರಾಯಿತು ಏನು ಮಾಡೋಣ ? ಮರಳಿ ಹೋದರೆ ನಮ್ಮ ಜೀವವುಳಿಯಲಿಕ್ಕಿಲ್ಲ ಆದುದರಿಂದ ಇಲ್ಲಿಯೇ ದರ್ಭಾಸನದ ಮೇಲೆ ಕುಳಿತು ರಾಮಪದವನ್ನೇ ಧ್ಯಾನಿಸೋಣ ಎನ್ನುತ್ತ ಸಕಲರೂ ಅಲ್ಲಿಯೇ ಕುಳಿತರು. ಆ ಸಮಯದಲ್ಲಿ ಮಹೇಂದ್ರ ಪರ್ವತದಿಂದ ಒಂದು ಹದ್ದು ಅವರೆಡೆಗೆ ಬರತೊಡಗಿತು ಅವರ ಮಾತನ್ನು ಕೇಳಿ ಈ ದಿನ ಉತ್ತಮವಾದ ಆಹಾರ ನನಗೆ ದೊರಕಿತು ಎನ್ನುತ್ತ ಅವರನ್ನು ಸಮೀಪಿಸಿತು. ಹದ್ದಿನ ಮಾತನ್ನು ಕೇಳಿ ಅವರೆಲ್ಲ ಭಯಭೀತರಾದರು ನಮ್ಮಿಂದ ಯಾವ ರಾಮ ಕಾರ್ಯವೂ ಜರುಗಲಿಲ್ಲ ಇಂಥ ಹದ್ದಿನ ಬಾಯಿಗೆ ತುತ್ತಾಗುತ್ತಿದ್ದೇವೆ. ನಮ್ಮ ಜನ್ಮಕ್ಕೆ ಬೆಂಕಿ ಬೀಳಲಿ ! ಆ ಜಟಾಯುವಿನ ಜೀವನೇ ರಾಮಕಾರ್ಯಕ್ಕೆ ಒದಗಿತು ಆತ ಮಡಿದು ಯೋಗಿಗಳಿಗೂ ಅಲಭ್ಯವಾದ ಮೋಕ್ಷ ಪದವಿಯನ್ನು ಪಡೆದ. ಆ ಮಾತನ್ನು ಆಲಿಸಿದ ಸಂಪಾತಿಯು ಅವರನ್ನು ಕೇಳಿದನು.-ನೀವು ಯಾರು ? ನನ್ನ ಸಹೋದರನ ಮಾತೇಕೆ ಇಲ್ಲಿ ಬಂತು ? ನಿಮಗೆ ನನ್ನ ಹೆದರಿಕೆ ಬೇಡ. ನನ್ನ ಸಹೋದರನ ವಿಷಯವನ್ನು ವಿಶದವಾಗಿ ತಿಳಿಸಿರಿ.

ಆಗ ವಾನರರೆಂದರು-ದಶರಥನ ಮಗ ರಾಮ ಪಿತೃವಾಕ್ಯ ಪರಿಪಾಲನೆಗಾಗಿ ಸೀತೆ ಲಕ್ಷ್ಮಣ ಸಹಿತವಾಗಿ ವನಕ್ಕೆ ಬಂದ ರಾವಣ ಸೀತೆಯನ್ನು ಕದ್ದೊಯ್ದ ಹಾ ರಾಮಾ ಹಾ ಲಕ್ಷ್ಮಣಾ ಎಂದು ಬಾಯ್ಬಿಡುತ್ತಿರುವ ಸೀತೆಯ ದನಿ ಕೇಳಿ ಜಟಾಯುವು ಆ ರಾವಣನೊಡನೆ ಯುದ್ಧ ಮಾಡಿ ಗತಾಸುವಾದ ರಾಮಕಾರ್ಯಕ್ಕಾಗಿ ಕಪಟಿಯಾದ ರಾವಣನ ಖಡ್ಗದ ಹತಿಯಿಂದ ಮರಣಿಸಿದ ಮತ್ತೆ ಸೀತೆಯನ್ನರಸುತ್ತ ಬಂದ ರಾಮನು ಸುಗ್ರೀವನೊಡನೆ ಗೆಳೆತನ ಮಾಡಿದ ವಾಲಿಯನ್ನು ಕೊಂದ. ಮತ್ತೆ ಸೀತೆಯರಸಲು ನಮ್ಮನ್ನೆಲ್ಲ ಕಳುಹಿದ ತಿಂಗಳೊಳಗೆ ಬರಬೇಕೆಂದು ಕಟ್ಟಪ್ಪಣೆ ಮಾಡಿದ ಆದರೆ ನಾವು ಸೀತೆಯನ್ನು ಕಾಣಲಾರದಾದೆವು. ತಿಂಗಳು ಕಳೆಯಿತು ಎಂಬ ಚಿಂತೆಯಲ್ಲಿದ್ದೇವೆ. ಬರಿದೇ ನಾವು ಹೋದದ್ದಾದರೆ ನಮ್ಮ ಪ್ರಾಣವುಳಿಯಲಿಕ್ಕಿಲ್ಲ. ಎಂದು ತಿಳಿದು ನಾವು ಇಲ್ಲಿಯೇ ದೇಹ ಬಿಡಲು ಕುಳಿತಿದ್ದೇವೆ. ಆ ಮಾತನ್ನೆಲ್ಲ ಆಲಿಸಿದ ಸಂಪಾತಿಯು ಇಂತೆಂದನು. ಆ ಜಟಾಯುವು ನನ್ನ ತಮ್ಮನು ಆತನ ಸುದ್ದಿ ತಿಳಿಯದೇ ಸಹಸ್ರವರ್ಷವಾಯಿತು ಆತನಿಗೆ ಜಲ ತರ್ಪಣವನ್ನಾದರೂ ಕೊಡುವೆ ನೀವು ನನ್ನನ್ನು

ನೀರಿನ ಬಳಿಗೆ ಹೊತ್ತೊಯ್ಯಿರಿ ಎಂದು ಹೇಳಿದನು. ಅಂತೆಯೇ ಮಾಡಲು ಸಂಪಾತಿಯು ತನ್ನ ತಮ್ಮನಿಗೆ ಜಲಾಂಜಲಿಯನ್ನಿತ್ತನು ಮತ್ತೆ ಕಪಿಗಳು ಪುನಃ ಆತನನ್ನು ಮೊದಲಿದ್ದ ಸ್ಥಳಕ್ಕೇ ತಂದವು ಆಗ ಸಂಪಾತಿಯು ವಾನರರಿಗೆ ಆನಂದವುಂಟಾಗುವ ಮಾತನ್ನು ಹೇಳಿದನು. ಈ ಶರಧಿಯಲ್ಲಿ ತ್ರಿಕೂಟಾಚಲದಲ್ಲಿ ಲಂಕೆಯಿರುವುದು. ಅದರ ಮಧ್ಯದಲ್ಲಿ ಅಶೋಕಾವನವಿದೆ ಅಲ್ಲಿ ದಾನವಿಯರ ಮಧ್ಯದಲ್ಲಿ ಸೀತಾಮಾತೆಯಿದ್ದಾಳೆ. ಇಲ್ಲಿಂದ ಅದು ಶತ ಯೋಜನ ದೂರದಲ್ಲಿದೆ ಗೃಧ್ರ ದೃಷ್ಟಿಯು ತೀಕ್ಷ್ಣವಾಗಿರುವದರಿಂದ ನನಗೆ ಇಲ್ಲಿಂದಲೇ ಲಂಕೆ ಕಾಣುತ್ತಿದೆ. ಸೀತಾದೇವಿಯೂ ಕಾಣುತ್ತಿದೆ. ಸೀತಾದೇವಿಯೂ ಕಾಣುತ್ತಿದ್ದಾಳೆ ಸಂಶಯವೇ ಬೇಡ ಯಾವನಿಗೆ ಈ ಸಾಗರವನ್ನು ದಾಟಲು ಶಕ್ಯವಿದೆಯೋ ಆತ ಆಕೆಯನ್ನು ನೋಡಿ ಬರಲಿ ನನಗೆ ಪಕ್ಕಗಳಿದ್ದದ್ದಾಗಿದ್ದರೆ ನಾನೇ ಹೋಗಿ ನನ್ನ ಭ್ರಾತೃಘಾತಕನಾದ ರಾವಣನನ್ನು ಕೊಲ್ಲುತ್ತಿದ್ದೆ. ನೂರು ಯೋಜನ ಹಾರಿ ಮರಳಿ ಬರುವ ಸಾಮರ್ಥ್ಯ ಯಾರಿಗುಂಟು ಎಂಬುದನ್ನು ನೋಡಿರಿ ಈ ಬಗ್ಗೆ ನೀವೆಲ್ಲೂ ಯೋಚಿಸಿರಿ. ನಾನಾದರೋ ಒಂದು ನಿಮಿಷಕ್ಕೆ ಹೋಗಿ ಬರುತ್ತಿದ್ದೆ ನನ್ನ ಪಕ್ಷ ಹೋದ ಕಥೆಯನ್ನು ಕೇಳಿರಿ

ನಾನೂ ನನ್ನ ಸಹೋದರನೂ ಕೂಡಿ ಜನಿಸಿದೆವು ನಮ್ಮಿಬ್ಬರ ಬಲವನ್ನು ಪಣವನ್ನಾಗಿಟ್ಟು ನಾವು ಆಕಾಶಕ್ಕೆ ಹಾರಿದೆವು ಬಹುಯೋಜನ ಸಹಸ್ರವನ್ನು ದಾಟಿದೆವು. ದಿನಮಣಿಯ ಉಷ್ಣದ ಕಾರಣದಿಂದ ನಮ್ಮ ರೆಕ್ಕೆ ಸುಡತೊಡಗಿತು. ಭ್ರಾತೃ ಸಹಜವಾದ ಪ್ರೀತಿಯಿಂದ ಆತನಿಗೆ ನಾನು ಮರೆಮಾಡಿದೆ ನನ್ನ ಪಕ್ಕದಿಂದ ನೆರಳು ಮಾಡಿದೆ ನನ್ನ ರೆಕ್ಕೆ ಸುಟ್ಟು ನಾನು ವಿಂಧ್ಯಗಿರಿಯ ಶಿಖರದಲ್ಲಿ ಬಿದ್ದೆ ಮೂರುದಿನ ಮೂರ್ಛಿತನಾಗಿದ್ದೆ ಎಲ್ಲಿ ಬಿದ್ದೆ ಎಂಬುದು ತಿಳಿಯಲಿಲ್ಲ ಈ ರೀತಿ ತಳ್ಳಳಿಸುತ್ತಿರುವಾಗ ಸಮೀಪದಲ್ಲೇ ಒಂದಾನೊಂದು ಆಶ್ರಮವನ್ನು ಕಂಡೆ. ಅದು ಚಂದ್ರಮ ಹರ್ಷಿಯದಾಗಿತ್ತು ಸಂಪಾತೀ ಏನಿದು ನಿನ್ನ ವೇಷ ? ಪಕ್ಷವೇನಾಯ್ತು ? ನೀನು ಬಹಳ ಬಲವಂತನಾಗಿರುವೆ ಎಂಬುದನ್ನು ನಾನು ಬಲ್ಲೆ. ನಿನ್ನ ಪ್ರಾರಬ್ಧಕ್ಕೆ ಅನುಗುಣವಾಗಿ ನಿನ್ನ ಪಕ್ಷ ಸುಟ್ಟಿತು. ಪಕ್ಕವಿಲ್ಲದೆ ನಾನು ಹೇಗೆ ಜೀವಿಸಲಿ ಎಂದು ಮರುಗುತ್ತ ಮುನಿಪಗೆ ನಮಸ್ಕರಿಸಿದೆ. ಶಾಂತನೂ ದಯಾರ್ದ್ರ ಹೃದಯದವನೂ ಆದ ಆತ ನನ್ನನ್ನು ನೋಡಿ ಹೇಳಿದ–ಸಾಧು ಜನರ

ದರ್ಶನದಿಂದ ಈತನ ವಿಷಯಬಾಧೆ, ಕ್ಷುಧೆ, ಭಯ, ಕಾಮಕ್ರೋಧಾದಿ ಲೋಭಗಳೆಲ್ಲ ದೂರವಾಗುವವು. ಎಂದು ಹೇಳುತ್ತಿದ್ದಾನೆಂಬಲ್ಲಿಗೆ ಈ ಸಂಧಿಯು ಮುಕ್ತಾಯಗೊಂಡಿತು.

**ಮೂವತ್ತೇಳನೆಯ ಸಂಧಿ** : ಎಲೈ ಗಿರಿಜಾತೆಯೇ ಚಂದ್ರ ಮುನಿ ಹೇಳಿದ ದೇಹೋತ್ಪತ್ತಿ ವಿಚಾರವನ್ನು ಸಂಪಾತಿ ಯಾವರೀತಿ ತಿಳಿಯಪಡಿಸಿದ ಎಂಬುದನ್ನು ಹೇಳುತ್ತೇನೆ. ಕೇಳುವಂಥವಳಾಗು ರಾಘವನು ನಮ್ಮೆಲ್ಲರನ್ನು ಸಲಹುವನು ಕೃಪಾಳುವಾದ ಚಂದ್ರಮ ಮುನಿ ಹೇಳಿದ ವಾಕ್ಯವನ್ನು ಕೇಳಿರಿ ದುಃಖಕ್ಕೆ ಈ ದೇಹವೇ ಕಾರಣ ಹಮ್ಮಿನಿಂದಲೇ ಈ ದೇಹವಾಗಿದೆ. ಹಮ್ಮು ಜಡವಾಗಿದೆ. ಒಮ್ಮೊಮ್ಮೆ ಕಾದ ಕಬ್ಬಿಣದಂತೆ ತೋರುವದು ದೇಹದೊಡನೆ ತಾದಾತ್ಮ್ಯ ಭಾವನನ್ನು ಹೊಂದುವದು ದೇಹವೇ ತಾನು ಎನ್ನುತ್ತ ಸುಖ ದುಃಖಾದಿಗಳನ್ನು ಅನುಭವಿಸುವದು. ಜೀವ ತಾನು ಜಡಕರ್ಮ ಎಂದು ಭಾವಿಸುವದು ಕರ್ಮದ ಕೋಟಲೆಯಲ್ಲಿ ಸಿಕ್ಕಿ ತೊಳಲಾಡುವದು. ಸ್ವರ್ಗ ವನ್ನೇ ನೆನಸುತ್ತ ನರಕವನ್ನೇ ಅನುಭವಿಸುತ್ತಿರುವದು. ನಾನು ಜಪಮಾಡಿದೆ; ದಾನಕೊಟ್ಟೆ; ಸ್ವರ್ಗದ ಸುಖವನ್ನು ಸವಿವೆ. ಎಂಬ ಆಶೆಯಲ್ಲಿಯೇ ಇರು ತ್ತಾನೆ. ಇದೇ ಸ್ವರ್ಗ ಸುಖ ಎಂದು ಪುಣ್ಯ ತೀರುವವರೆಗೆ ತಿಳಿಯುತ್ತಾನೆ. ಪುಣ್ಯವು ತೀರಿದ ಬಳಿಕ ಕರ್ಮಪ್ರೇರಿತನಾಗಿ ಚಂದ್ರನ ಕಿರಣದ ಮೂಲಕ ವಾಗಿ ಧಾನ್ಯದಲ್ಲಿ ಸೇರುವನು ಆ ಧಾನ್ಯವನ್ನು ನರನಾರಿಯರು ಉಣಲು ರಕ್ತ ರೇತಸ್ಸು ಉಂಟಾಗುವದು. ಪುರುಷನು ನಾರಿಯ ಸಂಗ ಮಾಡಲು ರೇತಸ್ಸು ಸತಿಯ ರಕ್ತದೊಡನೆ ಕೂಡಿ ಒಂದು ರಾತ್ರಿಯಲ್ಲಿ ಚಿರಾಯು ವಾಗುವದು. ಹಾಗೂ ಆದರಲ್ಲಿ ಅಂಡವು ಉತ್ಪತ್ತಿಯಾಗುವದು. ಇಪ್ಪ- ತ್ತೈದು ರಾತ್ರಿಗೆ ಅಂಕುರವಾಗುವದು ತಿಂಗಳೊಂದಕ್ಕೆ ಶಿರ, ಪೃಷ್ಠ, ಕಂಠ ಗ್ರೀವ ಉರಗಳು ಉಂಟಾಗುವವು. ನಂತರ ಚುಂಚು ನಂತರ ಪಾರಕಟಿ, ಜಾನು ಗುಲ್ಫ ಇವೆಲ್ಲ ಎರಡು ತಿಂಗಳಿನಲ್ಲಿ ಉಂಟಾಗುವವು. ಮೂರು ತಿಂಗಳಲ್ಲಿ ಕೀಲುಗಳು ಉಂಟಾಗುವವು. ನಾಲ್ಕು ತಿಂಗಳಿಗೆ ಸರ್ವಾಂಗವು ಉಂಟಾಗುವದು ಐದು ತಿಂಗಳಿಗೆ ಕಂಗಳು, ಕಿವಿ, ಮೂಗು ನಖದಂತ ಮುಂತಾದವು ರೂಪುಗೊಳ್ಳುವವು ಆರನೇ ತಿಂಗಳಲ್ಲಿ ಕರ್ಣದ್ವಾರ ವಾಯು ವಿಕಾರ ಉಪಸ್ಥಾನ, ಶಿರರೋಮ ಮೊದಲಾದವು ಕಾಣಬರುವವು ಎಂಟನೇ ತಿಂಗಳಲ್ಲಿ ಪೂರ್ಣ ಆಕಾರವುಂಟಾಗುವದು. ಜೀವತ್ವವು ಐದನೇಯ ತಿಂಗಳ

ಸಿಂದಲೇ ಪ್ರಾರಂಭವಾಗುವುದು. ನಾಭಿನಾಳದ ಸೂತ್ರದ ಸಹಾಯದಿಂದ ಉಂಡು ಚೆನ್ನಾಗಿ ಬೆಳೆಯುತ್ತೊಡಗುವದು ಅಲ್ಲಿರುವಾಗಲೇ ತನ್ನ ಪೂರ್ವಾರ್ಜಿತದ ಕರ್ಮವನ್ನು ನೆನಪಿಸಿಕೊಳ್ಳುವನು. ಜಠರಾಗ್ನಿಯ ಧಗೆಯಿಂದ ಕಳವಳಿಸುತ್ತ ಹಲವು ಜನ್ಮವೆತ್ತಿದರೂ ಕೂಡ ಇನ್ನೂ ಜನನವಿದೆಯಲ್ಲಾ ವಿಧಿ ತನ್ನ ಬಿಡದು ಎಂದು ಗೋಗರೆಯುವನು ಪುತ್ರ ಪಶುಗೃಹ ಹೆಂಡತಿ ಬಂಧು ಬಾಂಧವರು ಎಂದೆಲ್ಲ ಮನಸ್ಸಿನಲ್ಲಿಯೇ ದೊರೆಯುವಂತೆ ಈ ಮಾಯೆ ಮಾಡಿದಳು ಶಿವ! ಶಿವಾ !! ಎಂದು ಹಲುಬುತ್ತಿರುವನು. ದೇವರ ಪೂಜೆ ಮಾಡದೇ ಕೆಟ್ಟೆ. ಹರಿಯನ್ನು ಸ್ವಪ್ನದಲ್ಲಿಯೂ ನೆನೆಯಲಿಲ್ಲ. ಸತ್ಕಥೆಯನ್ನು ಕೇಳಲಿಲ್ಲ ಎಂದಿತ್ಯಾದಿಯಾಗಿ ಬಡಬಡಿಸುವನು. ಯಾವುದೊಳ್ಳೆಯದನ್ನೂ ತಿಳಿಯಲು ಪ್ರಯತ್ನಪಡಲಿಲ್ಲ ಎಂದು ಹಳಹಳಿಸುವನು ಈ ರೀತಿ ದುಃಖಿಸುತ್ತ ರಾಮಧ್ಯಾನ ಮಾಡಲಿಲ್ಲ. ಪ್ರಾರಬ್ಧ ವೆಂದಿಗಳಿಯುವದು ? ಗರ್ಭವಾಸ ಎಂದಿಗೆ ಮುಕ್ತಾಯವಾಗುವನು ? ಒಮ್ಮೆ ಇಲ್ಲಿಂದ ಹೊರಬಿದ್ದರೆ ಸಾಕು ಇನ್ನು ಮುಂದೆ ಈ ಕಷ್ಟವನ್ನು ಅನುಭವಿಸಲಾರೆ ಎನ್ನುತ್ತ ಚಿಂತಿಸುತ್ತಿರುವನು. ಈ ರೀತಿ ಚಿಂತಿಸುತ್ತಿರುವಾಗಲೇ ನವಮಾಸ ಕಳೆದು ಭೂಮಿಗೆ ಬರುತ್ತಾನೆ ಮಾಯೆಯಿಂದ ಮೊದಲಿನದೆಲ್ಲವೂ ಮರೆಯುತ್ತದೆ. ಬಾಲ್ಯ ಯೌವನ ಮೊದಲಾದವನ್ನೂ ಸುಖದುಃಖವನ್ನೂ ಅನುಭವಿಸುತ್ತಾನೆ. ಈ ಪ್ರಕಾರವಾಗಿ ಕರ್ಮದಲ್ಲಿ ಸಿಕ್ಕು ತೊಳಲಾಡುತ್ತಾನೆ ಆ ಕಾರಣದಿಂದಲೇ ಈ ದೇಹೇಂದ್ರಿಯಾದಿ ಭಾವಗಳನ್ನು ಬಿಟ್ಟು ಸತ್ಯಸನ್ಮಯನಾದ ಚಿದಾನಂದಾತ್ಮನೇ ತಾನೆಂದು ತಿಳಿದು ವರ್ತಿಸಬೇಕು ಪರಮಾರ್ಥ ತತ್ವವನ್ನು ತಿಳಿಯಬೇಕು ಸುಖವೋ ದುಃಖವೋ ಅದನ್ನು ಸಮನಾಗಿ ಅನುಭವಿಸಬೇಕು. ಪ್ರಾರಬ್ಧವನ್ನು ಅನುಭವಿಸಿಯೇ ತೀರಬೇಕು ಕಾರಣ ನೀನು ನನ್ನ ಚಿಂತೆಯನ್ನು ಬಿಡು ಮತ್ತೊಂದು ವಿಷಯವನ್ನು ಹೇಳುತ್ತೇನೆ ಕೇಳು- ತ್ರೇತಾಯುಗದಲ್ಲಿ ವಿಷ್ಣುವು ದಶರಥನ ಮಗನಾಗಿ ಜನಿಸುವನು. ರಾವಣನ ಸಂಹಾರಕ್ಕೋಸ್ಕರ ಸೀತೆ ಲಕ್ಷ್ಮಣ ಸಹಿತ ವನಕ್ಕೆ ಬರುತ್ತಾನೆ. ರಾಮನಿಲ್ಲದ ಹೊತ್ತಿನಲ್ಲಿ ರಾವಣನು ಸೀತೆಯನ್ನು ಕದ್ದೊಯ್ಯುತ್ತಾನೆ. ರಾಮ ಸುಗ್ರೀವನ ಗೆಳೆತನ ಮಾಡುತ್ತಾನೆ ಕಪಿಗಳು ಸೀತಾನ್ವೇಷಣೆಗೆ ಹೋಗುತ್ತಾರೆ ಮತ್ತು ಮಹೇಂದ್ರಾಚಲದ ಈ ಸಮುದ್ರ ತೀರಕ್ಕೆ ಬರುತ್ತಾರೆ. ಆಗ ನೀನು ಸೀತೆಯಿರುವನ್ನು ತಿಳಿಸಿದರೆ ನಿನ್ನ ಪಕ್ಕವು ಪುನಃ ಬರುತ್ತದೆ.

ನೀವು ಮುನಿಯೆಂದ ಮಾತಿನ ಪರಿಣಾಮವನ್ನು ನೋಡಿರಿ ನನಗೆ ಪಕ್ಕ ನೂತನವಾಗಿ ಮೂಡಿ ಬಂತು ನಿಮಗೆಲ್ಲರಿಗೆ ಒಳ್ಳೆಯದಾಗಲಿ. ಸಾಗರ ದಾಟಿದ್ದಾದರೆ ಸೀತೆ ನಿಮಗೆ ಗೋಚರಿಸುವಳು. ದುರ್ಲಂಘ್ಯವಾದ ಈ ಸಾಗರವನ್ನು ರಾಮನಾಮವೇ ದಾಂಟಿಸುವದು. ಸಂಶಯಬೇಡ ಆತನ ಕಾರ್ಯಕ್ಕಾಗಿಯೇ ಹೊರಟವರು ನೀವು ಎಂದು ಹೇಳುತ್ತ ಅವರಿಂದ ಬೀಳ್ಕೊಂಡು ಹಾರಿಹೋದನು. ಇತ್ತ ವಾನರರು ಅಲ್ಲೋಲ ಕಲ್ಲೋಲ ವಾಗುತ್ತಿರುವ. ಆ ಮಹಾಸಮುದ್ರವನ್ನು ನೋಡಿದರು ನಂತರ ಅಂಗದನು ಈ ಬಗ್ಗೆ ವಾನರರಲ್ಲಿ ವಿಚಾರಿಸಿದನು. ಯಾರು ಸಮರ್ಥರಿದ್ದೀರಿ ? ಎಂದು ಕೇಳಿದನು ? ಪ್ರತಿಯೊಬ್ಬರೂ ಒಬ್ಬರೊಬ್ಬರ ಮುಖನೋಡುತ್ತ ನಿಂತರು. ಅಂಗದ ಪುನಃ ಕೇಳಿದ ಒಬ್ಬೊಬ್ಬರೇ ನಿಮ್ಮ ಪರಾಕ್ರಮದ ಸಂಗತಿ ಹೇಳಿರಿ ಆಗ ಒಬ್ಬ ಹತ್ತು ಯೋಜನ ಎಂದ ಇನ್ನೊಬ್ಬ ಇಪ್ಪತ್ತೆಂದ ಮತ್ತೊಬ್ಬ ಮೂವತ್ತೆಂದ ಮಗದೊಬ್ಬ ನಲವತ್ತೆಂದ ಹೀಗೆ ಪ್ರತಿಯೊಬ್ಬರೂ ತಮ್ಮ ತಮ್ಮ ಶಕ್ತಿಯನ್ನು ಪರಿಚಯಿಸಿದರು. ಜಾಂಬವ ತಾನು ನೂರು ಯೋಜನ ಹಾರುವೆ ಆದರೆ ಈಗ ಮುಪ್ಪು ಬಂದಿದೆ ಹಿಂದೆ ವಾಮನಾವತಾರದ ಕಾಲದಲ್ಲಿ ಸಪ್ತಧರಣಿಯನ್ನೂ ಹಾರಿ ಬಂದವ ನಾನು ಆದರೆ ಈಗ ಆ ಶಕ್ತಿ ಇಲ್ಲ. ಆಗ ಅಂಗದ-ನಾನು ಹಾರಬಲ್ಲೆ ಆದರೆ ಬರಲು ಸಮರ್ಥನಾದೇನೋ ಇಲ್ಲವೋ ಹೇಳಲಾರೆ ಎಂದ ಜಾಂಬವ ನುಡಿದದ್ದೇನೆಂದರೆ ನೀನು ಮಾತ್ರ ಸಮರ್ಥನಾದರೂ ಹೋಗಲೇ ಬಾರದು, ಹಾಗಾದರೆ ಯಾರು ಹೋಗ-ಬೇಕು ? ಎಂದು ಆಲೋಚಿಸುತ್ತಿರಲು ಜಾಂಬವನು ಆತನಿಗೆ ಹನುಮಂತ ನನ್ನು ತೋರಿಸಿದನು ಆತನಿಗೆ ಹೇಳಿದ-ನೀನು ಮಾತ್ರ ಈಗ ನಿನ್ನ ಕಾರ್ಯ ಸಾಮರ್ಥ್ಯ ಜಾಣತನ ತೋರುವ ಕಾಲ ಬಂದಿದೆ. ರಾಮ ಕಾರ್ಯಕ್ಕಾಗಿ-ಯೇ ಅವತರಿಸಿದವ ನೀನು ಹುಟ್ಟಿದಾಗಲೇ ಸೂರ್ಯನನ್ನು ಹಣ್ಣೆಂದು ತಿಳಿದು ಭಕ್ಷಿಸಲು ಆಕಾಶಕ್ಕೆ ಹಾರಿದವ ನೀನು ನಿನ್ನ ಪರಾಕ್ರಮವನ್ನಾರು ಬಣ್ಣಿಸಲು ಶಕ್ತರು ಇತ್ಯಾದಿಯಾಗಿ ಆತನನ್ನು ಹೊಗಳಲು ಹನುಮ ಅತಿ ಹರುಷದಿಂದೆದ್ದ ಆತ ಎಲ್ಲರಿಗೂ ಕೇಳುವಂತೆ ಹೇಳಿದ್ದೇನೆಂದರೆ-ನಾನು ಈ ಮಹಾಸಮುದ್ರವನ್ನು ದಾಟಿ ಲಂಕೆಗೆ ಹೋಗಿ ಸೀತೆಯನ್ನು ಕರೆತರುತ್ತೇನೆ ಒಂದು ವೇಳೆ ಸೀತಾದೇವಿ ಅಲ್ಲಿ ಕಾಣದೇ ಇದ್ದರೆ ಲಂಕೆಯನ್ನು ಕಿತ್ತು ತಂದು ಬಿಡುತ್ತೇನೆ. ರಾಮನೆದುರಿನಲ್ಲಿ ಇಡುತ್ತೇನೆ ನನಗೆ ರಾವಣ-ಗೀವಣರೆಲ್ಲ

ಗಣ್ಯವೇ ? ಅವನ ಮಾತನ್ನು ಕೇಳಿ ಜಾಂಬವನು ಎಲೈ ಹನುಮನೇ ಸೀತೆ ಸುಖದಿಂದ ಇದ್ದಾಳೆ. ಆಕೆಯನ್ನು ಕಂಡು ಬಾ ನಿನಗೆ ಮಂಗಳ ವಾಗಲಿ! ಶುಭವಾಗಲಿ !! ನಂತರ ರಾಮನೊಡನೆ ಅಲ್ಲಿಗೆ ಹೋದಾಗ ನಿನ್ನ ಪರಾಕ್ರಮನೆಲ್ಲವನ್ನು ತೋರಿಸುವಿ ಎಂದನು ಗಾಳಿಯೂ ಕೂಡ ನಿನಗೆ ಸಹಾಯಕನಾಗಲಿ ಎಂದು ಹರಸಿ ಕಳುಹಿಸಿದನು. ಹನುಮ ಪರ್ವತೋಪ ಮವಾಗಿ ಬೆಳೆದು ಪರ್ವತಾಗ್ರಕ್ಕೆ ನೆಗೆದ. ಮತ್ತು ಲಂಕೆಗೆ ಹಾರಿ ಹೊರ ಡಲು ತಯಾರಾದನು ಎಂಬಲ್ಲಿಗೆ ಸಂಧಿ ಮುಗಿಯುತ್ತದೆ.

ಕಿಷ್ಕಿಂಧಾಕಾಂಡವು ಇಲ್ಲಿಗೆ ಮುಕ್ತಾಯಗೊಳ್ಳುತ್ತದೆ

## ಸುಂದರ ಕಾಂಡ

### ಮೂವತ್ತೆಂಟನೆಯ ಸಂಧಿ :

ರಾಮಚಂದ್ರನು ಸರ್ವರ ರಕ್ಷಕನು ಭಕ್ತರ ಬಂಧುವು. ಋಷಿ ಮುನಿ ಗಳು ತಾವಾಗಿಯೇ ಕಾಣದ ಆ ಅಖಂಡ ಚಿನುಮಯ ಸ್ವರೂಪನಾದ ರಾಮನ ಮುಂದಿನ ಚರಿತೆಯನ್ನು ಹೇಳುವೆ ಎಲೈ ಗಿರಿಜೆಯೇ ಕೇಳು ವಂಥವಳಾಗು

ಆ ಮಹಾತ್ಮನಾದ ಹನುಮಂತನು ರಾಮಚಂದ್ರನ ಚರಣವನ್ನೇ ಧ್ಯಾನಿಸುತ್ತಾ ತನ್ನ ಸಂಗಡಿಗರಾದ ಕಪಿಗಳಿಗೆ ಈ ರೀತಿ ಹೇಳಿದನು ನಾನು ಆಕಾಶಮಾರ್ಗದಿಂದಲೇ ಗಮಿಸುವೆ ಸಮುದ್ರವನ್ನು ದಾಟಿ ಸೀತೆಯನ್ನು ಕಾಣುವೆ. ಪುನಃ ರಾಮನ ಬಳಿ ಬಂದು ಸೇರುವೆ ರಾಮನ ಸ್ಮರಣೆ ಮಾತ್ರ ದಿಂದಲೇ ಸಮುದ್ರ ದಾಟುವದು ಕಷ್ಟವೇನಲ್ಲ ಎಂದು ಹೇಳುತ್ತ ಬಾಲ ವನ್ನು ಮೇಲಕ್ಕೆತ್ತಿ, ಮೇಲ್ಮುಖ ಮಾಡಿ ಗಿರಿಯನ್ನು ಕಾಲಿನಿಂದ ಅದುಮಿ ಮೇಲಕ್ಕೆ ದಕ್ಷಿಣ ದಿಕ್ಕಿಗೆ ಹಾರಿದನು. ವಾಯುವೇಗದಿಂದ ಹಾರಿ ಹೋಗು ತ್ತಿರುವ ಅವನನ್ನು ನೋಡಿ ದೇವತೆಗಳು ಆಶ್ಚರ್ಯಚಕಿತರಾದರು. ಅವ. ನನ್ನು ಪರೀಕ್ಷೆಗೆ ಒಳಪಡಿಸೋಣ ಎಂದೆನ್ನುತ್ತ ನಾಗ ಮಾತೆಯಾದ ಸುರಸೆಯನ್ನು ಕರೆದು ಆಕೆಗೆ ಇಂತೆಂದರು-ನೀನು ಹೋಗಿ ಆ ಹನುಮಂತ ನಿಗೆ ಕಿಂಚಿತ್ ವಿಘ್ನವನ್ನು ಉಂಟುಮಾಡು. ಕೂಡಲೇ ಅವಳು ಹನು- ಮಂತನ ಬಳಿಗೆ ಬಂದು ಇಂತೆಂದಳು-ದೇವತೆಗಳು ನಿನ್ನನ್ನು ನನಗೆ ಆಹಾರ ವನ್ನಾಗಿ ಮಾಡಿರುತ್ತಾರೆ ನನ್ನ ಬಾಯನ್ನು ಪ್ರವೇಶಿಸು. ಎಂದಳು. ಆ

ಮಾತನ್ನು ಕೇಳಿದ ಹನುಮಂತನು-ನಾನು ರಾಮಕಾರ್ಯಕ್ಕಾಗಿ ಹೊರಟಿ ದ್ದೇನೆ. ಆ ಕೆಲಸವನ್ನು ಮುಗಿಸಿ ನಿನ್ನ ಬಾಯನ್ನು ಸೇರುತ್ತೇನೆ ಈಗ ದಾರಿ ಬಿಡು ಎಂದನು ಆದಾಗದು ನನ್ನ ಹಸಿವೆ ಹೆಚ್ಚಾಗುತ್ತಿದೆ ನನ್ನ ಹೊಟ್ಟೆ ಸೇರಿ ಬರದೇ ಇದ್ದರೆ ನಿನ್ನನ್ನು ನುಂಗುವೆ ಎಂದು ಬಾಯಿ ತೆರೆದಳು ಹನುಮ ಬೃಹದಾಕಾರವಾಗಿ ಬೆಳೆದ ಆಕೆಯೂ ಬಾಯನ್ನು ಹೆಚ್ಚಾಗಿ ತೆರೆದಳು ಮಾರುತಿ ಹತ್ತು ಯೋಜನ ಬೆಳೆದರೆ ಆಕೆ ಇಪ್ಪತ್ತು ಯೋಜನ ಬಾಯಿ ತೆರೆದಳು. ಆಕೆ ಭಯಂಕರವಾಗಿ ಬಾಯ್ದೆರೆದ ಸಂದರ್ಭದಲ್ಲಿ ಹನುಮ ಅಂಗುಷ್ಠಾಕಾರವಾಗಿ ಪರಿವರ್ತನೆ ಹೊಂದಿ ಆಕೆಯ ಬಾಯಿ ಪ್ರವೇಶಿಸಿ ಹೊಟ್ಟೆಗೆ ಹೋಗಿ ಹೊರಬಂದುಬಿಟ್ಟನು. ನಾನು ನಿನ್ನ ಹೊಟ್ಟೆ ಪ್ರವೇ- ಶಿಸಿ ಬಂದಿದ್ದೇನೆ ಈಗ ದಾರಿ ಬಿಡು ಎಂದನು ನೀನು ನಿಜವಾಗಿಯೂ ಕಾರ್ಯಸಾಧಕನು. ನಿನ್ನ ಬಲವನ್ನು ತಿಳಿಯಲು ದೇವತೆಗಳು ನನ್ನನ್ನು ಕಳುಹಿಸಿದ್ದರು ಎಂದು ಹೇಳಿ ಸ್ವರ್ಗಕ್ಕೆ ಹೋದಳು ಆವಳು ಅತ್ತ ಹೋದ ನಂತರ ಮಾರುತಿ ವಾಯುವೇಗದಿಂದ ಮುಂದುವರಿದ ಅಷ್ಟರಲ್ಲಿ ಮೈನಾಕ ನೆಂಬ ಪರ್ವತರಾಜನು ಶರಧಿಯ ಹೇಳಿಕೆಯಂತೆ ರಾಮಕಾರ್ಯಕ್ಕೆ ಹೊರಟ ಹನುಮನಿಗೆ ಸ್ವಲ್ಪ ವಿಶ್ರಾಂತಿಯನ್ನು ಕೊಡಲು ಮೇಲೆದ್ದು ಬಂದನು. ಆತ ಹನುಮನಿಗೆ ಹೇಳಿದ-ಸ್ವಲ್ಪ ವಿಶ್ರಮಿಸಿಕೊಂಡು ಉಪಾಹಾರಾದಿಗಳನ್ನು ಸೇವಿಸಿ ಮುಂದುವರಿ, ಹನುಮ ಹೇಳಿದ-ನಾನು ರಾಮಕಾರ್ಯಕ್ಕಾಗಿ ಹೊರಟಿದ್ದೇನೆ. ಈಗ ಇವನ್ನೆಲ್ಲ ಸೇವಿಸುವದು ತರವಲ್ಲ ಎಂದೆನ್ನುತ್ತ ಆತ- ನನ್ನು ಹಸ್ತದಿಂದ ಸ್ಪರ್ಶಿಸಿ ಮುಂದಕ್ಕೆ ಹೊರಟ ಅಷ್ಟರಲ್ಲಿ ಮತ್ತೊಂದು ಕಂಟಕ ಎದುರಾಯಿತು. ಛಾಯಾ ಗ್ರಾಹಿಯಾದ ಸಿಂಹಿಕೆ ಎಂಬ ರಾಕ್ಷಸಿ ಯು ಆತನನ್ನು ಸಮುದ್ರದ ಕೆಳಗಡೆಗೆ ಸೆಳೆಯತೊಡಗಿದಳು ತನ್ನ ವೇಗ- ವನ್ನು ತಡೆದವರಾರು ಎಂದೆನ್ನುತ್ತ ಮಾರುತಿಯು ಅತ್ತಿತ್ತ ನೋಡಿದ. ಯಾರೂ ಕಾಣಲಿಲ್ಲ ಕೆಳಗಡೆ ನೋಡಿದ ಸಿಂಹಿಕೆಯನ್ನು ಕಂಡ ವೇಗದಿಂದ ಬಂದು ಆವಳ ಬಾಯನ್ನು ಸೇರಿ ಮಸ್ತಕಕ್ಕೆ ಬಂದು ಬೆಳೆದು ಆಕೆಯನ್ನು ಕೊಂದು ಹೊರಬಂದ ಮತ್ತೆ ಮೊದಲಿನ ವೇಗದಿಂದಲೇ ಹೊರಟು ತ್ರಿಕೂಟ ಪರ್ವತವನ್ನು ಕಂಡು ಅದರ ಮೇಲೆ ಇಳಿದು ಸುತ್ತಲೂ ಪ್ರಾಕಾರ ವಿರುವ ಭದ್ರವಾದ ಕೋಟೆಯನ್ನು ಕಂಡ ಹ್ಯಾಗೆ ಒಳಸೇರಲಿ ಎಂದು ಆಲೋಚಿಸುತ್ತ ರಾತ್ರಿಯಾಗುವವರೆಗೆ ಕಾದನು ನಂತರ ಸೂಕ್ಷ್ಮರೂಪದಿಂದ

ಕೋಟೆಯು ಒಳಹೊಕ್ಕನು ಸೂಕ್ಷ್ಮ ರೂಪದಿಂದ ಒಳಹೊಕ್ಕು ಹೋಗು-ವಾಗ ಲಂಕೆಗೆ ಕಾವಲಿರುವ ಲಂಕಿಣಿ ಎಂಬ ರಾಕ್ಷಸಿ ಆತನನ್ನು ಕಂಡಳು ಎಲೋ ನೀನು ಯಾರು ? ಕಪಿರೂಪದಿಂದ ಎಲ್ಲಿಗೆ ಹೋಗುವೆ ? ನನ್ನನ್ನು ಕೇಳದೇ ಎಲ್ಲಿಗೆ ಹೋಗುತ್ತೀ ಎಂದು ಅಬ್ಬರಿಸಿದಳು. ಅವಳು ಹನುಮನಿಗೆ ಹೊಡೆಯಲು ಹನುಮನೂ ಆಕೆಗೆ ಹೊಡೆದನು ಆಕೆ ರಕ್ತವುಗುಳುತ್ತ ಕೆಳಕ್ಕೆ ಬಿದ್ದಳು. ಮತ್ತೆ ಮೇಲಕ್ಕೆದ್ದು ಹೋಗು ! ನೀನು ಲಂಕೆಯನ್ನು ಜಯಿಸಿದೆ !! ನಿನಗೆ ಒಳ್ಳೆಯದಾಗಲಿ !!! ಎಂದು ಹರಸಿ ಕಳುಹಿಸಿದಳು

ನನಗೆ ಬ್ರಹ್ಮ ಈ ರೀತಿ ವರವಿತ್ತಿದ್ದ. ಅದನ್ನು ಕೇಳು ತ್ರೇತಾಯುಗದಲ್ಲಿ ವಿಷ್ಣುವೇ ದಶರಥನಿಗೆ ಮಗನಾಗಿ ಜನಿಸುವನು. ಯೋಗಮಾಯೆಯೇ ಸೀತೆಯೆಂದೆನಿಸಿ ಆತನಿಗೆ ಪತ್ನಿಯಾಗುವಳು ರಾಮ ಸೀತೆಯೊಡನೆ ಕಾನ-ನಕ್ಕೆ ಬರುವ ರಾವಣ ಅವಳನ್ನು ಕದ್ದೊಯ್ಯುವ ಸೀತಾನ್ವೇಷಣಕ್ಕಾಗಿ ಒಂದು ಕಪಿ ಬರುವದು. ಆ ಕಪಿ ಕಾವಲಿರುವ ನಿನಗೆ ಹೊಡೆಯುವದು ಆಗ ಲಂಕೆಗೆ ಕೇಡುಗಾಲ ಬಂತು ಎಂದು ತಿಳಿ ಎಂದು ಬ್ರಹ್ಮ ಹೇಳಿದ್ದಾನೆ ಆ ಸಮಯ ಈಗ ಬಂದಿದೆ ನೀನು ಲಂಕಾಪುರ ಪ್ರವೇಶ ಮಾಡು. ಸೀತೆ ಅಶೋಕಾ ವನದಲ್ಲಿ ಇದ್ದಾಳೆ ರಾಮನನ್ನು ಹಂಬಲಿಸುತ್ತಿದ್ದಾಳೆ ಸೀತೆಯನ್ನು ಕಂಡು ಆ ವೃತ್ತಾಂತವನ್ನು ಬೇಗನೇ ಹೋಗಿ ರಾಮನಿಗೆ ಹೇಳು ಎಂದಳು. ಈಗ ನಾನು ಧನ್ಯೆಯಾದೆ ಕೃತಕೃತ್ಯೆಯಾದೆ ನನ್ನ ಭವಪಾಶ ಹರಿಯುವ ಕಾಲ ಬಂದಿದೆ ಯಾವದೇ ಯೋನಿಯಲ್ಲಿ ಜನ್ಮವೆತ್ತಿರಲಿ ಯಾವದೇ ಚೇಷ್ಟೆಯನ್ನು ಮಾಡಿರಲಿ. ಹರಿಶರಣರ ಸಂಗ ಮಾಡಿದ ಮಾತ್ರಕ್ಕೆ ಅವೆಲ್ಲ ದೂರವಾಗುವವು. ಕಷ್ಟವೆಲ್ಲ ದೂರವಾಗುವವು ದಯಾನಿಧಿಯಾದ ಶ್ರೀ ರಾಮನು ಈ ಸಜ್ಜನರ ಸಂಗವನ್ನು ನನಗೆ ಕಲ್ಪಿಸಿದ ಎಂದು ನಾನಾ ಪ್ರಕಾರದಿಂದ ಶ್ರೀ ರಾಮನ ಗುಣಗಾನ ಮಾಡಿದಳು. ಹನುಮಂತ ಅವಳಿಂದ ಬೀಳ್ಕೊಂಡು ಲಂಕೆಯ ಒಳಸೇರಿದ. ರಾವಣನಿಗೆ ಅಶುಭ ಶಕುನವೂ ಇತ್ತ ರಾಮನಿಗೆ ಶುಭಶಕುನಗಳೂ ಉಂಟಾದವು.

ಎಲೈ ಪಾರ್ವತಿಯೇ ಮುಂದಿನ ಸಂಗತಿಯನ್ನು ಕೇಳು ಹನುಮನು ಆ ರಾತ್ರಿಯಲ್ಲಿ ಸೂಕ್ಷ್ಮ ರೂಪ ಧರಿಸಿ ಲಂಕೆಯನ್ನೆಲ್ಲ ಶೋಧಿಸಿದನು. ಎಲ್ಲೆಲ್ಲೂ ಸೀತೆಯನ್ನು ಕಾಣದೆ ಅರಮನೆಯನ್ನು ಪ್ರವೇಶಿಸಿದನು ಅಲ್ಲೂ ಕೂಡ ಸೀತೆಯನ್ನು ಕಾಣಲಿಲ್ಲ ನಂತರ ಲಂಕಿಣಿ ಹೇಳಿದ ಕುರುಹನ್ನು ನೆನಪಿಸಿ

ಕೊಂಡು ಅಶೋಕಾ ವನದ ಕಡೆಗೆ ಹೊರಟ. ಅತ್ಯಂತ ಸುಂದರವಾಗಿದ್ದ ತೋಟವಾಗಿತ್ತು ಅದು. ಅಲ್ಲಿ ಒಂದು ಶಿಂಶಪಾವೃಕ್ಷದ ಕೆಳಗೆ ಕುಳಿತಿದ್ದ. ದನುಜೆಯರಿಂದ ಸುತ್ತುವರಿಯಲ್ಪಟ್ಟಿದ್ದ, ಕೃಶಳಾದ, ದುಃಖಿತೆಯಾದ ಆ ಸೀತಾ ಮಾತೆಯನ್ನು ಹನುಮ ಕಂಡ ದನುಜೆಯರ ಮಧ್ಯದಲ್ಲಿದ್ದಾಳೆ. ಕಣ್ಣಿನಿಂದ ದುಃಖಾಶ್ರುಗಳು ಸುರಿಯುತ್ತಿವೆ. ರಾಮಾ ರಾಮಾ ಎಂದು ಜಪಿಸುತ್ತಿದ್ದಾಳೆ. ಹನುಮ ವೃಕ್ಷದ ಶಾಖಾಗ್ರದಲ್ಲಿ ಕುಳಿತ ಸೀತೆಯನ್ನು ಕಂಡು ತಾನು ಬಂದ ಕಾರ್ಯ ಸಾರ್ಥಕವಾಯಿತು ಎಂದುಕೊಂಡ. ಅಷ್ಟರಲ್ಲಿಯೇ ಕಿಲಕಿಲಾರವ ಕೇಳಿಸಿತು ಆ ಕಡೆ ನೋಡಲು ತನ್ನ ಹೆಂಡಂದಿರೊಡನೆ ಬರುವ ರಾವಣನನ್ನು ಕಂಡ ಹನುಮ ಗಿಡದ ಮರೆಯಲ್ಲಿ ಅಡಗಿದ.

ಇತ್ತ ರಾವಣ ಚಿಂತೆಯಲ್ಲಿಯೇ ಇದ್ದ ಸೀತೆಯನ್ನು ಕಂಡು ಬಹಳ ದಿನವಾಯಿತ್ತು ಇನ್ನೂ ರಾಮನ ಸುಳಿವಿಲ್ಲ ನಾನು ನಿಜವಾಗಿಯೂ ಪುಣ್ಯಹೀನ ಈ ನೆವದಲ್ಲಾದರೂ ರಾಮ ಬರುವನೆಂದು ಭಾವಿಸಿದೆ ಆದರೂ ರಾಮ ಬರಲಿಲ್ಲ ನಾನು ಯಾವಾಗ ರಾಮನಲ್ಲಿ ಸೇರುವೆ ಎಂದು ಚಿಂತಾತುರನಾಗಿದ್ದ ಈ ರೀತಿಯಾಗಿ ಯೋಚಿಸುತ್ತಿದ್ದ ರಾವಣನಿಗೆ ಒಂದು ಕನಸು ಬಿತ್ತು ರಾಮ ಸೀತಾನ್ವೇಷಣೆಗಾಗಿ ಕಪಿಯನ್ನು ಕಳುಹಿಸಿದ್ದಾನೆ. ಆತ ಈ ವನಕ್ಕೆ ಬಂದಿದ್ದಾನೆ, ಸೀತೆಯಿದ್ದ ವೃಕ್ಷಾಗ್ರದಲ್ಲಿ ಕುಳಿತಿದೆ ನೋಡಿದರೆ ಅಡಗಿಕೊಳ್ಳುತ್ತದೆ. ಏನಿದದ್ಭುತ !! ಈ ಕನಸು ಸತ್ಯವಾಗಲಿ ಎಂದುಕೊಳ್ಳುತ್ತಾನೆ ಬೇಗನೆ ಹೋಗಿ ರಾಮನಿಗೆ ತಿಳಿಸುವಂತೆ ಆಲೋಚಿಸಿ ಸೀತೆಯೆಡೆಗೆ ಬಂದ ಸೀತೆ ಹೆದರಿ ಭೂಮಿಯನ್ನು ನೋಡುತ್ತ ನಡುಗುತ್ತಿದ್ದಳು. ರಾಮ ನಿನಗೆ ಸಿಗಲಾರ ನನ್ನಿಂದ ಸಕಲ ಭೋಗಭಾಗ್ಯಗಳನ್ನು ಪಡೆ ಎಂದು ನಾನಾ ರೀತಿಯಿಂದ ಸೀತೆಯನ್ನು ಪುಸಲಾಯಿಸುತ್ತಲಿದ್ದ ಎಂಬಲ್ಲಿಗೆ ಸಂಧಿ ಮುಗಿಯುತ್ತದೆ

ಮೂವತ್ತೊಂಭತ್ತನೆಯ ಸಂಧಿ : ಎಲೈ ಗಿರಿಜಾತೆಯೇ ಮುಂದಿನ ಕಥೆಯನ್ನು ಕೇಳು

ಈ ರೀತಿ ರಾವಣನು ಸೀತೆಯನ್ನು ಪ್ರಲೋಭನೆಗೊಳಿಸುತ್ತಿರಲು ಆಕೆ ರಾವಣನನ್ನು ಕುರಿತು-ತೃಣವನ್ನು ಎದುರಿಸಿ ಈ ರೀತಿ ನುಡಿದಳು - ರಾಮ ಲಕ್ಷ್ಮಣರಿಲ್ಲದಾಗ ಭಿಕ್ಷುವೇಷ ಧರಿಸಿ ನೀನು ನನ್ನನ್ನು ಕದ್ದು ತಂದೆ ನೀನು ರಾಮಾಸ್ತ್ರ ಹತಿಯಿಂದ ಸಾಯುವೆ ರಾಘವನಿಗೆ ನೀನು ಸಮನೇ !

ರಾಮ ಶರಧಿಯನ್ನು ಕಟ್ಟಿ ಸೇನಾಸಮೇತನಾಗಿ ಬಂದು ನಿನ್ನನ್ನು ಪುತ್ರ ಮಿತ್ರಾದ್ಯರೊಂದಿಗೆ ಹತ ಮಾಡಿ ನನ್ನನ್ನು ಬಿಡಿಸಿಕೊಂಡು ಹೋಗುತ್ತಾನೆ ಎನ್ನಲು ರಾವಣನು ರೌದ್ರಾವತಾರ ತಾಳಿ ಅವಳ ಮೇಲೆ ಏರಿಹೋದನು ಮಂಡೋದರಿ ಅವನನ್ನು ತಡೆದಳು ಕಡುದುಃಖಿತೆಯಾದ ಅವಳನ್ನು ಬಿಡು ಅವಳು ಮಾನವಿ ಅವಳು ನಿನಗೆ ಸಮಳೇ! ಗಂಧರ್ವರು ಅಪ್ಸರೆಯರು ಮೊದಲಾದವರಿರುವಾಗ ಇವಳೇನು? ಎಂದು ಸಮಾಧಾನಪಡಿಸಿದಳು. ಇನ್ನೆರಡೇ ತಿಂಗಳು ಅವಧಿ ಕೊಡುತ್ತೇನೆ. ಅಷ್ಟರಲ್ಲಿ ಇವಳು ನನ್ನವಳಾದರೆ ಸರಿ! ಈ ರೀತಿ ಹೇಳಿ ತನ್ನ ಪರಿವಾರದೊಡನೆ ಅಂತಃಪುರಕ್ಕೆ ಹೋದನು ಅವಳ ರಕ್ಷಣೆಗೆ ಇದ್ದ ರಾಕ್ಷಸಿಯರು ಅವಳಿಗೆ ತ್ರಾಸು ಕೊಟ್ಟು ಪೀಡಿಸುತ್ತಿದ್ದಾಗ ರಾಕ್ಷಸಿಯರಲ್ಲಿ ಒಬ್ಬಳಾದ ತ್ರಿಜಟೆಯೆಂಬವಳು ಆ ರಾಕ್ಷಸಿಯರಿಗೆ ಹೀಗೆಂದಳು-ಯಾಕೆ ಅವಳನ್ನು ಪೀಡಿಸುತ್ತೀರಿ. ನನಗೊಂದು ಸ್ವಪ್ನ ರಾಮ ಬಂದು ಅವಳನ್ನು ಕರಕೊಂಡು ಹೋದ ದನುಜರನ್ನೆಲ್ಲ ಸಂಹಾರ ಮಾಡಿದ ರಾಮ ತನ್ನ ವಾಮಾಂಕದಲ್ಲಿ ಸೀತೆಯನ್ನು ಕುಳ್ಳಿರಿಸಿಕೊಂಡ. ರಾವಣನಾದರೋ ತನ್ನ ಪರಿವಾರದವರೊಡಗೂಡಿ ತೀರಸಮುಖನಾಗಿ ಹೋದ. ವಿಭೀಷಣ ರಾಜನಾದ ಇತ್ಯಾದಿಗಳನ್ನು ಕಂಡೆ ಈ ಸ್ವಪ್ನ ನಿಜವಾಗುವದು. ಈ ಮಾತನ್ನು ಕೇಳಿದ ರಾಕ್ಷಸಿಯರು ಹೆದರಿದರು ಗಾಬರಿಗೊಂಡರು. ತಮ್ಮನ್ನು ರಕ್ಷಿಸಲು ಸೀತೆಯನ್ನು ಕೇಳಿಕೊಂಡರು ಇತ್ತ ಸೀತೆ ದುಃಖಿಸುತ್ತಿದ್ದಾಳೆ ರಾಮ ಎಂದು ಬರುವನೋ ಎಂದು ಕಾತರಿಸುತ್ತಿದ್ದಾಳೆ. ಮರಣವೂ ಬರುವದಿಲ್ಲ. ಎಂದು ಆಲೋಚಿಸಿ ನಾಯಲು ಸಿದ್ಧಳಾಗಿ ನೇಣು ಸಿಕ್ಕಿಸಿಕೊಂಡಳು. ವಸ್ತ್ರದಿಂದ ಬಿಗಿದುಕೊಂಡಳು ಅಷ್ಟರಲ್ಲಿ ಅವಳಿಗೆ ಕರ್ಣಾನಂದಕರವಾದ ಮಾತು ಕೇಳಿಬಂತು - ಇಕ್ಷ್ವಾಕುವಂಶದ ಅರಸು ದಶರಥ ಆತನ ಮಗ ರಾಮ ತಂದೆಯ (ಶಪಥ) ಪ್ರತಿಜ್ಞೆಯನ್ನು ಪೂರ್ಣಗೊಳಿಸಲು ಸೀತಾ ಲಕ್ಷ್ಮಣರೊಡನೆ ಅಡವಿಗೆ ಬಂದ, ಪಂಚವಟಿಯಲ್ಲಿ ತಂಗಿದ್ದಾಗ ರಾವಣ ಸೀತೆಯನ್ನು ಕದ್ದೊಯ್ದ. ಸೀತೆಯನ್ನರಸುತ್ತ ಬಂದ ರಾಮನು ಜಟಾಯುವನ್ನು ಕಂಡ. ಮುಂದೆ ಋಷ್ಯಮೂಕ ಪರ್ವತದ ಶಿಖರದಲ್ಲಿದ್ದ ಸುಗ್ರೀವನನ್ನು ಕಂಡು ಆತನೊಡನೆ ಸಖ್ಯ ಬೆಳೆಸಿದ. ಸೀತಾದೇವಿಯನ್ನರಸಲು ನಾಲ್ಕೂ ದಿಕ್ಕಿಗೆ ವಾನರರ ತಂಡವನ್ನು ಕಳುಹಿಸಿದ ಆ ಕಪಿಗಳಲ್ಲಿ ಒಬ್ಬನಾದ ನಾನು ದಕ್ಷಿಣಕ್ಕೆ ಬಂದೆ. ಸಂಪಾತಿಯ ಹೇಳಿಕೆಯಂತೆ ಲಂಕೆಗೆ ಬಂದೆ. ಸೀತೆಯನ್ನು

ಹುಡುಕಿ ಹುಡುಕಿ ಅಶೋಕಾವನದಲ್ಲಿ ಆಕೆಯನ್ನು ಕಂಡೆ ಇಂದು ನಾನು ಕೃತಕೃತ್ಯನಾದೆ ಎಂದು ಎಲ್ಲ ಘಟನೆಗಳನ್ನು ವಿಶದವಾಗಿ ಹೇಳಿದ. ಇದೆಲ್ಲವನ್ನೂ ಸೀತೆ ಬೇಗಾಗಿ ಕೇಳಿದಳು ಕರ್ಣಾನಂದಕರನಾದ ಈ ವಾರ್ತೆ ಕೇಳಿ ಇದೇನು ಸ್ವಪ್ನವೋ ಜಾಗರವೋ ತಿಳಿಯುವದಿಲ್ಲ ರಾಮನಿಗೆ ಹಿತವಂತನೇ ಆದದ್ದಾಗಿದ್ದರೆ ನನ್ನ ಮುಂದೆ ಬಂದು ನಿಲ್ಲಲಿ ಎಂದಳು. ಹನುಮಂತ ಮುಂದೆ ಬಂದು ಕೈಮುಗಿದು ನಿಂತ ಸೀತೆ ಹಿಂದಿನಂತೆ ಸಂಶಯಪಟ್ಟಳು. ಆದರೆ ಹನುಮ ಹೇಳಿದ ಸಂಶಯ ಬೇಡ ನಾನು ಶ್ರೀ ರಾಮನ ದಾಸಾನುದಾಸ ಸುಗ್ರೀವನ ಸಚಿವ ರಾಮ ನಿನ್ನನ್ನು ಹುಡುಕುತ್ತ ಋಷ್ಯಮೂಕ ಪರ್ವತಕ್ಕೆ ಬಂದ ಸುಗ್ರೀವನ ಸಖ್ಯ ಮಾಡಿದ. ಬಾಲಿಯನ್ನು ಕೊಂದ ಸುಗ್ರೀವನಿಗೆ ಪಟ್ಟಕಟ್ಟಿದ; ಸುಗ್ರೀವನ ಆಣತಿಯಂತೆ ಸೀತೆಯನ್ನರಸಿ ನಾವು ಹೊರಟೆವು. ಇಲ್ಲಿ ನಾನು ನಿನ್ನನ್ನು ಕಂಡೆ ರಾಮಲಕ್ಷ್ಮಣರು ಸುಖದಲ್ಲಿದ್ದಾರೆ. ನಿನ್ನನ್ನು ನೆನೆಯುತ್ತಿದ್ದಾರೆ ರಾಮನಾಮಾಂಕಿತ ಮುದ್ರೆಯುಂಗುರವನ್ನ ರಾಮ ಕೊಟ್ಟಿದ್ದಾನೆ ಇದನ್ನು ತೆಗೆದುಕೋ ಎಂದು ಹೇಳಿ ಸೀತಾಮಾತೆಗೆ ಆ ಉಂಗುರ ನೀಡುತ್ತಾನೆ. ಸೀತೆ ಆ ಮುದ್ರಿಕೆಯನ್ನು ಸ್ವೀಕರಿಸಿ ರಾಮನಾಮವನ್ನು ನೋಡಿ ರಾಮನನ್ನು ಕಂಡಷ್ಟೇ ಸಂತೋಷಪಡುತ್ತಾಳೆ ನೀನು ರಾಮನಿಗೆ ಅತ್ಯಂತ ವಿಶ್ವಾಸಿ ಎಂದು ಅವನನ್ನು ಹೊಗಳುತ್ತಾಳೆ ರಾಕ್ಷಸರು ಎರಡು ತಿಂಗಳ ನಂತರ ನನ್ನನ್ನು ತಿನ್ನುವರು. ಕಾರಣ ಕೂಡಲೇ ಸುಗ್ರೀವನ ಸಂಗಡ ರಾಮನಿಗೆ ಬರಹೇಳಬೇಕು. ಆತನು ರಾವಣನನ್ನು ಕೊಂದು ನನ್ನನ್ನು ಕರಕೊಂಡು ಹೋಗಲಿ ಎನ್ನುತ್ತಾಳೆ. ವಾನರರು, ಸುಗ್ರೀವ ಮೊದಲಾದವರೆಲ್ಲ. ಈ ಸಮುದ್ರವನ್ನು ಹೇಗೆ ದಾಟಿಯಾರು ? ಎಂದು ಕೇಳಲು ನಾನು ಅವರನ್ನೆಲ್ಲ ದಾಟಿಸುತ್ತೇನೆಂದ. ನಿಮ್ಮ ಸೆರೆ ಬಿಡಿಸುತ್ತೇನೆ. ಎಂದ ನನಗೆ ಹೋಗಲು ಅಪ್ಪಣೆಯನ್ನು ಕೊಡಬೇಕು ಎಂದು ಬೇಡಿಕೊಂಡ ಹಾಗೂ ರಾಮನಿಗೆ ಗುರುತಿಗಾಗಿ ಯಾವುದಾದರೂ ವಸ್ತುವೊಂದನ್ನು ಕೊಡಬೇಕು ಎಂದು ಕೇಳಿಕೊಳ್ಳಲು ಸೀತೆ ತನ್ನ ಶಿರದಲ್ಲಿದ್ದ ಚೂಡಾರತ್ನವನ್ನು ಕೊಟ್ಟಳು ಮತ್ತು ಚಿತ್ರಕೂಟದಲ್ಲಿ ನಡೆದ (ಕುರುಹು) ಘಟನೆಯೊಂದನ್ನು ತಿಳಿಸಿದಳು. ರಾಮ ತನ್ನ ತೊಡೆಯ ಮೇಲೆ ಮಲಗಿರುವಾಗ ಒಂದಾನೊಂದು ಕಾಗೆ ಬಂದು ನನ್ನ ಪಾದಾಂಗುಷ್ಠವನ್ನು ತಿನ್ನತೊಡಗಿತು ಹಾ ! ಎಂದೊರಲಿದೆ. ರಾಮ ಇದನ್ನು ಕಂಡು ಕ್ರೋಧಾ

ವಿಷ್ಟನಾಗಿ ತೃಣವೊಂದನ್ನು ಮಂತ್ರಿಸಿ ಆ ಕಾಗೆಯ ಮೇಲೆ ಬಿಟ್ಟನು ತೃಣ ಕಾಗೆಯ ಬೆನ್ನಟ್ಟಿತು. ಲೋಕತ್ರಯಗಳನ್ನು ಓಡಾಡಿ ರಕ್ಷಕರಿಲ್ಲದೆ ಕಡೆಗೆ ರಾಮ ಪಾದದ ಮೇಲೆ ಬಿದ್ದು "ರಕ್ಷಿಸು" ಎಂದೊರಲಿತು. ರಾಮ ಬಾಣ ಹುಸಿಯಲ್ಲ. ಇದಕ್ಕೆ ಏನಾದರೊಂದು "ಗುರಿ' ಕೊಡು ಎನ್ನಲು ಕಾಗೆ ತನ್ನ ಒಂದು ಕಣ್ಣನ್ನು ಕೊಟ್ಟು ಪ್ರಾಣ ಉಳಿಸಿಕೊಂಡಿತು ಈ ರೀತಿ ಸೀತೆ ಕುರುಹನ್ನು ವಿವರಿಸಿದಳು.

ರಾಕ್ಷಸರನ್ನೆಲ್ಲ ಕೊಂದು ನಾನೇ ನಿನ್ನನ್ನು ರಾಮನ ಬಳಿ ಒಯ್ಯುವೆ ಎನ್ನಲು ಈ ಸೂಕ್ಷ್ಮರೂಪಿಯಾದ ನಿನ್ನಿಂದ ಇದು ಸಾಧ್ಯವೇ ? ಎಂದು ಸಂಶಯ ಪಡಲು, ಆಕೆಯ ಸಂಶಯ ನಿವಾರಣೆಗಾಗಿ ಹನುಮ ಬೃಹದಾಕಾರವಾಗಿ ಬೆಳೆದ ಸೀತೆ ನಿನ್ನ ಬಲವನ್ನು ತಿಳಿದೆ ಆಯಿತು ನೀನು ರಾಮನಲ್ಲಿಗೆ ಹೋಗಿ ಈ ವೃತ್ತಾಂತವನ್ನೆಲ್ಲ ತಿಳಿಸು-ಎಂದಳು. ಹನುಮ ಆಕೆಯ ಮಾತನ್ನು ಶಿರಸಾ ವಹಿಸಿದನು ಹಾಗೆಯೇ ಸ್ವಲ್ಪ ದೂರ ನಡೆದು ದೂತ ನೀತಿಯನ್ನು ಆಲೋಚಿಸಿದನು ನಾನು ವಶಗಳನೆಸಿದನೆ ಮಾತನಾಡಿಯೇ ಹೋಗಬೇಕು ಎಂದು ನಿಶ್ಚೈಸಿ ಆ ವನದ ವೃಕ್ಷಗಳನ್ನೆಲ್ಲ ಮುರಿದೊಟ್ಟಿದ ಗೋಪುರಗಳನ್ನೆಲ್ಲ ನಾಶಗೊಳಿಸಿದ ಹೀಗೆ ರಾವಣನ ಆ ಅಶೋಕಾವನವು ಧ್ವಂಸವಾಯಿತು. ಅದನ್ನು ದೂತ ಮುಖದಿಂದ ತಿಳಿದ ರಾವಣನು ಹನುಮಂತನನ್ನು ಹಿಡಿತರಲು ದೂತನ್ನಟ್ಟಿದ ಹನುಮ ಸ್ತಂಭಾಯುಧದಿಂದ ದಾನವರನ್ನು ಹುಡಿಗಟ್ಟಿದ ರಾವಣ ಪಂಚ ಸೇನಾನಾಯಕರನ್ನು ಕಳುಹಿಸಿದ ಅವರೂ ಹತರಾದರು ಅಕ್ಷಯ ಕುಮಾರ ಬಂದ ಆತನೂ ಮರಣ ಹೊಂದಿದ ಇದರಿಂದ ತಿಳಿದು ಬಂದದ್ದೇನೆಂದರೆ-ವಿಷ್ಣು ಭಕ್ತರಿಗೆ ಎಂದೆಂದೂ ಭಯವುಂಟೇ ? ಎಂಬಲ್ಲಿಗೆ ಸಂಧಿ ಮುಕ್ತಾಯಗೊಳ್ಳುತ್ತದೆ.

ನಲವತ್ತನೆಯ ಸಂಧಿ : ಎಲೈ ಗಿರಿರಾಜ ಪುತ್ರಿಯೇ ಮುಂದಿನ ಸ್ವಾರಸ್ಯಕರವಾದ ಕಥೆಯನ್ನು ಕೇಳುವಂಥವಳಾಗು.

ಅಕ್ಷಯಕುಮಾರ ಮಡಿದ ಸಂಗತಿ ಕೇಳಿ ರಾವಣ ಇನ್ನೂ ರೋಷಾವಿಷ್ಟನಾದ. ತಾನೇ ಯುದ್ಧಕ್ಕೆ ಹೊರಡಲು ತಯಾರಾದ ಅಷ್ಟರಲ್ಲಿ ಇಂದ್ರಜಿತು ಆತನನ್ನು ತಡೆದು ತಾನೇ ಯುದ್ಧಕ್ಕೆ ಹೋಗಿಬರುವೆ ಎಂದ. ಯುದ್ಧಕ್ಕೆ ಬಂದ ಘನಘೋರ ಸಂಗ್ರಾಮ ಜರುಗಿತು ಕೊನೆಯಲ್ಲಿ ಇಂದ್ರ

ಜಿತು ಹನುಮಂತನನ್ನು ಬ್ರಹ್ಮಾಸ್ತ್ರದಿಂದ ಕಟ್ಟಿದ. ಕಾರ್ಯಗೌರವಕ್ಕಾಗಿ ಕಟ್ಟುಬಿದ್ದ ಇಂದ್ರಜಿತು ಅವನನ್ನು ರಾಜನ ಆಸ್ಥಾನಕ್ಕೆ ತಂದ ಸಿಟ್ಟಿಗೆದ್ದ ರಾಕ್ಷಸರೆಲ್ಲರು ಆತನಿಗೆ ಹೊಡೆದು ಬಡಿದು ಮಾಡಿದರು. ಅಂತೂ ಆತನನ್ನು ರಾವಣನ ಎದುರಿಗೆ ತಂದು ನಿಲ್ಲಿಸಿದರು ಮಂತ್ರಿ ಪ್ರಹಸ್ತನು ಆತನು ಬಂದ ವಿಚಾರವನ್ನೂ ವನವನ್ನು ಮುರಿದ ಕಾರಣವನ್ನೂ ಕೇಳಿದ ನಿನ್ನ ಗೊಡೆಯು ಯಾರು ? ನಿನ್ನ ಎಲ್ಲಾ ವೃತ್ತಾಂತವನ್ನು ಹೆದರದೆ ಹೇಳು. ನಾನು ವಾಯುಸುತ ಶ್ರೀ ರಾಮಚಂದ್ರನ ಭೃತ್ಯ ನೀನು ಸೀತಾ ಮಾತೆ-ಯನ್ನು ಕದ್ದು ತಂದೆ ಆಕೆಯನ್ನರಸುತ್ತ ಶ್ರೀ ರಾಮ ಲಕ್ಷ್ಮಣನೊಡನೆ ಮಾತಂಗಗಿರಿಗೆ ಬಂದ ಸುಗ್ರೀವನೊಡನೆ ಗೆಳೆತನ ಮಾಡಿದ ರಾಮ ಒಂದೇ ಒಂದು ಬಾಣದಿಂದ ವಾಲಿಯನ್ನು ಕೊಂದ ಕಪಿನಾಯಕರೆಲ್ಲ ಸೀತೆಯನ್ನರಸಲು ದಿಕ್ಕುದಿಕ್ಕಿಗೆ ಹೊರಟರು ದಕ್ಷಿಣದಿಕ್ಕಿಗೆ ಬಂದವರಲ್ಲಿ ನಾನು ಇಲ್ಲಿ ಲಂಕೆಗೆ ಬಂದು ಸೀತೆಯನ್ನರಸಿದೆನು ಅಶೋಕವನದಲ್ಲಿ ಸೀತೆಯನ್ನು ಕಂಡು ಮಾತನಾಡಿಸಿದೆ ಕಪಿಚೇಷ್ಟೆಗೆ ಅನುಸಾರವಾಗಿ ವನವನ್ನು ಹಾಳುಮಾಡಿದೆ ನಿನ್ನವರು ನನ್ನನ್ನು ಹೊಡೆದರು ನಾನೂ ನನ್ನನ್ನು ರಕ್ಷಿಸಿಕೊಳ್ಳಲು ಹೊಡೆದೆ ಕಡೆಗೆ ಮೇಘನಾದನು ನನ್ನನ್ನು ಬ್ರಹ್ಮಾಸ್ತ್ರದಿಂದ ಕಟ್ಟಿ ಇಲ್ಲಿಗೆ ತಂದನು ಪೌಲಸ್ತ್ಯನ ಸುತನೂ ಕುಬೇರನ ಬಂಧುವೂ ಆದ ನಿನಗೆ ಈ ಕೃತ್ಯ ಉಚಿತವೂ ಯೋಗ್ಯವೂ ಅಲ್ಲ ದೇಹಾತ್ಮಭಾವದಿಂದಲೂ ಅಹಂಕಾರದಿಂದಲೂ ಈ ಕೃತ್ಯ ಮಾಡಿದೆ. ತಿಳುವಳಿಕೆಯುಳ್ಳ ನಿನಗಿದನ್ನು ಬಿಡಿಸಿ ಹೇಳುವ ಅವಶ್ಯಕತೆ ಇಲ್ಲ ಮೋಹಾಂಧಕಾರದಲ್ಲಿ ಬಿದ್ದು ತೊಳಲಾಡುತ್ತಿದ್ದೀ. ಗರ್ವಿಷ್ಠನಾಗಿದ್ದೀ ನಿನ್ನ ಪ್ರಾರಬ್ಧದಿಂದ ಸೀತೆಯನ್ನು ತಂದಿದ್ದೀ. ಈಗ ನೀನು ಮೋಕ್ಷ ಪಡೆಯಬೇಕಾದರೆ ವಿಷ್ಣುವನ್ನೇ ಆಶ್ರಯಿಸಬೇಕು. ಮಹಾವಿಷ್ಣುವೇ ರಾಮನಾಗಿ ಜನಿಸಿದ್ದಾನೆ. ಆತನಲ್ಲಿ ಭಕ್ತಿಯಿಡು. ಆತನನ್ನೇ ಆಶ್ರಯಿಸು. ವಿಷಯ ಚಿಂತನೆಯನ್ನು ಬಿಡು. ಮುಕ್ತಿ ಪದದ ದಾರಿ ಹಿಡಿ. ಶತ್ರುಭಾವವನ್ನು ಬಿಟ್ಟು ಸೀತೆಯನ್ನು ರಾಮನಿಗೆ ಒಪ್ಪಿಸು. ಆತ ನಿನ್ನನ್ನು ಪುತ್ರ ಮಿತ್ರ ಬಂಧು ಬಾಂಧವರೊಡನೆ ಕಾಯುವನು. ಆತನೊಡನೆ ಹಗೆ-ತನ ಬೇಡ. ಗೆಳೆತನ ಬೆಳೆಸು ಎಂದಿತ್ಯಾದಿಯಾಗಿ ರಾವಣನಿಗೆ ಬೋಧೆ ಮಾಡಿದನು ಇದನ್ನು ಕೇಳಿ ರೋಷಾವೇಶಿತನಾದ ರಾವಣ ನುಡಿದದ್ದೇನೆಂದರೆ-ರಾಮನೆಲ್ಲಿಯವ ? ಆ ಸುಗ್ರೀವನಾರು ? ಲಕ್ಷ್ಮಣ ಸೀತೆ ಮೊದ

ಲಾದವರ ಸಹಿತ ಕಪಿ ಪಡೆಯನ್ನು ಕೊಲ್ಲುವೆನು ಈ ದೈತ್ಯರಿಗೆ ಅರೆನಿಮಿಷ ಮಾತ್ರ ಸಾಕು ಎನ್ನುತ್ತ ರೋಷಾವೇಶ ಭರಿತನಾದನು ಅವನ್ನು ಕೇಳಿದ ಮಾರುತಿಯು ರಾವಣನನ್ನು ದಿಟ್ಟಿಸಿ ನೋಡುತ್ತಾ ರಾಮ ನಿಮ್ಮೆಲ್ಲರನ್ನು ಸಮೂಲ ನಾಶ ಮಾಡುತ್ತಾನೆ ಎಂದನು ಸಿಟ್ಟಿಗೆದ್ದ ರಾವಣನ ಇವನನ್ನು ಕೊಲ್ಲಲು ಭೃತ್ಯರಿಗೆ ಅಜ್ಞಾಪಿಸುತ್ತಾನೆ. ಅದ ಕೇಳಿ ವಿಭೀಷಣನು ಹೇಳುತ್ತಾನೆ ಎಲೈ ಅಣ್ಣಾ ! ದೂತವಧೆ ಮಹಾಪಾಪ ದೂತನನ್ನು ಕೊಲ್ಲಬೇಡ ಈತನನ್ನು ಕೊಂದದ್ದಾದರೆ ರಾಮನಿಗೆ ಸುದ್ದಿ ಮುಟ್ಟಿಸುವವರಾರು ? ರಾಮ ಸುಗ್ರೀವ ಮೊದಲಾದವರನ್ನು ಯುದ್ಧದಲ್ಲಿಯೇ ನೀನು ಕೊಲ್ಲಬಹುದು. ವಿಭೀಷಣನ ಮಾತಿಗೆ ಒಪ್ಪಿ ರಾವಣನು ಕಪಿಗಳಿಗೆ ಜೀವಭಂಗಕ್ಕಿಂತ ಬಾಲ ಭಂಗ ಹೆಚ್ಚಿನದು ಕಾರಣ ಈತನ ಬಾಲಕ್ಕೆ ಬೆಂಕಿ ಹಚ್ಚಿ ಸುಟ್ಟು ಬಿಡಿರಿ ಎಂದನು. ಆಗ ದನುಜರು ಆತನ ಬಾಲಕ್ಕೆ ಬಟ್ಟೆ ಸುತ್ತಿ ಎಣ್ಣೆ ಸುರಿದು ಬೆಂಕಿ ಹಚ್ಚಿ ಕೇರಿ ಕೇರಿಗಳನ್ನೆಲ್ಲ ತಿರುಗಿಸಿದರು ನಂತರ ಆತ ದ್ವಾರದ ಬಾಗಿಲ ಕಡೆ ಬಂದು ಸೂಕ್ಷ್ಮರೂಪ ಧರಿಸಿ [illegible] ಸಡಿಲಿಸಿ ಪರ್ವತದಂತೆ ಬೆಳೆದ ಈ ಹೊತ್ತು ದೀಪೋತ್ಸವವನ್ನು ಮಾಡುವೆ ಎನ್ನುತ್ತ ಪ್ರತಿಯೊಂದು ಮನೆಗೆ ಬೆಂಕಿಯಿಟ್ಟನು ಆ ಪುರವು ಸುಡತೊಡಗಿತು. ವಿಭೀಷಣನ ಮನೆಯೊಂದನ್ನು ಬಿಟ್ಟನು ರಾಕ್ಷಸರೆಲ್ಲ ಹಾಹಾಕಾರ ಮಾಡ ತೊಡಗಿದರು. ಕೆಟ್ಟೆವು ಕೆಟ್ಟೆವು ಎಂದು ಗೋಳಾಡಿದರು. ಸೀತೆಯನ್ನು ತಂದು ನಮ್ಮನ್ನೆಲ್ಲ ಈ ರೀತಿ ರಾವಣನು ಗೋಳುಗುಟ್ಟಿಸಿದನು. ಎಂದಿತ್ಯಾದಿಯಾಗಿ ಗೋಳಿಡತೊಡಗಿದರು ದುಃಖಿಸತೊಡಗಿದರು.

ಇತ್ತ ಹನುಮಂತ ತನ್ನ ಬಾಲವನ್ನು ಸಮುದ್ರದಲ್ಲಿ ಅದ್ದಿ ನಂದಿಸಿಕೊಂಡನು, ಸೀತೆ ಬೇಡಿಕೊಂಡಿದ್ದರಿಂದಲೂ ಗಾಳಿಯ ಮಗನಾದುದರಿಂದಲೂ ಹನುಮನಿಗೆ ಬೆಂಕಿಯು ಸುಡಲಿಲ್ಲ ರಾಮನಾಮವೊಂದಿದ್ದರೆ ಯಾವ ತಾಪತ್ರಯವೂ ಬರುವದಿಲ್ಲ, ಯಾರಿಗೂ ಯಾವ ದುಃಖದ ಸೋಂಕೂ ತಗಲಲಾರದು ಎಂಬಲ್ಲಿಗೆ ಸಂಧಿ ಮುಕ್ತಾಯವಾಯಿತು.

ನಲವತ್ತೊಂದನೆಯ ಸಂಧಿ : ಎಲೈ ಪಾರ್ವತಿಯೇ ಮುಂದಿನ ಕಥಾ ವಿಸ್ತರವನ್ನು ಕೇಳುವವಳಾಗು

ಹನುಮಂತನು ತನ್ನ ಬಾಲವನ್ನು ತೊಳೆದ ನಂತರ ಸೀತಾದೇವಿಯ ಬಳಿ ಬಂದು ಆಕೆಯ ಅಪ್ಪಣೆಯನ್ನು ಪಡೆದನು ಕೂಡಲೇ ರಾಘವನ

ಬಳಿ ಹೋಗುತ್ತೇನೆ ಇಲ್ಲಿಯ ಎಲ್ಲ ವೃತ್ತಾಂತವನ್ನು ಹೇಳುತ್ತೇನೆ. ರಾಮನನ್ನು ಕೂಡಲೇ ಕರೆತರುತ್ತೇನೆ ಎಂದಿತ್ಯಾದಿಯಾಗಿ ಹೇಳಿ, ಸೀತೆಯನ್ನು ಸಮಾಧಾನಪಡಿಸಿ ಹೊರಟು ನಿಂತನು ಅತಿದುಃಖ ದಲ್ಲಿರುವ ಸೀತೆಯನ್ನು ಕಂಡು ಹನುಮನು ಹೇಳಿದ ನನ್ನ ಹೆಗಲ ಮೇಲೇರಿದರೆ ನಿನ್ನನ್ನು ಕೂಡಲೇ ರಾಮನ ಬಳಿ ಬಿಡುತ್ತೇನೆ. ಆದರೆ ಸೀತೆ ಇದಕ್ಕೆ ಒಪ್ಪಲಿಲ್ಲ ರಾಮನೇ ಬರಲಿ ಆತ ಯಾವದೇ ರೀತಿ ಯಿಂದ ಬರಲಿ ರಾವಣನನ್ನು ಕೊಂದು ಘನ ಕೀರ್ತಿಯನ್ನು ಪಡೆದು ನನ್ನನ್ನು ಕರೆದುಕೊಂಡು ಹೋಗಲಿ ಎಂದಳು. ನೀನು ಕೂಡಲೇ ಹೋಗು ನಾನು ರಾಮಧ್ಯಾನ ಮಾಡುತ್ತಾ ಇರುತ್ತೇನೆ ಎಂದಳು.

ಹನುಮನು ಕೂಡಲೇ ಅಲ್ಲಿಂದ ನೆಗೆದು ಮೇಲಕ್ಕೆ ಹಾರಿ ಗಗನ ಮಾರ್ಗದಲ್ಲಿ ವಾಯುವೇಗದಿಂದ ಹೊರಟನು ಆತನು ಬರುವ ಶಬ್ದ ಕೇಳಿ ವಾನರರೆಲ್ಲರೂ ಹರ್ಷ ತಾಳಿದರು ಅಷ್ಟರಲ್ಲಿ ಹನುಮ ಅವರಿರುವ ಮಲಯ ಪರ್ವತಕ್ಕೆ ಬಂದಿಳಿದ. ಸೀತೆಯನ್ನು ನೋಡಿ ಬಂದ ಸಂಗತಿಯನ್ನು ಲಂಕಾ ಪಟ್ಟಣವನ್ನು ಸುಟ್ಟ ವಿವರವನ್ನು ಸಾದ್ಯಂತವಾಗಿ ವಿವರಿಸಿದ. ನಂತರ ಅವರೆಲ್ಲ ಅಲ್ಲಿಂದ ಹೊರಟರು. ಪ್ರಸ್ರವರ್ಷಣ ಪರ್ವತಕ್ಕೆ ಬಂದರು. ಅಲ್ಲಿ ಹಣ್ಣು ಹಂಪಲ ಮೊದಲಾದವುಗಳಿಂದಲೂ ಜೇನಿನಿಂದಲೂ ಕೂಡಿರುವ ಸುಗ್ರೀವನಿಂದ ಪಾಲಿತವಾದ ತೋಟವನ್ನು ಕಂಡರು. ಅವರೆಲ್ಲರಿಗೆ ಮಧು ವನ್ನು ಸವಿಯುವ ಇಚ್ಛೆಯಾಯಿತು. ಅಂಗದನ ಅಪ್ಪಣೆ ಪಡೆದು ಮಧು ಸೇವಿಸಿ ಉನ್ಮತ್ತರಾಗಿ ಆ ವನವನ್ನೆಲ್ಲ ಹಾಳುಗಟ್ಟಿದರು. ಕಾವಲುಗಾರರನ್ನು ಸದೆ ಬಡಿದರು ಬಹಳ ಕಾಲದಿಂದ ಕಾದುಕೊಂಡು ಬಂದಿದ್ದ ಈ ವನವು ಈಗ ಸೂರೆಯಾಯಿತು ಎಂಬ ವಿಷಯವನ್ನು ದಧಿಮುಖನು ಸುಗ್ರೀವನಿದ್ದ ಲ್ಲಿಗೆ ಬಂದು ತಿಳಿಸಿದನು. ಸೀತಾಮಾತೆಯನ್ನು ನೋಡಿದ ಹರ್ಷೋದ್ರೇಕ ದಿಂದ ಈ ರೀತಿ ಮಾಡಿದ್ದಾರೆ ಎಂಬುದನ್ನು ತಿಳಿದು ಹನುಮಾದಿಗಳನ್ನೆಲ್ಲ ಬೇಗನೆ ಕಳುಹಿಸಬೇಕು. ಎಂದು ದಧಿಮುಖನಿಗೆ ಹೇಳಿ ಕಳುಹಿಸಿದನು. ರಾಮನಿಗೆ ಈ ವಿಷಯ ತಿಳಿಸಿ ಹನುಮ, ಜಾಂಬವ ಅಂಗದ ಮೊದಲಾದ ವರು ಸೀತಾಮಾತೆಯನ್ನು ನಿಜವಾಗಿ ಕಂಡುಬಂದಿದ್ದಾರೆ. ಎಂದು ಹೇಳಿದನು. ಇತ್ತ ದಧಿಮುಖನ ಮಾತನ್ನು ಕೇಳಿದ ಅಂಗದನು ತಡವಾಯಿತು ನಾವು

ಬಂದ ಸಂಗತಿ ಸುಗ್ರೀವನಿಗೆ ತಿಳಿದಿದೆ ಬೇಗನೇ ಹೋಗುವ ಎಂದು ಹೇಳುತ್ತ ವಾನರರನ್ನೆಲ್ಲ ಕೂಡಿಕೊಂಡು ಸುಗ್ರೀವನ ಬಳಿಗೆ ಬಂದನು ಹನುಮಂತನು ತಾನು ಸೀತೆಯನ್ನು ಕಂಡ ವೃತ್ತಾಂತವನ್ನು ಸಾದ್ಯಂತವಾಗಿ ವಿವರಿಸಿದನು ಲಂಕಾಪಟ್ಟಣದಲ್ಲಿ ಶಿಂಶಪಾವೃಕ್ಷದ ಕೆಳಗಡೆ ನಿನ್ನನ್ನೇ ಧ್ಯಾನಿಸುತ್ತಾ ಇದ್ದಾಳೆ. ಮೊದಲು ನನ್ನನ್ನು ಕಂಡು ಶಂಕೆಯ ಪಟ್ಟರೂ ನಂತರ ನಾನು ರಾಮಭೃತ್ಯನೆಂಬುದನ್ನು ಮನದಟ್ಟು ಮಾಡಿಕೊಂಡಳು ನಾನು ರಾಮ ಮುದ್ರಿಕೆಯನ್ನು ಆಕೆಗೆ ಕೊಟ್ಟೆ ನನ್ನೊಡನೆ ವಿಶ್ವಾಸದಿಂದ ಮಾತನಾಡಿ ದಳು. ತನ್ನ ಸಂಕಟವನ್ನು ತೋಡಿಕೊಂಡಳು. ಸಮ್ಮದಲ್ಲಿಯೇ ರಾಮ ಬರು ತ್ತಾನೆ ಎಂದು ಸಮಾಧಾನಪಡಿಸಿದೆ ನನ್ನನ್ನು ನೋಡಿ ಮಾತನಾಡಿದ ಬಗ್ಗೆ ಕುರುಹೊಂದನ್ನು ಕೊಡಬೇಕೆಂದು ಕೇಳಿಕೊಳ್ಳಲು ಈ ಶಿರೋರತ್ನ ವಾದ ಚೂಡಾಮಣಿಯನ್ನು ಕೊಟ್ಟಿದ್ದಾಳೆ ಎಂದು ಹೇಳುತ್ತ ಆ ಮಣಿ ಯನ್ನು ರಾಮನ ಎದುರಿಗಿಟ್ಟನು ಬರುತ್ತ ಅಶೋಕವನದ ತರುಲತೆ ಗಿಡ ಮರಗಳನ್ನೆಲ್ಲ ಮುರಿದೆ. ರಾಕ್ಷಸರನ್ನು ಸದೆಬಡಿದೆ ರಾವಣನೊಡನೆ ಮಾತ ನಾಡಿದೆ ಲಂಕಾಪಟ್ಟಣವನ್ನು ಸುಟ್ಟೆ. ಎಂದಿತ್ಯಾದಿಯಾಗಿ ಎಲ್ಲಾ ವೃತ್ತಾಂ ತವನ್ನು ವಿನಯದಿಂದ ನಿವೇದಿಸಿದನು ಮಹಾಮಹಿಮನಾದ ರಾಮನನ್ನು ನಾನಾಪ್ರಕಾರದಿಂದ ಸ್ತೋತ್ರ ಮಾಡಿದನು. ಈಗ ನೀವು ಸೀತೆಯ ಸೆರೆ ಬಿಡಿಸಬೇಕಾದುದು ನಿಮ್ಮ ಕರ್ತವ್ಯ ಎಂದು ಹೇಳಿದನು. ಹನುಮನೆಂದ ಮಾತನ್ನು ಕೇಳಿ ರಾಮ ಅತ್ಯಂತ ಹರ್ಷಿತನಾದ. ಹನುಮನನ್ನು ಪ್ರೀತಿ- ಯಿಂದ ಆಲಿಂಗಿಸಿಕೊಂಡನು

ಎಲೈ ಗಿರಿಜೆಯೇ ತನ್ನಾತ್ಮ ಭಕ್ತರನ್ನು ಅತ್ಯಂತ ಪ್ರೀತಿಯಿಂದ ಶ್ರೀ ರಾಮನು ಕಾಣುತ್ತಾನೆ ಮಿಕ್ಕವರಿಗೆ ಈ ಲಾಭವು ದೊರಕಲು ಸಾಧ್ಯವೇ ? ಯಾರು ಶ್ರೀ ರಾಮನನ್ನು ಅನನ್ಯ ಭಕ್ತಿಯಿಂದ ಭಜಿಸುತ್ತಾರೋ ಅತ ಅವರಿಗೆ ಒಲಿಯುತ್ತಾನೆ. ಶ್ರೀ ರಾಮನೊಲಿದವನೇ ಅತ್ಯಂತ ಭಾಗ್ಯ ಶಾಲಿ ಪುಣ್ಯ ಪುರುಷ ಎಂಬಲ್ಲಿಗೆ ಸಂಧಿ ಮುಕ್ತಾಯವಾಗುತ್ತದೆ

ಇಲ್ಲಿಗೆ ಸುಂದರಕಾಂಡವು ಸಮಾಪ್ತಿಯಾಯಿತು



# ಗ್ರಂಥಾಂತರಂಗ

ಕವಿಯು ಅಧ್ಯಾತ್ಮ ರಾಮಾಯಣವನ್ನು ಭಾಮಿನೀ ಷಟ್ಪದಿಯಲ್ಲಿ ರಚಿಸುವಾಗ ಸಂಸ್ಕೃತದ ಅಧ್ಯಾತ್ಮ ರಾಮಾಯಣವನ್ನು ಸಂಪೂರ್ಣವಾಗಿ ಅನುಸರಿಸಿದ್ದಾನೆ ಆದರೆ ಅನುವಾದವು ಸಂಸ್ಕೃತದ ಪ್ರತ್ಯಕ್ಷರಶಃ ಅನು ವಾದವಲ್ಲ. ಅಲ್ಲಲ್ಲಿ ಕನ್ನಡದ ಜಾಯಮಾನಕ್ಕೆ ಅನುಕೂಲವಾಗುವಂತೆ ತನ್ನ ತನವನ್ನು ತೋರಿಸಿಕೊಂಡಿದ್ದಾನೆ.

ಸಂಸ್ಕೃತ ಅಧ್ಯಾತ್ಮರಾಮಾಯಣದ ಅರಣ್ಯಕಾಂಡದಲ್ಲಿ ಹತ್ತು ಸರ್ಗಗಳಿರುವಂತೆ ಕನ್ನಡದಲ್ಲಿಯೂ ಕೂಡ ಹತ್ತು ಸಂಧಿಗಳು ಇವೆ ಕಿಷ್ಕಿಂಧಾ ಕಾಂಡದಲ್ಲಿ ಒಂಭತ್ತು ಸರ್ಗಗಳಿರುವಂತೆ ಕನ್ನಡದಲ್ಲಿಯೂ ಕೂಡ ಒಂಭತ್ತು ಸಂಧಿಗಳಿವೆ ಸುಂದರ ಕಾಂಡದಲ್ಲಿ ಐದು ಸರ್ಗಗಳಿದ್ದರೆ ಕನ್ನಡ ರಾಮಾಯಣ ದಲ್ಲಿ ನಾಲ್ಕು ಸಂಧಿಗಳು ಇವೆ.

ಈ ಹಿಂದೆ ಮೊದಲ ಭಾಗದಲ್ಲಿ ತೋರಿಸಿದಂತೆ ಈ ರಾಮಾಯಣದ ಕಥೆಯು ಈಶ್ವರ ಪಾರ್ವತಿ ಇವರ ಸಂವಾದದ ರೂಪದಲ್ಲಿದೆ.

ರಾಮನು ಅತ್ರಿಯಾಶ್ರಮದಲ್ಲಿ ಒಂದು ದಿನವಿದ್ದು ಮುಂದಿನ ಮಾರ್ಗದ ವಿವರ ಕೇಳುತ್ತಾನೆ.

ಅಥ ತತ್ರ ದಿನಂ ಸ್ಥಿತ್ವಾ ಪ್ರಭಾತೇ ರಘುನಂದನಃ ।
ಸ್ನಾತ್ವಾ ಮುನಿಂ ಸಮಾಮಂತ್ರ್ಯ ಪ್ರಯಾಣಾಯೋಪಚಕ್ರಮೇ ॥ ೧-೧ ॥
ಮುನೇ ಗಚ್ಛಾಮಹೇ ಸರ್ವೇ ಮುನಿಮಂಡಲ ಮಂಡಿತಂ
ವಿಪಿನಂ ದಂಡಕಂ ಯತ್ರ ತ್ವಮಾಜ್ಞಾತುಮಿಹಾರ್ಹಸಿ ॥ ೨-೧ ॥

ಇದನ್ನೇ ಕವಿಯು ಕನ್ನಡದಲ್ಲಿ ಈ ರೀತಿ ಅನುವಾದಿಸಿದ್ದಾನೆ.

ಮತ್ತೆ ಪಾರ್ವತಿ ಕೇಳು ರಾಘವ । ನತ್ರಿಯಾಶ್ರಮದಲ್ಲಿಯೊಂದಿರು
ಳುತ್ತರಿಸಿ ಮರುದಿವಸ ಮುಂದಾ ಮುನಿಯನನುವರಿಸಿ ॥
ಅತ್ತ ಯಾತ್ರೆಗೆ ದಂಡಕಾನನ । ದರ್ಥಿಯಂರಿ ಮುನಿಸೇವ್ಯ ಸಂಸ್ಥಳ
ದೊತ್ತಿಗಾಪೈದುವವನುಜ್ಞೆಯುಮೆಂದನಾ ರಾಮ ॥ ೨-೨೦ ॥

ಹೀಗೆ ಪ್ರತಿಯೊಂದು ಹೆಜ್ಜೆಗೂ ಸಂಸ್ಕೃತ ರಾಮಾಯಣವನ್ನು ಅನು ಸರಿಸಿದ್ದಾನೆ ಅತ್ರಿ ಮಹರ್ಷಿಯ ಶಿಷ್ಯರು ತೋರಿಸಿದಂತೆ ನಾವೆಯಲ್ಲಿ ಕುಳಿತು ನದಿಯನ್ನು ದಾಟಿದರು ಅವರು ಮುಂದೆ ಕಂಡ ಘೋರಾರಣ್ಯದ ವರ್ಣನೆ.

ತಾವೇಕ್ಷ್ಯ ವಿಪಿನಂ ಘೋರಂ ಝಿಲ್ಲೀ ಝುಂಕಾರನಾದಿತಂ
ನಾನಾಮೃಗ ಗಣಾಕೀರ್ಣಂ ಸಿಂಹವ್ಯಾಘ್ರಾದಿ ಭೀಷಣಂ ॥ ೧೦_೧ ॥
ರಾಕ್ಷಸೈರ್ಘೋರರೂಪೈಶ್ಚ ಸೇವಿತಂ ರೋಮಹರ್ಷಣಂ
ಪ್ರವಿಶ್ಯ ವಿಪಿನಂ ಘೋರಂ ರಾಮೋ ಲಕ್ಷ್ಮಣಮಬ್ರವೀತ್ ॥ ೧೧_೧ ॥

ಇದರ ಕನ್ನಡ ಅನುವಾದವನ್ನು ನೋಡಿ !

ಹೊಕ್ಕರಲಿ ಘೋರಟವಿಯಲ್ಲಿರು । ಕಿಕ್ಕಿಲನ ಹುಲಿ ಕರಡಿ ಸಿಂಹಗ
ಳಿಕ್ಕಲವು ಕಾಡ್ಕೋಣ ಕಮೃಗವುಗಳು ಭೀಕರವ ॥
ಕರ್ಕಶದ ಜೂಜುರ್ಜರಿವ ವನದೊಳ । ಗೊಕ್ಕಲಿಕ್ಕುವನೇಕ ಮೃಗಕುಳ
ರಕ್ಕಸರ ಬಹುರೂಪ ಭಯ ವ್ಯಕ್ರೋಮ ಕಮರಿಡಲು ॥ ೯ ೨೦ ॥

ಅವರು ಸೀತೆಯನ್ನು ಮಧ್ಯವಲ್ಲಿಟ್ಟುಕೊಂಡು-ಜೀವ ಪರಮಾತ್ಮರ ಮಧ್ಯದಲ್ಲಿ ಮಾಯೆಯಿರುವಂತೆ-ಮುಂದೆ ನಡೆದರು ಒಳ್ಳೆಯ ಸರೋವರ ಕಂಡು ನೀರು ಕುಡಿದು ಅಲ್ಲಿಯೇ ದಣಿವಾರಿಸಿಕೊಳ್ಳತೊಡಗಿದರು ಅಷ್ಟರಲ್ಲಿ ಅಲ್ಲಿಗೆ ಭೀಕರಾಕಾರದ ದಾನವನ ಆಗಮನ ಆತನ ವರ್ಣನೆ

ತತೋ ದದೃಶುರಾಯಾಂತಂ ಮಹಾಸತ್ವಂ ಭಯಾನಕಂ
ಕರಾಲದಂಷ್ಟ್ರವದನಂ ಭೀಷಯಂತಂ ಸ್ವಗರ್ಜಿತೈಃ ॥ ೧೭_೧ ॥
ವಾಮಾಂಸೇ ನ್ಯಸ್ತ ಶೂಲಾಗ್ರ ಗ್ರಥಿತಾನೇಕ ಮಾನುಷಂ
ಭಕ್ಷಯಂತಂ ಗಜವ್ಯಾಘ್ರ ಮಹಿಷಂ ವನಗೋಚರಂ ॥ ೧೮_೧ ॥

ಇದರ ಕನ್ನಡ ರೂಪ-

ಕರಿಕುಠಾರಿದಂಗಭವಯಾನನ । ದುರಿವದಾಡೆಯು ಬಿಟ್ಟಕಂಗಳ
ತೆರಹುದೊಗಲಿನ ಜೋಲ್ದ ವ್ಯೊಗೂದಲಿನ ಮೊರಗಿವಿಯು ॥
ಧರಿಸಿರಲು ಶೂಲದಲಿ ನರರುಗ । ಳಿರಿದೆಡದ ಹೆಗಲಲ್ಲಿ ಬಾಯಲಿ
ತುರುಕಿ ಮಹಿಷವ್ಯಾಘ್ರವನು ಗರ್ಜಿಸುತ ನಡೆತಂದ ॥ ೧೪-೨೦ ॥

ಇದು ಎಷ್ಟು ಸುಲಭದ ಅನುವಾದ ನೋಡಿ !

ಆ ರಾಕ್ಷಸನ ಹೆಸರು ವಿರಾಧ ರಾಮ ವಿರಾಧರ ನಡುವೆ ಮಾತು ಕತೆ ರಾಮ ತನ್ನ ಸಂಗತಿಯನ್ನು ಅರುಹಿದ ಸೀತೆಯನ್ನು ಇಲ್ಲೇ ಬಿಟ್ಟು ಹೋಗಿರಿ ಎಂದು ರಾಕ್ಷಸನ ಆಜ್ಞೆ ರಾಮ ರಾಕ್ಷಸರಲ್ಲಿ ಯುದ್ಧ ರಾಮ ನಿಂದ ಆತನ ಕೈಕಾಲುಗಳನ್ನು ಕತ್ತರಿಸುವಿಕೆ ನಂತರ ಅರ್ಧಚಂದ್ರಾಕಾರ ಬಾಣದಿಂದ ಆತನ ತಲೆ ಕತ್ತರಿಸುತ್ತಾನೆ. ಅಷ್ಟರಲ್ಲಿ ಆ ವಿರಾಧನ ಶರೀರ

ದಿಂದ ಸುಂದರಾಂಗನಾದ ಒಬ್ಬ ಪುರುಷ ರಾಮನ ಎಂದುರಿಗೆ ಕಾಣಿಸಿಕೊಂಡು ಆತನನ್ನು ಸ್ತುತಿಸತೊಡಗಿದ

ಶ್ರೀ ರಾಮ ರಾಜೀವ ದಳಾಯತಾಕ್ಷ
ವಿದ್ಯಾಧರೋಽಹಂ ವಿಮಲಪ್ರಕಾಶಃ ।
ದುರ್ವಾಸಸಾಽಕಾರಣ ಕೋಪಮೂರ್ತಿನಾ
ಶಪ್ತಃ ಪುರಾಸೋಽದ್ಯ ವಿಮೋಚಿತಸ್ತ್ವಯಾ ॥ ೩೪-೧ ॥

ಇದರ ಕನ್ನಡ ರೂಪ

ರಾಮರಾಜೀವಾಕ್ಷ ಸನ್ನುತ । ಕಾಮಧೇನುವೆ ಚಿತ್ತವಿಸು ಸು
ತ್ರಾಮ ಲೋಕದಿ ಮುನ್ನ ನಾ ವಿದ್ಯಾಧರಾಂಹಯನು ॥
ಸೋಮಜಿತ ಸಂಕಾಶನಾಗಿರ । ಲಾ ಮುನಿಪ ದುರ್ವಾಸ ಕೋಪ
ಸ್ತೋಮ ಮೂರುತಿ ಶಪಿಸ ಕಾರಣದಿಂ ದನುಜನಾದೆ ॥ ೨೬-೨೦ ॥

ಹೀಗೆ ಐದಾರು ಪದ್ಯಗಳಲ್ಲಿ ಶ್ರೀ ರಾಮನ ಸ್ತುತಿ ರಾಮನಿಂದ ಆ ವಿರಾಧನಿಗೆ ಅಭಯಪ್ರದಾನ ಇತ್ಯಾದಿ

ಶರಭಂಗ ಮುನಿಯ ಆಶ್ರಮ ಪ್ರವೇಶ ಋಷಿಯಿಂದ ರಾಮನಿಗೆ ಅರ್ಘ್ಯ ಪಾದ್ಯ ಮೊದಲಾದವುಗಳಿಂದ ಉಪಚಾರ ಆಮೇಲೆ ರಾಮಸ್ತುತಿ ಸುತ್ತುಮುತ್ತಲಿನ ಋಷಿಗಳ ಆಗಮನ ಅವರಿಂದ ರಾಮನ ಸ್ತುತಿ-

ಭೂಮೇರ್ಭಾರಾವತಾರಾಯ ಜಾತೋಽಸಿ ಬ್ರಹ್ಮಣಾರ್ಥಿತಃ ।
ಜಾನೀಮಸ್ತ್ವಾಂ ಹರಿಂ ಲಕ್ಷ್ಮೀಂ ಜಾನಕೀಂ ಲಕ್ಷ್ಮಣಂ ತಥಾ ॥ ೧೫-೨ ॥
ಶೇಷಾಂಶಂ ಶಂಖ ಚಕ್ರೇ ದ್ವೇ ಭರತಂ ಸಾನುಜಂ ತಥಾ ।
ಅತಶ್ಚಾದೌ ಋಷೀಣಾಂ ತ್ವಂ ದುಃಖಂ ಮೋಕ್ತುಮಿಹಾರ್ಹಸಿ ॥ ೧೬-೨ ॥

ಆದರ ಕನ್ನಡ ಅನುವಾದ

ನಾವು ಬಲ್ಲೆವು ವಿಷ್ಣು ನೀ ಶ್ರೀ । ದೇವಿ ಜಾನಕಿ ಶೇಷ ಲಕ್ಷ್ಮಣ
ದೇವ ಭರತನು ಶಂಖ ಶತ್ರುಘ್ನಾಂಕನೇ ಚಕ್ರ ॥
ದೇವರಿಪುಗಳ ಸವರಲಿಳಿದಿರಿ । ನೀವು ರಾಘವ ಯಿಲ್ಲಿ ಋಷಿಗಳ
ನೋವ ಕಳೆಯೆ ಸಮರ್ಥನಹೆ ನೀನೆಂದು ಹೊಗಳಿದರು ॥ ೧೦-೨೧ ॥

ಹೀಗೆ ಸಂಸ್ಕೃತದ ಅನುವಾದವನ್ನು ಸರಳ ಶೈಲಿಯಲ್ಲಿ ಮಾಡಿದ್ದಾನೆ

ಅಲ್ಲಿ ಬಿದ್ದಿರುವ-ರಾಕ್ಷಸರಿಂದ ಹತರಾದ-ಋಷಿಗಳ ಎಲುವುಗಳ ರಾಶಿಯನ್ನು ನೋಡುತ್ತ ಋಷಿಗಳಿಗೆ ಧೈರ್ಯ ಹೇಳುತ್ತ ಋಷಿಗಳ ಆಶ್ರಮ

ಗಳನ್ನು ನಿರೀಕ್ಷಿಸುತ್ತ ಸುತೀಕ್ಷ್ಣ ಮುನಿಯ ಆಶ್ರಮಕ್ಕೆ ಬಂದನು. ಸುತೀಕ್ಷ್ಣನಿಂದ ರಾಮನ ಗುಣಗಾನ ನಾನು ನಿನ್ನ ದಾಸರದಾಸ ಸಕಲ ಪ್ರಪಂಚಕ್ಕೂ ಅದೃಶ್ಯವಾಗಿರುವ ನೀನು ನಿನ್ನ ಮಾಯೆಯಿಂದ ಮಗ, ಹೆಂಡತಿ, ಮನೆ, ಬಂಧುಗಳು ಎಂಬ ಈ ಭವಕೂಪದಲ್ಲಿ ರಕ್ತಮಲಮೂತ್ರಾದಿ ಷಣ್ಮಲ ಮುಕ್ತವಾದ ಈ ಶರೀರವೇ ನಾನೆಂಬ ಪಾಶದಿಂದ ಕಟ್ಟಲ್ಪಟ್ಟವನನ್ನು ಉದ್ಧರಿಸಲು ಬಂದಿರುವೆ ನೀನು ಸರ್ವರ ಹೃದಯದಲ್ಲಿ ವಾಸವಾಗಿರುವೆ ಎಂದು ಬಹುವಿಧವಾಗಿ ನುತಿಸಿದನು. ಆಗ ರಾಮನು ಮುಗುಳುನಗೆಯಿಂದ ಈ ಪ್ರಕಾರವಾಗಿ ಹೇಳಿದನು ಮುನಿವರ್ಯನೇ ನನ್ನ ಚಿಂತನೆಯಿಂದ ನಿನ್ನ ಮನಸ್ಸು ನಿರ್ಮಲವಾಗಿರುವದನ್ನು ನಾನು ಬಲ್ಲೆ ದೇಹಾಂತದಲ್ಲಿ ನೀನು ನನ್ನನ್ನು ಸೇರುವೆ. ಎಂದು ಹೇಳುತ್ತ ಅಗಸ್ತ್ಯ ಋಷಿಯು ಇರುವ ಸ್ಥಳವನ್ನು ತೋರಿಸುವವನಾಗು ಎಂದನು ನಂತರ ಅವರಿಬ್ಬರೂ ಅಗಸ್ತ್ಯ ಋಷಿಯ ಆಶ್ರಮಕ್ಕೆ ಬಂದರು. ಅಗಸ್ತ್ಯ ಋಷಿಯು ಅವರನ್ನು ಆದರಿಸಿ ಸತ್ಕರಿಸಿದನು ನಿನ್ನ ಆಗಮನದ ನಿರೀಕ್ಷೆಯಲ್ಲಿಯೇ ಇದ್ದೆನು ಎಂದು ಹೇಳಿ ರಾಮನನ್ನು ಅನೇಕ ಪ್ರಕಾರದಲ್ಲಿ ಸ್ತುತಿಸಿದನು ವೇದಾಂತಪರವಾದ ಸ್ತುತಿಯೇ ಇಲ್ಲಿ ಮುಖ್ಯವಾಗಿದೆ ಇಡೀ ಸಂಧಿಯೇ ರಾಮನ ಗುಣಗಾನದಿಂದ ತುಂಬಿದೆ. ಸಂಸ್ಕೃತದ ಅನುವಾದವೇ ತಿಳಿಗನ್ನಡದಲ್ಲಿ ಮೂಡಿ ಬಂದಿದೆ ಎಂದು ಹೇಳಬಹುದು. ಕೊನೆಯಲ್ಲಿ

ಇತಿ ಸ್ತುತ್ವಾ ರಮಾನಾಥಮಗಸ್ತ್ಯೋ ಮುನಿಸತ್ತಮಃ ।
ದದೌ ಚಾಪಂ ಮಹೇಂದ್ರೇಣ ರಾಮಾರ್ಥೇ ಸ್ಥಾಪಿತಂ ಪುರಾ ॥ ೪೫-೩ ॥

ಅಕ್ಷಯೌ ಬಾಣತೂಣೀರೌ ಖಡ್ಗೋ ರತ್ನ ವಿಭೂಷಿತಃ ।
ಜಹಿ ರಾಘವ ಭೂಭಾರಭೂತಂ ರಾಕ್ಷಸ ಮಂಡಲಂ ॥ ೪೬-೩ ॥

ಈ ಪರಿಯಲಿಯಗಸ್ತ್ಯ ರಾಮನ । ನಾಪಪರಿ ಸಂಸ್ತುತಿಸಿ ಕೊಟ್ಟನು
ಚಾಪವನು ಮಹೇಂದ್ರನಿರಿಸಿದ್ದುದನು ರಘುವರಗೆ ॥
ಓಪ ದಿವ್ಯಕ್ಷಯದ ಶರವನು । ದೀಪಿಸುವ ರತ್ನೌಘ ಖಚಿತ ಕ
ಲಾಪನಹ ಖಡ್ಗವನು ನಿಂಗೆ ತಂದಾಗಲಾ ಮುನಿಪ ॥ ೪೩-೨೨ ॥

ನಂತರ ಮುಂದೆ ಪಂಚವಟಿಗಾಗಿ ರಾಮನ ಪ್ರಯಾಣ

ಮುಂದೆ ಹೋಗುತ್ತಿರುವಾಗ ಮುದುಕ ಪಕ್ಷಿ ಜಟಾಯುವಿನ (ದರ್ಶನ) ಸಮಾಗಮ ರಾಕ್ಷಸ ಎಂಬ ಕಲ್ಪನೆಯಿಂದ ಕೊಲ್ಲಲು ಉದ್ಯುಕ್ತನಾದ.

ಆದರೆ ಜಟಾಯುವು ತಾನಾರೆಂಬುದನ್ನೂ ತಾನು ದಶರಥನ ಮಿತ್ರ ಎಂಬುದನ್ನೂ ತಿಳಿಸಿದ ನೀವು ಪಂಚವಟಿಲ್ಲಿಯ ಬೇಟೆ ಇತ್ಯಾದಿಗಳಿಗಾಗಿ ಪರ್ಣಶಾಲೆಯ ಹೊರಗೆ ಹೋದಾಗ ಜಾನಕಿಯನ್ನು ರಕ್ಷಿಸುವ ಕೆಲಸವಮಾಡುತ್ತೇನೆಂದು ಹೇಳಿದ ರಾಮು ಪಂಚವಟಿಯಲ್ಲಿ ನೆಲಸಿದ.

ಒಂದು ದಿನ ಲಕ್ಷ್ಮಣ ರಾಮನಲ್ಲಿ ಮೋಕ್ಷಪಡೆಯಲು ಉಚಿತವಾಗಿ ಗೊತ್ತಾದ ಸಾಧನವು ಯಾವುದೆಂಬುದನ್ನು ತಿಳಿಯಲು ಇಚ್ಛಿಸುತ್ತೇನೆ. ಎಂದನು ರಾಮ ಈ ಬಗ್ಗೆ ಹೇಳಲುದ್ಯುಕ್ತನಾದ ಇಲ್ಲಿ ಕವಿ ಚಿನ್ಮಯ ಮೂರ್ತಿಯಾದ ರಾಮನ ವರ್ಣನೆಯನ್ನು ಲಕ್ಷ್ಮಣನಿಂದ ಎರಡು ಮೂರು ಪದ್ಯಗಳಲ್ಲಿ ಹೇಳಿಸುತ್ತಾನೆ. ರಾಮ ಗೌಪ್ಯವಾದ ಮೋಕ್ಷದ ಸ್ವರೂಪವನ್ನು ಲಕ್ಷ್ಮಣನಿಗೆ ತಿಳಿಸುತ್ತಾನೆ.

ಶೃಣು ವಕ್ಷ್ಯಾಮಿ ತೇ ವತ್ಸ ಗುಹ್ಯಾದ್ಗುಹ್ಯತರಂ ಪರಂ ।
ಯದ್ವಿಜ್ಞಾಯ ನರೋ ಜಹ್ಯಾತ್ ಸದ್ಯೋಽವೈಕಲ್ಪಿಕಂ ಭ್ರಮಂ ॥ ೧೮-೪ ॥

ಅದನ್ನೇ ಕನ್ನಡದಲ್ಲಿ

ಲೇಸನಾಡಿದೆ ತಮ್ಮ ಮೋಕ್ಷಾ । ವಾಸವನು ಹೇಳುವೆನು ಗೌಪ್ಯದ
ರಾಶಿಯೊಳಗತಿ ಗೌಪ್ಯವಾದುತ್ಕೃಷ್ಟ ವಿದ್ಯೆಯನು ॥

ಮೊದಲು ಮಾಯಾ ಸ್ವರೂಪವನ್ನೂ, ಅದರ ಎರಡು ರೂಪಗಳನ್ನೂ ವಿಕ್ಷೇಪ ಆವರಣ ಇವೆಲ್ಲವುಗಳ ವಿಚಾರ ತಿಳಿಸುತ್ತಾನೆ. ದೇಹದ ವಿಚಾರ ಸುಕೃತ ದುಷ್ಕೃತ ಮೊದಲಾವುಗಳ ವಿಚಾರ ಮೊದಲಾದವುಗಳನ್ನೆಲ್ಲ ಸಾದ್ಯಂತವಾಗಿ ಹೇಳಿ ಲಕ್ಷ್ಮಣನ ಮನಸ್ಸನ್ನು ಆತ್ಮಜ್ಞಾನದ ಕಡೆಗೆ ತಿರುಗಿಸುತ್ತಾನೆ

ಈ ರೀತಿ ದಿನಕಳೆಗಯುತಿ [illegible]

ಳಾದ ಶೂರ್ಪನಖಿಯು

ಪೀಡಿತಳಾಗಿ ಆತನನ್ನು

ಸಂವಾದ ರಾಮು ತನ್ನ

ತಂದೆಯಾಜ್ಞೆಗೆ ಅನು

ನೊಡನೆ ತನ್ನ ಮನದೀಗಿ [illegible]

ಮಾತಿನಂತೆ ಲಕ್ಷ್ಮಣನ ಬಳಿ ಬರುತ್ತಾಳೆ. ಲಕ್ಷ್ಮಣ ಅವಳ ಕಿವಿ ಮೂಗು ಕೊಯ್ದು ಕಳುಹಿಸುತ್ತಾನೆ ಇಲ್ಲೆಲ್ಲ ಸಂಸ್ಕೃತ ಶ್ಲೋಕಗಳ ನೇರ ಅನುವಾದ ಇದೆ ಖರದೂಷಣರು ಬರುತ್ತಾರೆ. ಘನಘೋರ ಸಂಗ್ರಾಮ ರಾಕ್ಷಸರ ನಾಶ ಇತ್ಯಾದಿ ಕಥೆ ಸರಾಗವಾಗಿ ಮುಂದುವರಿಯುತ್ತದೆ.

ಶೂರ್ಪನಖಿಯು ಸತ್ತುಬಿದ್ದ ರಾಕ್ಷಸರ ಸಮೂಹವನ್ನು ನೋಡಿ ರಾವಣನ ಬಳಿ ಹೋಗುತ್ತಾಳೆ. ರಾಮ ಸೀತೆ ಇವರ ಸೌಂದರ್ಯದ ವರ್ಣನೆ ಸೀತೆಯನ್ನು ತರಲು ರಾವಣನಿಗೆ ಆದೇಶ ರಾವಣ ರಾತ್ರಿಯೆಲ್ಲ ನಿದ್ರೆ ಇಲ್ಲದೇ ಕಳೆದ.

ಏಕೇನ ರಾಮೇಣ ಕಥಂ ಮನುಷ್ಯ ಮಾತ್ರೇಣ ನಷ್ಟಃ ಸಬಲಃ ಖರೋಽಪಿ
ಭ್ರಾತಾ ಕಥಂ ಮೇ ಬಲವೀರ್ಯದರ್ಪಯುತೋ ವಿನಷ್ಟೋ ಬತ ರಾಘವೇಣ ॥೫೪_೫॥
ಯದ್ವಾ ನ ರಾಮೋ ಮನುಜಃ ಪರೇಶೋ ಮಾಂ ಹಂತು ಕಾಮಃ ಸಬಲಂ ಬಲೌಘೈಃ
ಸಂಪ್ರಾರ್ಥಿತೋಽಯಂ ದ್ರುಹಿಣೇನ ಪೂರ್ವಂ ಮನುಷ್ಯ ರೂಪೋಽದ್ಯ
ರಘೋಃ ಕುಲೇಽಭೂತ್ ॥೫೫_೫॥
ವಧ್ಯೋಽಯದಿ ಸ್ಯಾಂ ಪರಮಾತ್ಮನಾಹಂ ವೈಕುಂಠರಾಜ್ಯಂ ಪರಿಪಾಲಯೇಽಹಂ
ನೋ ಚೇದಿದಂ ರಾಕ್ಷಸ ರಾಜ್ಯಮೇವ ಭೋಕ್ಷ್ಯೇ ಚಿರಂ
ರಾಮಮತೋ ವ್ರಜಾಮಿ ॥೫೬_೫॥

ಇದರ ಕನ್ನಡ ಅನುವಾದ ಹೀಗಿದೆ

ಅಲ್ಲಿ ರಾತ್ರಿಯುಂ ದನುಜ ನಿದ್ರೆಗ । ಳಿಲ್ಲದೇ ಚಿಂತಿಸಿದ ರಾಘವ
ನಲ್ಲವೋ ಮಾನವನು ಮಾನವನಾದಡೆಂತೊಬ್ಬ ॥
ಕೊಲ್ಲಲಾಪನೆ ಖರನ ದೂಷಣ । ಮಲ್ಲ ದೈತ್ಯರ ವೀರ್ಯವಂತರ
ನೆಲ್ಲರನು ತದ್ಭ್ರಾತೃಗಳನತಿ ಸಹಸಿಯುಂನುತಿರ್ದ ॥೩೭_೨೪॥

ಅಲ್ಲದಡೆ ಸಾಕ್ಷಾತ ಲಕುಮಿಯ । ವಲ್ಲಭನು ಪರಮಾತ್ಮನೇ ಬಂ
ದಿಲ್ಲಿಯವತರಿಸಿದನೊ ರಾಘವನಾಗಿ ಮನುಕುಲದಿ ॥
ಕೊಲ್ಲಲೆಂದೆನ್ನವನು ದೈತ್ಯರ । ನೆಲ್ಲರನು ಬಲಸಹಿತ ಪೂರ್ವದಿ
ಬಲ್ಲೆ ಕಮಲಜ ಬೇಡಿಕೊಂಡನು ಹರಿಗೆ ನೆರೆಮೊರೆ ॥೩೮_೨೪॥

ಎತ್ತಲಾನು ಪರಾತ್ಮ ಚಿನ್ಮಯ । ಸತ್ಯ ಸಂವಿನ್ಮಾತ್ರ ಸದ್ವಯ
ವಸ್ತುವಾದಾ ರಾಮನೆನ್ನನು ರಣದಿ ಮಡುಹಿದಡೆ ॥
ನಿತ್ಯ ಶುದ್ಧ ವಿಬುದ್ಧ ಕೇವಲ । ವಸ್ತುವೇ ತಾನಾಗಿಯಾಳುವೆ
ನುತ್ತಮದ ವೈಕುಂಠ ರಾಜ್ಯವನೆಂದ ದಶಕಂಠ ॥೩೯_೨೪॥

ಹೀಗೆ ನಿಶ್ಚೈಸುತ್ತ ರಾಮನಾಮದಲ್ಲಿಯೇ ತಲ್ಲೀನನಾದ

ಮುಂದೆ ಸೀತೆಯನ್ನು ತರಲು ಮಾರೀಚನ ಸಹಾಯಕ್ಕಾಗಿ ಅತನಲ್ಲಿಗೆ ಪಯಣ ಮಾರೀಚನೊಡನೆ ಬಂದ ವೃತ್ತಾಂತವ ಕಥನ ಮಾಯಾಮೃಗವಾಗಿ ನೀನು ರಾಮನ ಇದಿರಿನಲ್ಲಿ ಸುಳಿದಾಡು. ರಾಮನನ್ನು ಸೀತೆಯಿಂದ ಬೇರ್ಪಡಿಸು ನಾನು ಸೀತೆಯನ್ನು ತರುತ್ತೇನೆ ಎಂದ

ಆಗ ಮಾರೀಚ ಹೇಳಿದ ರಾಮನ ಗುಣಗಾನ ಮಾಡಿದ ಅತನ ಬಳಿ ಹೋಗುವದು ಬೇಡ ಎನ್ನುತ್ತ ತನ್ನ ಹಿಂದಿನ ಕಥೆ ಹೇಳಿದ ಈ ವಿಷಯವನ್ನು ಬಿಟ್ಟು ಸುಮ್ಮನೆ ಲಂಕೆಗೆ ಹೋಗಿ ಸುಖದಿಂದ ರಾಜ್ಯವಾಳು ಎಂದು ಉಪದೇಶಿಸಿದ ಇಲ್ಲಿ ಕವಿಯು ರಾಮನ ವರ್ಣನೆಯನ್ನು ಚೆನ್ನಾಗಿ ಹಲವಾರು ಪದ್ಯಗಳಲ್ಲಿ ಮಾಡಿದ್ದಾನೆ ಈ ಮಾರೀಚೋಕ್ತಿಗಳು ರಾವಣನಲ್ಲಿ ಏನೂ ಪ್ರಭಾವ ಬೀರಲಿಲ್ಲ ರಾವಣ ಹೇಳಿದ-ನೀನು ನಾನು ಹೇಳಿದಂತೆ ಮಾಡದೇ ಇದ್ದರೆ ಕೂಡಲೇ ನಿನ್ನ ತಲೆ ತೆಗೆಯುವೆ. ರಾವಣನ ಕೈಯಲ್ಲಿ ಸಾಯುವದಕ್ಕಿಂತ ರಾಮನ ಕೈಯಲ್ಲಿ ಮರಣ ಹೊಂದುವದು ಲೇಸು ಎಂದು ಆಲೋಚಿಸಿ ರಾವಣನ ಕಾರ್ಯಕ್ಕೆ ಒಪ್ಪಿಕೊಂಡ.

ಕೊಂದೆನೆಂದರಿ ನಿನಿಂಪನಾತ್ರನಿ । ಮಂಡಪತನದಲಿ ತನ್ನೊಡನೆ ಪ್ರತಿ
ಯೊಂದನುಡಿದನೆನಲ್ಕೆ ರಾವಣ ವಚನವದು ಕೇಳಿ ॥
ನಿಂದು ತನ್ನೊಳು ಯೋಚಿಸಿದನರ । ವಿಂದ ಲೋಚನ ರಾಮಶರದಲಿ
ಹೊಂದಿದಡೆ ತನಗುತ್ತಮದ ಪದವಹುದಲಾ ಯೆನುತ ॥ ೩೩ ೫೦ ॥

ಅಂತೂ ಮಾಯಾಮೃಗವಾಗಿ ಪಂಚವಟಿಯಲ್ಲಿ ಸೀತೆಯೆದುರು ಸುಳಿದಾಡಿದ ಮೃಗವನ್ನು ಕಂಡ ಸೀತೆ ಅದು ತನಗೆ ಬೇಕೆಂದು ರಾಮನಲ್ಲಿ ಬೇಡಿದಳು. ಸೀತೆಯ ಇಚ್ಛೆ ಪೂರೈಸಲು ಮೃಗವನ್ನು ಹಿಡಿಯಲು ರಾಮ ಹೊರಟ.

ಇದಕ್ಕಿಂತ ಮೊದಲು ರಾಮನು ಸೀತೆಯನ್ನು ಕುರಿತು ರಾವಣ ಬರುವ ವಿಚಾರ ತಿಳಿಸಿ ಅಗ್ನಿಯಲ್ಲಿರುವಂತೆ ಸೀತೆಗೆ ಹೇಳುತ್ತಾನೆ ಮಾಯಾ ಸೀತೆಯನ್ನು ತನ್ನೊಡನೆ ಇಟ್ಟುಕೊಂಡಿರುತ್ತಾನೆ. ಲಕ್ಷ್ಮಣ ಸೀತೆಯ ಕಾವಲಿಗಾಗಿ ಇರುತ್ತಾನೆ. ರಾಮ ಮೃಗದ ಹಿಂದೆ ಹೋಗಿ ಹಿಡಿಯಲು ಶಕ್ಯವಾಗದೇ ಬಾಣದಿಂದ ಹೊಡೆಯುತ್ತಾನೆ. ಆತ ಸಾಯುವಾಗ ಹಾ ಲಕ್ಷ್ಮಣಾ ! ಹಾ ಸೀತೇ !! ಎಂದು ರಾಮನ ದನಿಯಿಂದ ಒದರುತ್ತಾನೆ. ಇದನ್ನು ಕೇಳಿ

ಭಯಾರ್ತಳಾದ ಸೀತೆ ಲಕ್ಷ್ಮಣನನ್ನು ರಾಮನ ಬಳಿ ಅಟ್ಟುತ್ತಾಳೆ. ಲಕ್ಷ್ಮಣ ಸೀತೆಯರ ಸಂವಾದ ಸೀತೆಯ ಪರುಷ (ಕಠೋರ) ವಾಕ್ಯ ಕೇಳಿ ಲಕ್ಷ್ಮಣ ಹೊರಡುತ್ತಾನೆ ರಾವಣ ಮುನಿವೇಷದಿಂದ ಬಂದು ಸೀತಾಪಹರಣ ಮಾಡುತ್ತಾನೆ. ಪರ್ಣಶಾಲೆಯಿರುವ ನೆಲಸಹಿತವೇ ಇಪ್ಪತ್ತು ಕೈಗಳಿಂದ ಸೀತೆಯನ್ನೆತ್ತಿ ಹೊರಡುತ್ತಾನೆ. ಸೀತೆಯ ಆಕ್ರಂದನ ಕೇಳಿದ ಜಟಾಯು ಯುದ್ಧಕ್ಕೆ ಸನ್ನದ್ಧನಾದ

ಎನುತ ರಥವನು ತೀಕ್ಷ್ಣತುಂಡದ | ಕೊನೆಯಿಂದಪ್ಪಳಿಸಿದರೆ ಪುಡಿಪುಡಿ
ಯೆನಿಸುತಾ ರಥವೆರಡು ಕಾಲಲಿ ತೋಳಸಿಪ್ಪತ್ತ ||
ಘನಸಹಸಿ ಚೂರ್ಣವನು ಮಾಡುತ | ಧನುವ ಮುರಿದೀಡಾಡಿ ರಾವಣ
ಜನಕ ಸುತೆಯನು ಬಿಟ್ಟುಕೊಂಡನು ಬಿಡಾರವನು ಜಡಿದು || ೩೬_೨೬ ||

ಘನಘೋರ ಯುದ್ಧದಲ್ಲಿ ಜಟಾಯು ಗತಪ್ರಾಣನಾದ ರಾವಣ ಸೀತೆಯೊಂದಿಗೆ ಮುಂದುವರಿದ ಆಗ ಸೀತೆ ಋಷ್ಯಮೂಕ ಪರ್ವತದಲ್ಲಿ ಕಪಿಗಳನ್ನು ಕಂಡು ತನ್ನಾಭರಣಗಳನ್ನೆಲ್ಲ ಗಂಟು ಕಟ್ಟಿ ಕೆಳಕ್ಕೆ ಎಸೆದಳು ರಾವಣ ಶರಧಿಯನ್ನು ದಾಟಿ ಲಂಕೆಗೆ ಹೋಗಿ ಅಶೋಕಾವನದಲ್ಲಿ ಸೀತೆಯನ್ನು ಇರಿಸಿದ

ಇತ್ತ ಲಕ್ಷ್ಮಣನ ಬರವನ್ನು ಕಂಡು ರಾಮ ಹಳಹಳಿಸಿದ ಸೀತೆಯ ಗತಿಯೇನು ಎಂದು ಚಿಂತಿಸಿದ ಸೀತೆಯನ್ನು ಯಾಕೆ ಬಿಟ್ಟು ಬಂದೆ ? ಎಂದು ಲಕ್ಷ್ಮಣನಲ್ಲಿ ವಿಚಾರಿಸಿದ ಇಬ್ಬರೂ ಪರ್ಣಶಾಲೆಗೆ ಬಂದು ನೋಡುತ್ತಾರೆ. ಸೀತೆ ಇಲ್ಲ !! ಆಗ ಆದ ರಾಮನ ದುಃಖ ವರ್ಣನಾತೀತ.

ತತ್ರಾದೃಷ್ಟ್ವಾ ಜನಕಜಾಂ ವಿಲಲಾಪಾತಿ ದುಃಖಿತಃ |
ಹಾ ಪ್ರಿಯೇ ಕ್ವ ಗತಾಸಿ ತ್ವಂ ನಾಸಿ ಪೂರ್ವವದಾಶ್ರಮೇ || ೧೫-೮ ||
ಅಥವಾ ಮದ್ವಿಮೋಹಾರ್ಥಂ ಲೀಲಯಾಕ್ವ ವಿಲೀಯಸೇ |
ಇತ್ಯಾಚಿನ್ವನ್ ವನಂ ಸರ್ವಂ ನಪಶ್ಯಜ್ಜಾನಕೀಂ ತದಾ || ೧೬-೮ ||
ವನದೇವ್ಯಃ ಕುತಃ ಸೀತಾಂ ಬ್ರುವಂತ ಮಮವಲ್ಲಭಾಂ
ಮೃಗಾಶ್ಚ ಪಕ್ಷಿಣೋ ವೃದ್ಧಾ ದರ್ಶಯಂತು ಮಮಪ್ರಿಯಾಂ || ೧೭-೮ ||

ಇದನ್ನೇ ಕನ್ನಡದಲ್ಲಿ

ಹಾ ರಮಣಿ ಹಾ ಸೀತೆ ಯಾತಕೆ | ಬಾರೆ ಹತ್ತಿರೆ ಎತ್ತ ಹೋದ್ಯೆ
ನಾರಿಯಾಶ್ರಮದಿಂದ ಬಿಟ್ಟೆನ್ನೊಡನೆ ಮೋಹಿಸಲು ||

ಸ್ಮರಿ ಲೀಲೆಯೊಳಡಗಿದೆಯೊ ತ । ನ್ನಾರಯಿಕೆಗಿನ್ನಾರೆನುತ್ತಿ
ಹಾರಯಿಸುತರಸಿದನು ವನದಲ್ಲಿರಲು ರಘುನಾಥ ||| ೧೫-೨೭ ||

ಕಂಡಿರೇ ವನದೇವಿಯರು ಮ । ತ್ಪುಂಡರೀಕದಳಾಕ್ಷಿ ಸೀತೆಯ
ಕಂಡಿರೈ ಮೃಗನಿಕರ ಪಕ್ಷಿವ್ಯಾಳರಾದಿಗಳು ||
ಕಂಡಿರೇ ತರುನಿಕರ ತನ್ನ ಸು । ಮಂಡನೆಯನೆನುತರಸಿ ಕಾಣದೆ
ಖಂಡ ಮಹಿಮನು ಮರ್ತ್ಯರಂತೆ ವಿಲಾಪಿಸುತ್ತಿರ್ದ || ೧೬_೨೭ ||

ಹೀಗೆ ವಿಲಾಪಿಸುತ್ತ, ಸೀತೆಯರಸುತ್ತ. ಮುಂದುವರಿಯುತ್ತ ಜಟಾಯುವು ಬಿದ್ದ ಸ್ಥಳಕ್ಕೆ ಬಂದ ಈತನೇ ನನ್ನ ಸೀತೆಯನ್ನು ತಿಂದವ ಎಂದು ಗರ್ಜಿಸುತ್ತ ಆತನನ್ನು ಕೊಲ್ಲಲನುವಾದ ಜಟಾಯು ದೀನನಾಗಿ ಬೇಡಿದ- ನಿನ್ನ ಪ್ರಿಯೆಗಾಗಿ ನನ್ನ ದೇಹವನ್ನು ತೆತ್ತೆ. ನಾನು ಜಟಾಯು ರಾವಣ ಸೀತೆಯನ್ನು ಕದ್ದೊಯ್ದ ನಿನ್ನೆದಿರಿನಲ್ಲಿಯೇ ಪ್ರಾಣಬಿಡುತ್ತೇನೆ ಎಂದು ಹೇಳಿ ಗತಪ್ರಾಣನಾದ. ಇಲ್ಲಿ ಜಟಾಯುವಿನಿಂದ ರಾಮಸ್ತುತಿ ಪರಮಾತ್ಮ ರೂಪವನ್ನು ಪಡೆದು ಜಟಾಯು ವೈಕುಂಠಕ್ಕೈದಿದ, ಮತ್ತೆ ಪುನಃ ರಾಮಸ್ತುತಿ ಇದನ್ನು ಯಾರು ಕೇಳುತ್ತಾರೋ ಅವರು ಪರಮಾತ್ಮ ಸ್ವರೂಪ ಪಡೆಯುತ್ತಾರೆ ಎಂದು ಶಿವ ಗಿರಿಜೆಗೆ ಹೇಳಿದ

ರಾಮ ಲಕ್ಷ್ಮಣರು ಸೀತೆಯರಸುತ್ತ ಮುಂದುವರಿಯುತ್ತಾರೆ ಮುಂದೆ ಕಬಂಧ ಎಂಬ ರಾಕ್ಷಸನನ್ನು ಕಾಣುತ್ತಾರೆ

ಅಲ್ಲಿ ಮುಂದದ್ಭುತವ ಕಂಡನು । ಖುಲ್ಲ ರಾಕ್ಷಸನಿರಲಿದಿರಲತಿ
ಮಲ್ಲನನು ವಕ್ಷದಿ ಭಯಂಕರ ವಕ್ತ್ರವಾಗಿರಲು ||
ಇಲ್ಲ ಶಿರಪಾದಂಗಳೀಸೂ । ಬಳ್ಳಿಯಂದದ ತೋಳಿರಡು ವನ
ಕೆಲ್ಲ ನಿಲುಕುವ ಯೋಜನಾಯತವಾಗಿಹುದು ಖಳಗೆ || ೨_೨೮ ||

ಇವರು ಕಬಂಧನ ಕೈಯಲ್ಲಿ ಸಿಕ್ಕಿ ಬೀಳುತ್ತಾರೆ. ರಾಮ ಲಕ್ಷ್ಮಣರು ಆತನ ಕೈಗಳೆರಡನ್ನೂ ಕತ್ತರಿಸುತ್ತಾರೆ. ತೋಳು ಕಡಿದ ಕೂಡಲೇ ಆತ ಗಗನಕ್ಕೆ ಹಾರಿ ಪ್ರಶ್ನಿಸುತ್ತಾನೆ - ನೀವು ಯಾರು ದೇವಲೋಕದವರೋ ಅಥವಾ ಈ ಲೋಕದವರೋ ?

ರಾಮ ತನ್ನ ಸಂಗತಿಯನ್ನು ವಿವರಿಸುತ್ತಾನೆ ಆ ರಾಕ್ಷಸನೂ ಕೂಡ ತನ್ನ ವಿವರ ಹೇಳುತ್ತಾನೆ ನಾನೊಬ್ಬ ಗಂಧರ್ವ. ಸ್ತ್ರೀಯರನ್ನು ಮೋಹಿಸುತ್ತಿದ್ದೆ ಒಮ್ಮೆ ಅಷ್ಟಾವಕ್ರ ಮುನಿಯನ್ನು ನೋಡಿ ಹಾಸ್ಯ ಮಾಡಿದೆ ಈ

ಠೀತಿ ಶಾಪ ಬಂದೊದಗಿತು. ರಾಮನಿಂದ ನಿನಗೆ ಶಾಪಮೋಕ್ಷ ಎಂಬ ಪ್ರತಿ ಶಾಪವೂ ದೊರೆಯಿತು. ದೇವರಾಜನಾದ ಇಂದ್ರನನ್ನು ಎದುರಿಸಿದುದರಿಂದ ಈ ರೀತಿ ಆಯಿತು ನನ್ನ ಶರೀರವನ್ನು ಒಂದು ಕುಳಿಯಲ್ಲಿ ಹಾಕಿ. ಕಟ್ಟಿಗೆ ಒಟ್ಟಿ ಬೆಂಕಿ ಕೊಡು. ಸುಡಲ್ಪಟ್ಟ ನಾನು ನನ್ನ ಹಿಂದಿನ ನಿಜರೂಪವನ್ನು ಪಡೆಯುತ್ತೇನೆ ಅಂತೆಯೇ ಮಾಡಲು ನಿಜ ರೂಪದಿಂದ ಆ ಗಂಧರ್ವ ಎದ್ದು ಬಂದ. ರಾಮನ ಸ್ತುತಿ ಮಾಡತೊಡಗಿದ.

ಸ್ತೋತುಮುತ್ಸಹತೇ ಮೇऽದ್ಯ ಮನೋ ರಾಮಾತಿ ಸಂಭ್ರಮಾತ್ |
ತ್ವಾಮನಂತಮನಾದ್ಯಂತಂ ಮನೋ ವಾಚಾಮಗೋಚರಂ || ೨೮ ||
ಸೂಕ್ಷ್ಮಂ ತೇ ರೂಪಮವ್ಯಕ್ತಂ ದೇಹದ್ವಯ ವಿಲಕ್ಷಣಂ |
ದೃಗ್ರೂಪಮಿತರತ್ ಸರ್ವಂ ದೃಶ್ಯಂ ಜಡಾತ್ಮಕಂ || ೨೯ ||

ಕನ್ನಡ ಅನುವಾದ

ಸ್ತುತಿಸಲೆಂದೆನೆ ರಾಮ ನಿನ್ನನು | ಮತಿ ತನಗೆ ಸಂಭ್ರಮಿಸುತಿದೆಲಾ
ಶ್ರುತಿ ವಿದೂರ ಮನೋವಚನಕಳವಡದನಂತನನು ||
ಪ್ರತಿ ರಹಿತ ಸೂಕ್ಷ್ಮವನು ನೀನೀ | ಕೃತಕ ದೇಹದ್ವಯ ವಿಲಕ್ಷಣ
ತತಿಶಯಾವ್ಯಕ್ತನನು ಪೊಗಳುವಡಳವೆ ತನಗೆಂದ || ೨೭-೨೮ ||

ಮುಂದೆ ನಲವತ್ತನೆಯ ಪದ್ಯದವರೆಗೂ ರಾಮನಸ್ತುತಿಯೇ ಗುಣಗಾನವೇ ನಂತರ ರಾಮನಿಂದ ಆತನಿಗೆ 'ವರಪ್ರದಾನ ಯೋಗಿಗಳಿಗೆ ಮಾತ್ರ ಗೋಚರವಾಗುವ, ಸನಾತನವಾದ ನನ್ನ ಪರಮ ಸ್ಥಾನಕ್ಕೆ ಗಮಿಸುವವನಾಗು ಎಂದು ಹರಸಿ ಕಳುಹಿಸುತ್ತಾನೆ ಕೊನೆಯಲ್ಲಿ ಆತನ ಸ್ತುತಿ ಈ ರೀತಿ ಇದೆ.

ಜಯ ನಮೋ ಶ್ರೀ ರಾಮಭದ್ರನೆ | ಜಯನಮೋ ಪರಮಾತ್ಮ ವಿಗ್ರಹ
ಜಯನಮೋ ಪರಮಾತ್ಮ ಶ್ರೀ ರಘುನಾಥ ಸುಖನಾಥ ||
ಜಯಾಭಕುತ ಜನ ಯೂಥ ಪಾಲಕ | ಜಯ ಜಗನ್ಮಯ ಭಕ್ತ ವತ್ಸಲ
ಜಯತು ಲಕ್ಷ್ಮಣ ಸೇವ್ಯ ಮುನಿಜನ ಭಾವ್ಯ ಸುಶ್ರಾವ್ಯ || ೪೧-೨೮ ||

ಗಂಧರ್ವ ಹೇಳಿದ್ದೇನೆಂದರೆ – ಮುಂಭಾಗದ ಆಶ್ರಮದಲ್ಲಿ ಶಬರಿಯಿದ್ದಾಳೆ. ಆಕೆಯಲ್ಲಿಗೆ ಹೋಗು ಆಕೆ ಎಲ್ಲವನ್ನು ತಿಳಿಸುತ್ತಾಳೆ.

ನಂತರ ಹುಲಿ ಸಿಂಹ ಮೊದಲಾದ ದುಷ್ಟಮೃಗಗಳಿರುವ ಕಾಡನ್ನು ಬಿಟ್ಟು ಶಬರಿಯಾಶ್ರಮದ ಕಡೆ ಹೋಗುತ್ತಾರೆ. ಅಲ್ಲಿ ಶಬರಿಯು ಅವರನ್ನು ಕುರಿತು–

ಬಂದಿರ್ಪ ಶ್ರೀ ರಾಮ ಲಕ್ಷ್ಮಣ । ರಿಂದು ತನ್ನಾಲಯಕೆಸುತ್ತ ಕರ
ತಂದು ಕುಳಿರಿಸಿದಳು ಯಥೋಚಿತದಾಸನದ ಮೇಲೆ ॥
ಸಂದಣಿಯು ಸಂತೋಷದೋಂಪ್ರುಳಿ । ಯಿಂದ ಸಂಭ್ರಮಿಸುತ್ತ ಜಲವನು
ತಂದು ತೊಳೆದಳು ರಾಮ ಲಕ್ಷ್ಮಣರಂಘ್ರಿ ಪುಕಮದ ॥ ೫–೨೯ ॥

ಪಾದೋದಕವನ್ನು ತನ್ನ ಮೇಲೆ ಅಭಿಷೇಕ ಮಾಡಿಕೊಂಡಳು ನಂತರ ವಿಧಿಯುಕ್ತವಾಗಿ ಅವರನ್ನು ಪೂಜಿಸಿದಳು ಇಲ್ಲಿ ನನ್ನ ಗುರುಗಳು ಇದ್ದರು. ಅವರ ಸೇವೆಯಲ್ಲಿದ್ದ ನನಗೆ ಅವರು ಹೇಳಿದ್ದೇನೆಂದರೆ–

ಇಲ್ಲಿಗೇ ತಾ ಬಹನು ರಾಘವ । ನಿಲ್ಲು ನೀನೀ ಸ್ಥಳದಿ ತಪ್ಪದ
ಪಲ್ಲವದ ಧ್ಯಾನದಲಿ ಸುಸ್ಥಿರೆಯಾಗಿ ಸುಖದಿಂದ ॥
ಬಲ್ಲಿದಾತನು ಚಿತ್ರಕೂಟದಿ । ವಲ್ಲಭೆಯ ಸಹಿತೀಗಳಿದ ಕೈ
ವಲ್ಯನಾಥನು ಲೋಕಸಂಪ್ರಕಕೆಂದರವರಂದು ॥ ೧೩–೨೯ ॥

ಅವರ ಹೇಳಿಕೆಯಂತೆ ನಿನ್ನ ಬರವನ್ನು ಹಾರೈಸುತ್ತಿದ್ದೆ. ನೀನು ಬಂದೆ ! ಹೀನ ಜಾತಿಯವಳಾದ ನನಗೆ ಗುರುಕರುಣದಿಂದ ನಿನ್ನ ದರ್ಶನವಾಯ್ತು ನಿನ್ನನ್ನು ಯಾವ ರೀತಿಯಿಂದ ಹೊಗಳುವದು ಎಂದು ತಿಳಿಯುವದಿಲ್ಲ ಎಂದಾಗ ರಾಮನು ಭಕ್ತಿಯೇ ಎಲ್ಲವಕ್ಕೂ ಕಾರಣ ಎಂದು ಹೇಳಿ ಆಕೆಗೆ ನಾನಾ ರೀತಿಯ ಸೇವಾವಿಧಾನವನ್ನು – ಸದ್ಭಕ್ತಿ, ನನ್ನ ಕಥೆಯನ್ನು ಹೇಳುವದು ನನ್ನ ಅವತಾರ ಲೀಲೆಗಳನ್ನು ಕೇಳುವದು ಇನ್ನೊಬ್ಬರಿಗೆ ನನ್ನ ಕಥೆಯನ್ನು ಹೇಳುವದು. ಆಚಾರ್ಯರನ್ನು ಸೇವಿಸುವದು. ದಾನ–ಧರ್ಮ ಮಾಡುವದು. ಯಮ ನಿಯಮಾದಿ ಮುಖ್ಯ ನಿಯಮಗಳನ್ನು ಅನುಸರಿಸುವದು ವಿಷಯಾಭಿಲಾಷೆಯನ್ನು ತೊರೆದು ವೈರಾಗ್ಯಪರನಾಗುವದು. ಜೀವಭ್ರಾಂತಿಯ ಬಿಟ್ಟು ಆತ್ಮತತ್ವವನ್ನು ತಿಳಿಯುವದು– ನವವಿಧ ಭಕ್ತಿಯ ವಿವರವನ್ನು ತಿಳಿಸುತ್ತಾನೆ. ನೀನು ಸತ್ಸಂಗನಿರತಳಾಗಿರುವದರಿಂದ ನಿನಗೆ ನನ್ನ ದರ್ಶನವಾಯ್ತು. ಈಗ ನನಗೆ ಸೀತಾ ವೃತ್ತಾಂತ್ತ ತಿಳಿಸು

ಎಲ್ಲಿಹಳು ತನ್ನರ್ಧ ದೇಹದ । ಫುಲ್ಲ ಲೋಚನೆ ಸೀತೆಯಾಕಡೆ
ಯೆಲ್ಲಿ ಚೋರರು ಕೊಂಡು ಪೋಯ್ದುದ ನೀನು ಕಂಡಿಹೆಯು ॥
ಬಲ್ಲಡುಸುರೆನೆ ಶಬರಿ ನುಡಿದಳು । ವಲ್ಲಭನು ನೀ ಬಲ್ಲೆ ವಿಶ್ವದ
ಲುಳ್ಳದನು ಸರ್ವಜ್ಞ ಸರ್ವಾಂತರಿ ಜಗದ್ವ್ಯಾಪಿ ॥ ೩೩–೨೯ ॥

ಈ ರೀತಿ ಹೇಳಿ ಸೀತೆಯನ್ನು ರಾವಣನು ಕದ್ದೊಯ್ದು ಲಂಕಾಪಟ್ಟಣದ ಅಶೋಕಾವನದಲ್ಲಿ ಇಟ್ಟಿರುತ್ತಾನೆ. ಇಲ್ಲಿಂದ ಮುಂದೆ ಪಂಪಾಸರೋವರವಿದೆ.

ಅಲ್ಲಿ ಋಷ್ಯಮೂಕ ಪರ್ವತದಲ್ಲಿ ಸುಗ್ರೀವನಿದ್ದಾನೆ ನೀನು ಆತನ ಗೆಳೆತನ ಮಾಡು ಆತ ನಿನ್ನ ಕಾರ್ಯಕ್ಕೆ ಸಹಾಯಕನಾಗುತ್ತಾನೆ.

ಎಲೈ ರಘುನಂದನನೇ ನಾನು ನಿನ್ನ ಎದುರಿಗೇ ಪ್ರವೇಶ ಮಾಡುತ್ತೇನೆ ಒಂದು ಮುಹೂರ್ತ ಕಾಲ ನಿಲ್ಲುವವನಾಗು ಎಂದು ಹೇಳಿ ಅಗ್ನಿ ಪ್ರವೇಶ ಮಾಡಿದಳು. ಪಂಚ ಭೌತಿಕ ಶರೀರವನ್ನು ತೊರೆದು ಮುಕ್ತಿಯನ್ನು ಪಡೆದಳು

ಕೊನೆಯಲ್ಲಿ ಮಹಾದೇವನು ಈ ರೀತಿ ಹೇಳುತ್ತಾನೆ.

ನಾನಾಜ್ಞಾನ ವಿಶೇಷ ಮಂತ್ರವಿತತಿಂ ತ್ಯಕ್ತ್ವಾ ಸುದೂರೇ ಭೃಶಂ
ರಾಮಂ ಶ್ಯಾಮತನುಂ ಸ್ಮರಾರಿ ಹೃದಯೇ ಭಾಂತಂ ಭಜಧ್ವಂ ಬುಧಾಃ ॥೪೩-೧೦ ॥

ಕನ್ನಡ ಅನುವಾದ

ಕಾವ್ಯ ಕಮಾಗಮನುಳಿಸು ನಾನಾ | ಭ್ರಾಮಕದ ಬಹು ಮಂತ್ರ ತಂತ್ರದ
ನೇಮ ವಿವಿಧಜ್ಞಾನ ವಿಷಯಂಗಳೆಲ್ಲವನು ಬಿಟ್ಟು ॥
ನಾಮುಂದದಿ ಭಜಿಸುವ ಚಿದಾತ್ಮ | ಶ್ಯಾಮ ಕಾಯ ಮನೋಹರ ಶ್ರೀ
ರಾಮನನು ಭಜಿಸುವುದೆನುತ್ತೀಶ್ವರ ನಿರೂಪಿಸಿದ ॥ ೪೫-೨೯ ॥

ಹೀಗೆ ಕವಿಯು ಸಂಪೂರ್ಣವಾಗಿ ಸಂಸ್ಕೃತದ ಅಧ್ಯಾತ್ಮ ರಾಮಾಯಣವನ್ನು ಕನ್ನಡಕ್ಕೆ ಅನುವಾದ ಮಾಡಿದ್ದಾನೆ.

ಇನ್ನು ಕಿಷ್ಕಿಂಧಾಕಾಂಡಕ್ಕೆ ಬರೋಣ

ಶಬರಿಯು ತಿಳಿಸಿದಂತೆ ರಾಮ ಲಕ್ಷ್ಮಣರು ಪಂಪಾ ಸರೋವರದ ಕಡೆಗೆ ಹೊರಟರು ಇಲ್ಲಿ ಸರೋವರದ ವರ್ಣನೆ ಚೆನ್ನಾಗಿ ಮಾಡಿರುತ್ತಾನೆ. ಬರುತ್ತಿರುವ ಅವರನ್ನು ನೋಡಿದ ಸುಗ್ರೀವನು ಹೆದರಿ ಬೆಟ್ಟದ ತುದಿಗೆ ಹೋಗಿ ಹನುಮನನ್ನು ಕರೆದು ಈ ರೀತಿ ಹೇಳಿದನು

ಭೀತಿಯಲಿ ಸುಗ್ರೀವನೆಂದನು | ವಾತಸುತನೊಡನಾರು ನೋಡೈ
ಭೂತಳದಿ ಬಹ ವೀರರನು ನೀ ಪೋಗಿ ವಟುವಾಗಿ ॥
ಜಾತಿ ವಿಪ್ರತ್ವವನರಿದು ಬಾ | ರಾತಗಳ ವೋಣಿಪ್ಪನಿವರು ವಿ
ಘಾತಿಸಲು ಕಳುಹಿದೆನೆಲೆ ಬಾಲಿಯಂದಾರಿವರೆಂದ ॥ ೮-೩೦ ॥

ಇದು ಸಂಸ್ಕೃತ ಶ್ಲೋಕದ ಅನುವಾದ. ಸಂಸ್ಕೃತ ಶ್ಲೋಕ ಹೀಗಿದೆ

ಭಯಾದುವಾಚ ಹನೂಮಂತಂ ಕೌ ತೌ ವೀರವರೌ ಸಖೇ |
ಗಚ್ಛ ಜಾನೀಹಿ ಭದ್ರಂ ತೇ ಬಟುರ್ಭೂತ್ವಾ ದ್ವಿಜಾಕೃತಿಃ ॥ ೮-೧ ॥

ಅಂತೆಯೇ ಹನುಮಂತ ಬಟು ರೂಪ ತಾಳಿ ರಾಮನ ಬಳಿ ಹೋಗಿ ವಿನಯದಿಂದ ಪ್ರಶ್ನಿಸಿದ.

ಬಂದು ವಿನಯದಲೆರಗಿ ರಾಮಂ । ಗೆಂದನಾರ್ಕೈ ನೀವು ಮಾನವ
ರಂದವಾಗಿಹ ವೀರ್ಯ ಶೌರ್ಯೋದಾರ ವಿಕ್ರಮರು ॥
ಇಂದುವೆಸೆಯಲು ಬೆಳಗುವಿರಿ ದಶಿ । ಯೆಂದದಲಿ ತನುಕಾಂತಿ ಛಾಯಾ
ಖಂಡದಲಿ ಮೂಲೋಕ ಕರ್ತರಾಗಳಿನ್ನು ಮಾತಕೆಂದ ॥ ೧೧-೩೦ ॥

ಹೀಗೆ ರಾಮ ಲಕ್ಷ್ಮಣರ ಪೂರ್ವೋತ್ತರಗಳನ್ನೆಲ್ಲ ವಿಚಾರಿಸಿ ತಿಳಿಯುತ್ತಾನೆ. ತನ್ನ ಪರಿಚಯವನ್ನೂ ಮಾಡಿಕೊಡುತ್ತಾನೆ ವಾಲಿಯ ವಿಚಾರವಾಗಿ ತಿಳಿಸುತ್ತಾನೆ. ತಾನು ಹನುಮ ಈಗಲೇ ಹೋಗಿ ಸುಗ್ರೀವನ ಸಖ್ಯ ಮಾಡುವಾ ಎನ್ನುತ್ತಾನೆ. ಅಂತೆಯೇ ಅವರೀರ್ವರೂ ಆತನ ಹೆಗಲಮೇಲೆ ಕುಳಿತು ಸುಗ್ರೀವನ ಬಳಿ ಬರುತ್ತಾರೆ. ಸೀತೆಯ ವೃತ್ತಾಂತವನ್ನು ಹೇಳುತ್ತಾನೆ ನಾನು ನನ್ನ ಮಂತ್ರಿಗಳೊಡನೆ ಬೆಟ್ಟದ ಮೇಲಿರುವಾಗ ಯಾವನೋ ಒಬ್ಬನಿಂದ ಒಯ್ಯಲ್ಪಡುತ್ತಾ ರಾಮಾ ರಾಮಾ ಎಂದು ಕೂಗಿಕೊಳ್ಳುತ್ತಿರುವ ಸ್ತ್ರೀರತ್ನವೊಂದನ್ನು ಕಂಡೆ. ಆಕೆ ತನ್ನ ಆಭರಣಗಳನ್ನೆಲ್ಲ ಗಂಟು ಕಟ್ಟಿ ಕೆಳಕ್ಕೆ ಎಸೆದಳು ಅದು ಗುಹೆಯಲ್ಲಿದೆ. ತಂದು ತೋರಿಸುತ್ತೇನೆ. ಎಂದು ಹೇಳಿ ಅವನ್ನು ತಂದು ತೋರಿಸಿದ ಅದು ಸೀತೆಯದೇ ಎಂದು ತಿಳಿದು ರಾಮ ಬಹು ದುಃಖಪಟ್ಟ ನಂತರ ರಾಮಸುಗ್ರೀವರಿಬ್ಬರೂ ಅಗ್ನಿಸಾಕ್ಷಿಯಾಗಿ ಪ್ರತಿಜ್ಞೆಗೈದರು.

ಇನ್ನು ತನ್ನ ಸಂಗತಿಯನ್ನು ಕೇಳು ಎನ್ನುತ್ತ ಮಾಯಾವಿ ರಾಕ್ಷಸನ ಕಥೆಯನ್ನು ಹೇಳುವಂಥವನಾದನು. ಬಾಲಿಯ ಕಥೆಯನ್ನೂ ಹೇಳಿದ ಆತನ ಭಯದಿಂದ ನಾನು ಇಲ್ಲಿ ಬಂದು ಇರುವಂತಾಯಿತು ಎಂದು ಸಮಸ್ತ ವೃತ್ತಾಂತವನ್ನು ವಿವರಿಸಿದ. ಇದನ್ನು ಕವಿ ಸುಲಭವಾದ ಪದ್ಯಗಳಲ್ಲಿ ವಿವರಿಸಿದ್ದಾನೆ ಇಲ್ಲಿ ಯಾಕೆ ಬಾಲಿ ಬರುವದಿಲ್ಲ ಎಂಬ ವೃತ್ತಾಂತವನ್ನೂ ದುಂದುಭಿ ರಾಕ್ಷಸನ ಸಂಗತಿಯನ್ನೂ ಹೇಳುತ್ತಾನೆ. ಬಾಲಿಯನ್ನು ವಧಿಸುವ ಸಾಮರ್ಥ್ಯ ಯಾರಿಗೂ ಇಲ್ಲ. ಆಗ ರಾಮನು ತನ್ನ ಸಾಮರ್ಥ್ಯ ತೋರಲು ಉದ್ಯುಕ್ತನಾಗುತ್ತಾನೆ

ದುಂದುಭಿಯ ಶರೀರವನ್ನು ತನ್ನ ಪಾದಾಂಗುಷ್ಠದಿಂದ ಹತ್ತು ಯೋಜನ ದೂರ ಎಸೆಯುತ್ತಾನೆ. ಏಳು ತಾಳವೃಕ್ಷಗಳನ್ನು ಒಂದೇ ಬಾಣ

ದಿಂದ ಕತ್ತರಿಸುತ್ತಾನೆ. ಇದರಿಂದ ಸುಗ್ರೀವನಿಗೆ ರಾಮನ ಸಾಮರ್ಥ್ಯದ ಅರಿವಾಗುತ್ತದೆ- ಆಗ ಸುಗ್ರೀವನಿಂದ ರಾಮನ ಸ್ತುತಿ ಕೊನೆಯ ಶ್ಲೋಕ ಹೀಗಿದೆ.

ಅಂಗಾನಿ ತೇ ಪಾದರಜೋ ವಿಮಿಶ್ರ
ತೀರ್ಥಾನಿ ಬಿಭ್ರತ್ವಹಿ ಶತ್ರುಕೇತೋ ||
ಶಿರಸ್ತ್ವದೀಯಂ ಭವ ಪದ್ಮಜಾದ್ಯೈ
ರ್ಜುಷ್ಟಂ ಪರಂ ರಾಮನಮತ್ವಜಸ್ರಂ || ೯೧_೧ ||

ಆದರ ಕನ್ನಡ ಅನುವಾದ

ಅಂಗ ನಿಜಪಾದಾಬ್ಜ ರಜವಿ | ಶೃಂಗವಾದುತ್ತಮಪ ತೀರ್ಥ ಜ
ಲಂಗಳಿಂ ನೆನೆಯಲಿ ಶರೇಣ್ಯ ವರೇಣ್ಯ ಕೇತುಪಿನ ||
ಮಂಗಳಾಬ್ಜ ಭವಾದಿವಂದ್ಯ ಪ | ದಂಗಳಿಂದನು ದಿಸವು ನೆರೆ ಸಾ
ಷ್ಟಾಂಗದಿಂದಡಿಗಡಿಗೆ ನಮಿಸಲೆ ಬೇಕು ತಾನೆಂದ || ೫೫_೩೦ ||

ಇಂತು ಸುಗ್ರೀವನ ಮನದ ಚಿಂತೆಯನ್ನು ದೂರ ಮಾಡಿದ ಬಾಲಿಯನ್ನು ಯುದ್ಧಕ್ಕೆ ಕರೆ ಎಂದು ಆದೇಶಿಸಿದ. ಅಂತೆಯೇ ಸುಗ್ರೀವನು ಕಿಷ್ಕಿಂಧೆಗೆ ಹೋಗಿ ಗರ್ಜಿಸಿ ವಾಲಿಯನ್ನು ಯುದ್ಧಕ್ಕೆ ಕರೆದ ವಾಲಿ ಸುಗ್ರೀವರೊಡನೆ ಘನಘೋರ ಯುದ್ಧ

ತಮಾಪತಂತಂ ಸುಗ್ರೀವಃ ಶೀಘ್ರಂ ವಕ್ಷಸ್ಯತಾಡಯತ್ |
ಸುಗ್ರೀವಮಪಿ ಮುಷ್ಟಿಭ್ಯಾಂ ಜಘಾನ ಕ್ರೋಧ ಮೂರ್ಛಿತಃ |
ವಾಲೀ ತಮಪಿ ಸುಗ್ರೀವ ಏವಂ ಕ್ರುದ್ಧಾ ಪರಸ್ಪರಂ || ೭_೨ ||
ಅಯುಧ್ಯತಾವೇಕರೂಪೌ ದೃಷ್ಟ್ವಾ ರಾಮೋಽತಿ ವಿಸ್ಮಿತಃ |
ನಮುಮೋಚ ತದಾ ಬಾಣಂ ಸುಗ್ರೀವವಧ ಶಂಕಯಾ || ೮.೨ ||

ಇದರ ಕನ್ನಡ ರೂಪ

ಬಾಲಿ ಬೇಗದಿ ಬಂದು ಮುಷ್ಟಿಯು | ಮೇಳವಿಸಿ ಸುಗ್ರೀವನೆದೆಯು ಛ
ಢಾಳಿಸುತ್ತೆರಗಿದನು ಘನತರ ಸಿಂಹನಾದದಲಿ || ೫–೩೧ ||
ಇಲ್ಲಿ ಹುಸಿಹೋಗೆನುತ ಬಾಯಲಿ | ಭುಲ್ಲವಿಸಿ ಸುಗ್ರೀವ ಹೊಡೆದಡೆ
ತಳ್ಳಳಿಸುವನೆ ಬಾಲಿ ಮತ್ತೆರಗಿದನನುಜನುರವ ||
ಘುಲ್ಲಿಸುತ್ತಿಂತೊಬ್ಬರೊಬ್ಬರು | ಮಲ್ಲ ವೀರರು ಹೆಣಗುತಿರೆ ಸಿರಿ
ವಲ್ಲಭನು ಬೆರಗಾದ ರೂಪೆರಡೊಂದೆಯಾಗಿರಲು || ೬–೩೧ ||
ಇಬ್ಬರೊಂದೇ ರೂಪವಾಗಿರೆ | ಸರ್ಬಗತ ಶಂಕಿಸುತ ಶರವನು
ತೆಬ್ಬಿಸಿಂ ಬಿಡದಿರ್ದನೆಚ್ಚಡೆ ಸಖಿಯಳಿವನೆಂದು ||

ಹೀಗೆ ಸುಲಭಶೈಲಿಯಲ್ಲಿ ಕನ್ನಡಿಸಿದ್ದಾನೆ.

ಮುಂದೆ ಸೋತು ಓಡಿಬಂದ ಸುಗ್ರೀವನ ಬೇಡಿಕೆ ತನ್ನನ್ನು ಕೊಂದು ಬಿಡು ಎಂದು. ರಾಮನ ಸಾಂತ್ವನ ಇಬ್ಬರೂ ಒಂದೇ ರೀತಿ ಇರುವದರಿಂದ ನನಗೆ ಎಲ್ಲಿ ಗೆಳೆಯನನ್ನು ಕೊಂದು ಬಿಡುವೆನೋ ಎಂದು ಸಂಶಯವಾಯಿತು ಈ ಸಂಶಯ ಪರಿಹಾರಕ್ಕಾಗಿ ನಿನಗೆ ಈ ಮಾಲೆಯನ್ನು ತೊಡಿಸುವೆನು ಎಂದು ಮಾಲೆಯನ್ನು ತೊಡಿಸಿದನು ಇನ್ನೊಮ್ಮೆ ಯುದ್ಧ ಮಾಡು ಎಂದು ಹುರಿದುಂಬಿಸಿದನು ಈ ಬಾರಿ ನಿಶ್ಚಯವಾಗಿ ವಾಲಿಯನ್ನು ಕೊಲ್ಲುತ್ತೇನೆ ಎಂಬ ಆಶ್ವಾಸನೆ.

ಸುಗ್ರೀವ ಬಂದು ಪುನಃ ಯುದ್ಧಕ್ಕೆ ಕರೆದಾಗ ವಾಲಿ ವಿಸ್ಮಿತನಾದ ವಾಲಿ ಪುನಃ ಯುದ್ಧಕ್ಕೆ ಹೊರಡಲು ತಯಾರಾದಾಗ ಹೆಂಡತಿ ತಾರೆ ತಡೆಯುತ್ತಾಳೆ. ಸುಗ್ರೀವನಿಗೆ ಯಾವನೋ ಬಲಿಷ್ಠನ ಸಹಾಯ ದೊರೆತಿರಬೇಕು ಅಂಗದ ಬೇಟೆಗೆ ಹೋದಾಗ ತಂದ ಸುದ್ದಿಯನ್ನು ವಾಲಿಗೆ ಹೇಳುತ್ತಾಳೆ. ಶ್ರೀರಾಮ ಬಂದಿದ್ದಾನೆ. ಸುಗ್ರೀವನೊಡನೆ ಸಖ್ಯವಾಗಿದೆ ಎಂದಿತ್ಯಾದಿಯಾಗಿ ಆಗ ವಾಲಿಯ ಮಾತು-

ರಾಮ ನಾರಾಯಣನೆ ಕಾಣಾ । ಭೂಮಿ ಭಾರವನಿಳುಹಲವರ
ಸ್ತೋಮ ಬಾಧರಕ್ಷಾರ್ಥವೆಂದವತರಿಸಿದನು ಬಂದು ॥
ಸ್ವಾಮಿಯೆಂಬುದ ನಾನು ಕೇಳಿಹೆ । ನಾಮ ರಹಿತಾನಂತನವ್ವಯ
ನಾ ಮಹಾತ್ಮನ ಭೀತಿ ತನಗೆತ್ತಣದು ಪೇಳೆಂದ ॥ ೨೦-೩೧ ॥
ಆತುಮ ಶ್ರೀರಾಮಗೆನ್ನನ । ರೀತರನ್ಯರೆನಿಪ್ಪುದುಂಟೇ
ಜಾತ ಹಗೆ ಕೇಳಿ ಮಧ್ಯರೆಂಬೀ ಬಗೆ ಮೊದಲೆಯಿಲ್ಲ ॥
ಪ್ರೀತಿಯಿಂ ಕರೆತಂದು ಮನೆಗಾ । ಸೀತನುಪವಂಘ್ರಿಯಲಿ ಕೆಡಹುವೆ
ನೋತು ಸಲಹನೆ ಭಕ್ತಿಗವ್ಯನು ಭೃತ್ಯ ವಾತ್ಸಲನು ॥ ೨೧-೩೧ ॥

ಹೀಗೆ ತಾರೆಯನ್ನು ಸಮಾಧಾನಪಡಿಸಿ ಯುದ್ಧಕ್ಕೆ ಹೋಗುತ್ತಾನೆ. ಘನಘೋರ ಯುದ್ಧ. ರಾಮ ಒಂದು ಬಾಣ ಬಿಟ್ಟು ವಾಲಿಯನ್ನು ಹತ ಮಾಡುತ್ತಾನೆ. ಮುಹೂರ್ತ ಮಾತ್ರ ಜ್ಞಾನ ತಪ್ಪಿದ ವಾಲಿಯು ಎಚ್ಚತ್ತು ಎದುರಿಗಿರುವ ಶ್ರೀರಾಮನನ್ನು ನೋಡುತ್ತಾನೆ- ಮನೋಹರ ರೂಪನಾದ ಶ್ರೀರಾಮನನ್ನು ನೋಡಿ ಆತನ ಸ್ತುತಿ ಮಾಡುತ್ತಾನೆ. ನಂತರ ತನ್ನನ್ನು ಹೊಡೆದ ಕಾರಣ ಕೇಳಿ ಆತನಲ್ಲಿ ಆಕ್ಷೇಪಣೆ ಮಾಡುತ್ತಾನೆ- ಬೇಕಾಗಿದ್ದರೆ ನಾನೇ

ರಾವಣನ ಕುಲಸಹಿತ ಬಂಧಿಸಿ । ದೇವಿ ಸೀತೆಯ ಲಂಕೆ ಸಹಿತೆನ
ಗಾವಗಣ್ಯವು ತಾರನೇ ಕ್ಷಣಮಾತ್ರದಲಿ ತಾನು ॥
ಕೋವಿದನು ಧರ್ಮಿಷ್ಠ ರಾಘವ । ದೇವನೆಂಬುದು ಲೋಕ ವ್ಯಾಧರ
ಭಾವದಿಂ ವಾನರನ ಕೊಂದೆನಾಯ್ತು ಹಿತ ನಿನಗೆ ॥ ೩೫.೩೦ ॥

ಹೀಗೆ ರಾಮನಲ್ಲಿ ಪ್ರಶ್ನೆ ಇಡುತ್ತಾನೆ. ಅದಕ್ಕೆ ತಕ್ಕ ಉತ್ತರ ರಾಮ ನೀಡಿದ ಮೇಲೆ ತನ್ನ ತಪ್ಪನ್ನು ಅರಿತು ರಾಮನನ್ನು ಸ್ತುತಿಸುತ್ತಾನೆ ನಂತರ ರಾಮಕರ ಸ್ಪರ್ಶವಾದ ನಂತರ ವಾಲಿ ತನ್ನ ಪ್ರಾಣವನ್ನು ಬಿಟ್ಟು ದಿವ್ಯದೇಹ ಪಡೆದು ಮೋಕ್ಷಕ್ಕೆ ಹೋಗುತ್ತಾನೆ.

ಈ ಸುದ್ದಿ ತಾರೆಗೆ ತಿಳಿಯುತ್ತದೆ ಮೂರ್ಛಿತಳಾಗುತ್ತಾಳೆ ಎಚ್ಚೆತ್ತು ಗೋಳಿಡುತ್ತ ವಾಲಿಯ ಕಳೇಬರವಿದ್ದಲ್ಲಿಗೆ ಬರುತ್ತಾಳೆ. ವಾಲಿಯನ್ನು ಕೊಂದ ರೀತಿಯಲ್ಲಿಯೇ ತನ್ನನ್ನು ಕೊಲ್ಲು ಎಂದು ರಾಮನಲ್ಲಿ ಮೊರೆಯಿಡುತ್ತಾಳೆ ಆಗ ರಾಮ ತಾರೆಗೆ ತತ್ವೋಪದೇಶ ಮಾಡುತ್ತಾ ಅವಳ ಮನಸ್ಸನ್ನು ಸಾಂತ್ವನಗೊಳಿಸುತ್ತಾನೆ. ದೇಹ ಭಾವನೆಯನ್ನು ಬಿಡಲು ಉಪದೇಶಿಸುತ್ತಾನೆ. ಇಲ್ಲಿ ತತ್ವೋಪದೇಶದ ಕೆಲವು ಪದ್ಯಗಳನ್ನು ನಾವು ನೋಡಬಹುದು-

ದೇಹವಿಂದ್ರಿಯ ವಿಷಯವಾಯು ಸ । ಮೂಹವಂತಃಕರಣದಿಂದಲು
ಬಾಹಿಯಾತುಮನೆಂದು ಕಂಡಾ ತದಭಿಮಾನದಲಿ ॥
ಮೋಹವಡೆಯದೆ ಬಳಿಕ ತಿಳಿವನು । ಸೋಹವೆಂದು ನಿರಾವಲಂಬ ನಿ
ರೀಹ ಸತ್ಯಸ್ವಾನುಭವ ನಿರ್ದ್ವಂದ್ವ ನಿಜ ಪದವ ॥ ೨೪ ೩೨ ॥

ನಿತ್ಯನದ್ವಯ ಶಾಂತ ನಿರ್ಮಲ । ಸತ್ಯನೇಕನಮಾಯನಕ್ರಿಯ
ಪ್ರತ್ಯಯಾದಿ ವಿಲಕ್ಷ ನಿಷ್ಕಳ ನಿಜ ನಿರವಂದ್ಯ ॥
ಸತ್ತ್ವಗಗನ ಶರೀರ ಚಿನ್ಮಯ । ವೃತ್ತಿಪೂರನಖಂಡ ಶಾಶ್ವತ
ವಸ್ತು ತಾನೆಂದರಿದು ಸದ್ಯಸ್ಮುಕ್ತನಹನೆಂದ ॥ ೨೫-೩೨ ॥

ಕೊನೆಯದಾಗಿ ತಾರೆಗೆ ಹೇಳುತ್ತಾನೆ

ಅನ್ಯಭಾವವನುಳಿದು ಭಾವಿಸು । ತನ್ನ ನಿಜರೂಪವನೆಯನುದಿನ
ವೆನ್ನುತಿರು ಬಿಡದೆನ್ನ ನಾಮವರ್ಣವ ಕಾಲದಲು ॥
ಮುನ್ನಿನಾ ಜನ್ಮದಲಿ ಮಾಡಿಹೆ । ನೆನ್ನ ಭಕುತಿಯ ನೀನದರಿನಿಂ
ನನ್ನ ರೂಪವ ತೋರಿದೆನು ನೀ ಮುಕುತಿವಡೆಯಲಿಕೆ ॥ ೨೮-೩೨ ॥

ನಂತರ ರಾಮ ಸುಗ್ರೀವನಿಗೆ ಆಜ್ಞೆ ಮಾಡುತ್ತಾನೆ. - ಅಂಗದ

ನೆನ್ನ ಮಗನಂತೆ ನೋಡಿಕೋ. ಈ ವಾಲಿಯ ಶರೀರವನ್ನು ಪದ್ಧತಿಯಂತೆ ಸಂಸ್ಕರಿಸು ಎಂದಿತ್ಯಾದಿಯಾಗಿ ಅದೇ ರೀತಿ ಮಾಡಲಾಯಿತು. ನಂತರ ಸುಗ್ರೀವನ ಪಟ್ಟಾಭಿಷೇಕ. ಲಕ್ಷ್ಮಣ ಈ ಕೆಲಸ ಮುಗಿಸಿ ರಾಮನ ಬಳಿ ಬರುತ್ತಾನೆ. ನಂತರ ಮಳೆಗಾಲ ಪ್ರಾರಂಭವಾದ್ದರಿಂದ ರಾಮ, ಲಕ್ಷ್ಮಣರು ಪ್ರವರ್ಷಣಗಿರಿಯ ಶಿಖರದ ಗುಹೆಯಲ್ಲಿ ವಾಸ ಮಾಡಿದರು. ಅಲ್ಲಿ ಅವರು ಸುಖವಾಗಿ ಕಾಲ ಕಳೆಯುತ್ತಿರುವಾಗ ಲೋಕ ಹಿತಾರ್ಥವಾಗಿ ಲಕ್ಷ್ಮಣನು ರಾಮನಲ್ಲಿ ತತ್ವಜ್ಞಾನದ ಮಾರ್ಗದ ವಿಚಾರವನ್ನು ತಿಳಿಸಬೇಕೆಂದು ಕೇಳಿ ಕೊಂಡನು.

ನಿನ್ನ ಪೂಜಾರಾಧನೆಯಿಂ ಸಂ। ಪನ್ನ ಮುಕ್ತಿಗೆ ಸಾಧನವು ಮೇ
ಲುನ್ನತದ ಯೋಗಿಗಳು ನಾರದ ವ್ಯಾಸ ಮೊದಲಾದ ॥
ಮುನ್ನ ಕಮಲಜ ಸಹಿತ ಹೊಗಳುವ । ರೆನ್ನ ಬೇಕೆನಗರಿವ ಹಾಗೆ ಕರು
ಣಾರ್ಣವನೆ ರಘುನಾಥ ಪೂಜಾಕ್ರಮವನರುಹೆಂದ ॥ ೬-೩೩ ॥
ವಿಪ್ರನೃಪಮುಖ ವರ್ಣಾಶ್ರಮ । ಕೊಪ್ಪುವದ ಸ್ತ್ರೀಶೂದ್ರರಿಗೆ ತಾ
ತಪ್ಪದುತ್ತಮ ಮುಕುತಿಪಡೆವಡೆ ಸುಲಭವಾಗಿಹುದ ॥
ಸ್ವಲ್ಪವಾದದ ಸಕಲವೇದದ । ಜಲ್ಪದಲಿ ಪೇಳಿದುದ ಸೇವಕ
ನಿಪ್ಪ ನಿಮ್ಮನುಜಂಗೆ ಕರುಣಿಸು ಲೋಕ ಹಿತವಾಗಿ ॥ ೯-೩೩ ॥

ಆಗ ರಾಮ ತನ್ನ ಪೂಜಾಕ್ರಮವನ್ನು ಲಕ್ಷ್ಮಣನಿಗೆ ಸಂಕ್ಷೇಪವಾಗಿ ವಿವರಿಸುತ್ತಾನೆ. ಇಡೀ ಸಂಧಿಯೇ ಪೂಜಾಕ್ರಮದ ವಿವರದಿಂದ ಕೂಡಿದೆ. ಕೊನೆಯಲ್ಲಿ ರಾಮನಲ್ಲಿ ಹೀಗೆ ಬೇಡಿಕೊಳ್ಳಬೇಕು.

ಕರಚರಣ ವಾಕ್ಕರ್ಮ ಕಾಯಕ । ನಿರುತ ದೃಗು ತ್ವಗ್ಘ್ರಾಣ ನಾಸಿಕ
ವರ ರಸನೆ ಗುದಗುಹ್ಯ ವಾಯು ಮನಸ್ಸು ಸಹ ಬುದ್ಧಿ ॥
ಪರಿಪರಿಯಹಂಕಾರ ಚಿತ್ತಾ । ಚರಿತದಪರಾಧವಹಿತಾಹಿತ
ದೆರಡದೆಲ್ಲಾ ಕ್ಷಮಿಸು ಕರುಣಾನಿಧಿಯೆ ರಘುನಾಥ ॥ ೩೪-೩೩ ॥

ಕೊನೆಯಲ್ಲಿ ಹೀಗೆ ಹೇಳುತ್ತಾನೆ.

ಇದಂ ರಹಸ್ಯಂ ಪರಮಂಚ ಪಾವನಂ
ಮಯೈವ ಸಾಕ್ಷಾತ್ ಕಥಿತಂ ಸನಾತನಂ ।
ಪಠತ್ಯಜಸ್ರಂ ಯದಿ ವಾ ಶೃಣೋತಿ ಯಃ
ಸಸರ್ವಪೂಜಾಫಲಭಾಕ್ ನ ಸಂಶಯಃ ॥ ೩೮-೪ ॥

ಇದನ್ನೇ ಕನ್ನಡದಲ್ಲಿ

ಇದು ರಹಸ್ಯದ ಸಾರ ಪಾವನ । ವಿದು ಸನಾತನ ಶಾಸ್ತ್ರ ಸರ್ವಾ
ಭ್ಯುದಯವನು ನಿನಗೆಂಪೆನೆಲೆ ಸುಚರಿತ್ರ ಸೌಮಿತ್ರ ॥
ಯಿದನು ಪಠಿಸಲಜಸ್ರ ಕೇಳಿದ । ಗೊದಗುಗೆನ್ನನು ಪೂಜಿಸಿದ ಫಲ
ಸದರ ತನ್ನಯ ಭಕುತಿ ಮಾಳ್ಪಡೆ ಸರ್ವರಿಂಗೆಂದ ॥ ೪೦_೩೩ ॥

ಸೀತಾವಿಯೋಗದ ದುಃಖದಿಂದ ರಾಮಸಿದ್ದ ಇತ್ತ ಹನುಮಂತ ಸುಖಲೋಲುಪನಾದ ಸುಗ್ರೀವನನ್ನು ಎಚ್ಚರಿಸಿದ ಕೃತಘ್ನನಾಗಬೇಡ ರಾಮ ನಿನ್ನ ಬರವನ್ನೇ ನೋಡುತ್ತಿದ್ದಾನೆ. ಎಚ್ಚತ್ತ ಸುಗ್ರೀವ ವಾನರ ಪಡೆಯನ್ನು ಕರೆಸಲು ದಿಕ್ಕು ದಿಕ್ಕಿಗೆ ತನ್ನ ದೂತರನ್ನು ಅಟ್ಟಿದ.

ಸೀತಾವಿಯೋಗದಿಂದ ದುಃಖಿಸುತ್ತಿದ್ದ ರಾಮ ಸುಗ್ರೀವ ಬಾರದೇ ಇದ್ದು ದನ್ನು ನೋಡಿ ಬಹು ದುಃಖಿತನಾಗಿ ಲಕ್ಷ್ಮಣನೊಡನೆ ಮಾತನಾಡುತ್ತಿದ್ದ ಸೀತೆಯರಸಲು ಬರುತ್ತೇನೆಂದು ಮಾತು ಕೊಟ್ಟವ ಇನ್ನೂ ತನಕ ಬಾರಲಿಲ್ಲ. ಎಲೈ ಲಕ್ಷ್ಮಣನೇ ನೀನೊಮ್ಮೆ ಕಿಷ್ಕಿಂಧೆಗೆ ಹೋಗಿ ಸಂಗತಿಯೇನೆಂದು ವಿಚಾರಿಸು ಎಂದು ಲಕ್ಷ್ಮಣನನ್ನು ಕಿಷ್ಕಿಂಧೆಗೆ ಕಳುಹಿಸಿದನು.

ಅಂತೆಯೇ ಲಕ್ಷ್ಮಣ ವೀರಾವೇಶದಿಂದ ಧನುರ್ಬಾಣಗಳನ್ನು ತೊಟ್ಟು ಸಿಟ್ಟಿನಿಂದ ಹೊರಟ. ಇಲ್ಲಿ ಪರಮಾತ್ಮನಾದ ರಾಮನ ದುಃಖದ ವಿವರಣೆ ಬರುತ್ತದೆ. ರಾಮ ಹುಲುಮನುಜರಂತೆ ನಟಿಸುವ ಪರಿಯನ್ನು ತಿಳಿಸುತ್ತಾನೆ.

ಲಕ್ಷ್ಮಣ ಕಿಷ್ಕಿಂಧೆಗೆ ಬಂದು ಗರ್ಜಿಸಲು ಅಂಗದ ಬೇಗನೇ ಓಡಿ ಬಂದು ಲಕ್ಷ್ಮಣನ ಕಾಲಿಗೆ ಬಿದ್ದು ಬೇಡಿಕೊಂಡ ಕೂಡಲೇ ಸುಗ್ರೀವನಿಗೆ ಕೋಪದಿಂದ ಬಂದ ಲಕ್ಷ್ಮಣನ ಬರವನ್ನುರುಹಿದ ಸುಗ್ರೀವ ಲಕ್ಷ್ಮಣನ ಸಮಾಧಾನಕ್ಕಾಗಿ ಹನುಮನನ್ನು ಕಳುಹಿದ ಹನುಮ ಬಂದು ಲಕ್ಷ್ಮಣ. ನನ್ನು ಸಂತೈಸುತ್ತ ಹೇಳಿದ ಎಷ್ಟೆಂದರೂ ನಾವು ಕಪಿಗಳಲ್ಲವೇ ? ಆದ್ದರಿಂದ

ಶಂಕಿಸುತ ನಿಲಲೇಕೆ ಜೀಗೊಳ । ಯಿಂಕೆ ಚಿತ್ತೈಸುವುದು ಕಪಿಗಳು
ಮಂಕುಗಳಲೇ ನಾವು ಬಲ್ಲೆವೆ ನೀತಿಗೀತಿಗಳ ।।
ಕಿಂಕರನು ಸುಗ್ರೀವನಾತನ । ಪಂಕಜಾಕ್ಷಿಯರನು ಸಹಿತ ಕಂ
ಡಂಕಿಸಿದ ಕಾರ್ಯವನು ಬಳಿಕಾವಾಚರಿಪೆವೆಂದ ॥ ೨೭–೩೪ ॥

ನಂತರ ಲಕ್ಷ್ಮಣ ಕಿಷ್ಕಿಂಧಾ ಪಟ್ಟಣದ ಸೊಬಗನ್ನು ನೋಡುತ್ತ ಒಳಸೇರಿದ ಇಲ್ಲಿ ಪುರದ ವರ್ಣನೆ ತಕ್ಕಮಟ್ಟಿಗೆ ಬಂದಿದೆ. ಒಳಬಂದ

ಲಕ್ಷ್ಮಣನನ್ನು ತಾರೆ ಇದಿರುಗೊಂಡು ಸುಗ್ರೀವ ತಾವು ನಡೆಸಿದ ಕಾರ್ಯ ಕಜ್ಜಗಳನ್ನು ವಿವರಿಸುತ್ತಾಳೆ. ಕಪಿಗಳ ಸಮೂಹ ನಾನಾ ದಿಕ್ಕಿನಿಂದ ಬಂದ ವಿವರ ತಿಳಿಸುತ್ತಾಳೆ. ಮುಂದಿನ ಕಾರ್ಯಕ್ಕಾಗಿಯೇ ಕಪಿಗಳು [illegible] ನಿನ್ನ ಅಪ್ಪಣೆಯನ್ನು ಎದುರು ನೋಡುತ್ತಿದ್ದಾರೆ ಎಂದು ಹೇಳಿ [illegible] ಸಮಾಧಾನಪಡಿಸಿ ಸುಗ್ರೀವನ ಬಳಿ ಕರೆಕೊಂಡು ಹೋಗುತ್ತಾಳೆ. [illegible] ರಾಮನ ಗುಣಗಾನದ ವರ್ಣನೆ ಮತ್ತೆ ಬರುತ್ತದೆ [illegible] ಸನ್ಮಾನಿಸಿ ಸುಗ್ರೀವ ತನ್ನ ಕಪಿಸೇನೆಯೊಡನೆ [illegible] ಬಳಿಗೆ ಬರುತ್ತಾನೆ. ಸುಪ್ರಭಾಂಜಯನಾದ ಶ್ರೀ ರಾಮನನ್ನು ಸುಗ್ರೀವ ಲಕ್ಷ್ಮಣರು ಕಾಣುತ್ತಾರೆ

ಬಂದಂಥ ಸುಗ್ರೀವನನ್ನು ಶ್ರೀ ರಾಮನು ಆಲಿಂಗಿಸಿ ಕುಶಲ ಸಮಾಚಾರವನ್ನು ವಿಚಾರಿಸುತ್ತಾನೆ ನಂತರ ಸುಗ್ರೀವನು ಬಂದ ಕಪಿಸೇನೆಯನ್ನು ರಾಮನಿಗೆ ತೋರಿಸಿ ಇವರೆಲ್ಲ ನಿನ್ನ ಆಜ್ಞೆಗೆ ಕಾಯುತ್ತಿದ್ದಾರೆ. ಈತ ಹನುಮ, ಈತ ಜಾಂಬವ ಕರಡಿಗಳೊಡೆಯ ಈತ ಶಿಲ್ಪಿಯಾದ ನಳ, ಈತ ಕದನದಲಿ ನೀಲ, ಶರಭ, ಗಂಧಮಾದನ ಮೈಂದ, ದ್ವಿವಿದ. [illegible] ಇವರೆಲ್ಲರೂ ಬಲಶಾಲಿಗಳು. ವೀರ್ಯಸಂಪನ್ನರು ಅಪ್ಪಣೆಯ ಆಜ್ಞೆ [illegible] ಎಂಬುದನ್ನು ಹೇಳು

ಬೆಸಸು ಬೇಗದಿ ರಾಮ ನಿನ್ನಯ । ವಶವಳಿಹರು [illegible] ಹರ್ಷ
ಪ್ರಸರ ನೇತ್ರದಲಪ್ಪಿದನು ಸುಗ್ರೀವನನು ಬಳಿಕ ॥
ವ್ಯಸನವೆಲ್ಲವ ನೀನರಿದೆ ತಾ । ನುಸುರಲೇತಕೆ ಮುಕ್ತ [illegible]
ವಸುಧೆಸುತೆಯರಸಲಿಕೆ ಕಳುಹುವುದೆಂದನಾ ರಾಮ ॥ [illegible] ॥

ಇದನ್ನೇ ಸಂಸ್ಕೃತದಲ್ಲಿ

ರಾಮಃ ಸುಗ್ರೀವಮಾಲಿಂಗ್ಯ ಹರ್ಷಪೂರ್ಣಾಶ್ರುಲೋಚನಃ ।
ಪ್ರಾಹ ಸುಗ್ರೀವ ಜಾನಾಸಿ ಸರ್ವಂ ತ್ವಂ ಕಾರ್ಯಗೌರವಂ ॥ [illegible] ॥
ಮಾರ್ಗಮಾಣಾರ್ಥಂ ಜಾನಕ್ಯಾಂ ನಿಯುಂಕ್ಷ್ವ ಯದಿ ರೋಚತೇ ।

ರಾಮನ ಮಾತಿನಂತೆ ಕಪಿಮುಖ್ಯರನ್ನು ಕರೆದು ದಿಕ್ಕುದಿಕ್ಕಿಗೆ ಕಳುಹಿಸುತ್ತಾನೆ. ದಕ್ಷಿಣದಿಕ್ಕಿಗೆ ಬಲಾಢ್ಯರಾದ ಅಂಗದ, [illegible], ಮೊದಲಾದವರನ್ನು ಕಳುಹಿಸುವ ವ್ಯವಸ್ಥೆಯಾಗುತ್ತದೆ ಎಲ್ಲರಿಗೂ ಒಂದು ತಿಂಗಳಲ್ಲಿ ಸೀತೆಯನ್ನರಸಿ ಬರಲು ಕಟ್ಟಪ್ಪಣೆ ರಾಮ ತನ್ನ ಹೆಸರುಳ್ಳ

ಉಂಗುರವನ್ನು ಹನುಮನ ಕೈಯಲ್ಲಿ ಸೀತೆಗೆ ಕುರುಹು ತೋರಿಸಲು ನೀಡುತ್ತಾನೆ ವಿಂಧ್ಯದಲ್ಲಿ ಕಂಡ ಒಬ್ಬ ರಾಕ್ಷಸನನ್ನು ಅತನೇ ರಾವಣನೆಂದು ತಿಳಿದು ಕಪಿಗಳೆಲ್ಲ ಕೂಡಿ ಅವನನ್ನು ಕೊಂದರು.

ಅವರೆಲ್ಲ ಹುಡುಕಿದ ಸ್ಥಳದ ವಿವರ

ಮುಷ್ಟಿ ಹತಿಯಲಿ ಕೊಂದುಬಿಟ್ಟವು । ದುಷ್ಟ ರಾವಣನಲ್ಲ ನುತ್ತವೆ
ಬೆಟ್ಟ ಗಿರಿ ಗುಹೆ ಜಾಹು ಜರಿಗೊರೆ ಶಾಂಕು ಮರ ಮಾರ್ಗಳ ।
ಗಟ್ಟ ಬೇಣವನಿರುಬು ಸಿರಿಬಿನು । ಕಷ್ಟ ಕಂಟಕ ಲೋಷ್ಟ ತಾಲಂಕ
ದಿಟ್ಟಿ ಜೆಂಯಲತಿ ಚಿತ್ತ ಬಿಡಿರೆಂದೆನ್ನದರಸಿದವು ॥ ೧೪—೩೫ ॥

ಅವರು ಸೀತೆಯನ್ನು ಹುಡುಕಿ ಹುಡುಕಿ ನಿತ್ರಾಣರಾದರೂ ಎಲ್ಲಿಯೂ ಸೀತೆಯ ಸುಳಿವಿಲ್ಲ. ಕಂಗೆಟ್ಟು ಬಾಯಾರಿದರು. ನೀರಡಿಕೆಯನ್ನು ದೂರ ಮಾಡಿಕೊಳ್ಳಲು ಜಲಾಶಯವೆಲ್ಲಿಯೂ ಕಾಣಲಿಲ್ಲ ಆದರೆ ಒಂದು ಗುಹೆಯಿಂದ ಕ್ರೌಂಚ ಹಂಸೆಗಳು ಬರುವದನ್ನು ಕಂಡು ಅಲ್ಲಿ ಜಲವಿಹುದು ಎಂದು ಊಹಿಸಿ ಆ ಗುಹೆಯ ಒಳಹೊಕ್ಕರು ಅಲ್ಲಿ

ಮುಂದೆ ಕಂಡರು ಜಲದ ಸುಸ್ಪಟಿ । ಕೆಂದ್ರ ನೀಲಾಮಲದ ದಿವ್ಯದಲಿ
ಚಂದ್ರ ಕಲ್ಪದ್ರುಮದ ಸ್ತೋಲಿರೆ ವೃಕ್ಷನಿಕರಗಳು ॥
ಪೊಂದು ಪೂಂದೂ ದೆಸ್ರೀಣಿ ಸಮ್ಮತ । ದಿವ್ಯ ಮಧುರದ ಪಕ್ವ ಫಲದಾ
ನಂದದಾವಳಿಗಳು ಜಂಬೀರಾದಿ ಫಲಗಳಲಿ ॥ ೨೧—೩೫ ॥

ಇರಲು ಗುಹೆಗಳಲ್ಲಿ ಮಣಿಗಳು । ಪರಿಪರಿಯ ಭೂಷಣ ಸುವಸ್ತ್ರವು
ಪರಮ ಪಾಯಸ ಭಕ್ಷ ಲಡ್ಡು ಕಪೂಪ ಸಿದ್ಧಲಿಗೆ ॥
ಪರಮ ದಿವ್ಯಾನ್ನಗಳು ಸಹಿತವೆ । ಹಿರಿಯ ಕಜ್ಜಾಯಗಳ ರಾಶಿಯು
ಹೊರೆಯಲಾರೂ ಇಲ್ಲ ನರರದರೊಳಗೆ ವರ್ಜಿತವು ॥ ೨೭—೩೫ ॥

ಮುಂದೆ ಧ್ಯಾನಸ್ಥಳಾದ ಯೋಗಿನಿಯೊಬ್ಬಳನ್ನು ಕಂಡರು ಆಕೆಯ ಹೇಳಿಕೆಯಂತೆ ವಾನರರು ತಮ್ಮ ವೃತ್ತಾಂತವನ್ನು ಹೇಳಿದರು. ಬಳಲಿ ಬಂದ ನೀವು ಇಲ್ಲಿಯ ಫಲಪಕ್ವಾನ್ನ ತಿಂದು ನಿಮ್ಮ ಬಾಯಾರಿಕೆಯನ್ನು ತೀರಿಸಿಕೊಳ್ಳಿರಿ. ನಂತರ ನನ್ನ ವೃತ್ತಾಂತವನ್ನು ಹೇಳುವೆನು ಎಂದಳು ಬಾಯಾರಿಕೆ ತೀರಿಸಿ ಬಂದ ಅವರೊಡನೆ ತನ್ನ ವೃತ್ತಾಂತವನ್ನು ಈ ರೀತಿ ಹೇಳಿದಳು–

ವಿಶ್ವಕರ್ಮನ ಮಗಳಾದ ಹೇಮೆಯೆಂಬವಳ ಸಖಿ ನಾನು ಆಕೆ ದೇಹ ಬಿಡುವಾಗ ನನ್ನ ಹತ್ತಿರ ಹೇಳಿದ್ದೇನೆಂದರೆ–ನೀನು ಇಲ್ಲಿಯೇ ಇರು.

ತ್ರೇತಾಯುಗದಲ್ಲಿ ರಾಮನ ಕಪಿಪಡೆ ಇಲ್ಲಿಗೆ ಬರುವದು. ಅವರನ್ನು ಸತ್ಕರಿಸಿ ರಾಮನ ಬಳಿ ಸೇರು ಆಗ ನಿನಗೆ ಒಳ್ಳೆಯದಾಗುತ್ತದೆ ಇನ್ನು ನಾನು ರಾಮನ ಬಳಿ ಹೋಗುತ್ತೇನೆ ನೀವೆಲ್ಲ ಕಣ್ಣುಮುಚ್ಚಿಕೊಳ್ಳಿರಿ. ನಿಮ್ಮನ್ನು ಗುಹೆಯ ಹೊರಗೆ ಬಿಟ್ಟು ನಾನು ರಾಮನ ಬಳಿ ಹೋಗುತ್ತೇನೆ ಅಂತೆಯೇ ಮಾಡಿ ಅವಳು ರಾಮನ ಬಳಿ ಹೋಗುತ್ತಾಳೆ. ನಾನಾ ರೀತಿಯಿಂದ ರಾಮನ ಗುಣಗಾನ ಮಾಡುತ್ತಾಳೆ.

ನಮಿಸುವೆನು ರಘುಕುಲ ಲಲಾಮನಿಗೆ । ನಮಿಸುವೆನು ಶರಚಾಪಧಾರಿಗೆ
ನಮಿಸುವೆನು ಸುಗ್ರೀವ ಸೌಮಿತ್ರಿ ಸಮೇತನಿಗೆ ॥
ನಮಿಸುವೆನು ಸುಜನಾರ್ತಿಹಾರಿಗೆ । ನಮಿಸುವೆನು ಖಳಧೂರ್ತ ವೈರಿಗೆ
ನಮಿಸುವೆನು ಸಂಪೂರ್ಣ ಚೈತನ್ಯಾತ್ಮರೂಪನಿಗೆ ॥ ೪೬–೩೫ ॥

ಹೀಗೆ ಹಲವು ಬಗೆಯಾಗಿ ಸ್ತುತಿಸಿದ ಅವಳಿಗೆ ಶ್ರೀರಾಮನು ತನ್ನ ನಿಜ ಭಕ್ತಿಯನ್ನು ಸಾಯುಜ್ಯವನ್ನು ಕರುಣಿಸಿದ ಅವಳು ರಾಮ ಸಾಲೋಕ್ಯವನ್ನು ಪಡೆದಳು.

ಗುಹೆಯಿಂದ ಹೊರಬಿದ್ದ ಕಪಿಗಳು ಪುನಃ ಸೀತೆಯನ್ನರಸತೊಡಗಿದರು. ಎಲ್ಲೆಲ್ಲಿಯೂ ಸೀತೆ ಕಾಣದಿರಲು ಕಪಿ ಮುಖ್ಯಸ್ಥನಾದ ಅಂಗದ ನಿರ್ವಿಣ್ಣನಾದ ತಿಂಗಳು ಕಳೆದರೂ ಸೀತಾಮಾತೆಯ ಸುಳಿವಿಲ್ಲ. ರಾಜಾಜ್ಞೆಯನ್ನು ನೇರವೇರಿಸಲಾರದಾದೆವು. ಏನು ಮಾಡಲಿ ! ಸುಗ್ರೀವನಾದರೋ

ಘಾತಿಸದೆ ಬಿಡವೆನ್ನ ನಾಳೆನೆ ! ಭ್ರಾತೃ ಪತ್ನಿಯ ಮಾತೃ ಸಮೆಯನು
ಪಾತಕಿಗೆ ದಯವಿಲ್ಲನಾತನ ಕೈಯ್ಯ ಸಾವುದರಿಂ ॥
ಪ್ರೀತನನ ಬಳಿಗೈದದೇ ನಾ । ವೀತರದಲೆಲ್ಲವರು ಸಾವವು
ಯೇ ತೆರದಲಾದರು ಯೆನುತ ಕಣ್ಣೀರ ಸೂಸಿದನು ॥ ೫–೩೬ ॥

ಹೀಗೆ ಕಣ್ಣೀರಿನಿಂದ ಕೂಡಿದ ಅಂಗದನನ್ನು ಕಂಡು ಹನುಮ ಸಂತೈಸಿದ ಮತ್ತು ಹೇಳಿದ.

ವಿಚಾರ್ಯತೇ ಕಿಮರ್ಥಂ ತೇ ದುರ್ವಿಚಾರೋ ನ ಯುಜ್ಯತೇ
ರಾಜ್ಞೋಽತ್ಯಂತ ಪ್ರಿಯಸ್ತ್ವಂ ಹಿ ತಾರಾ ಪುತ್ರೋಽತಿ ವಲ್ಲಭಃ ॥ ೧೧–೭ ॥
ರಾಮಸ್ಯ ಲಕ್ಷ್ಮಣಾತ್ ಪ್ರೀತಿಸ್ತ್ವಯಿ ನಿತ್ಯಂ ಪ್ರವರ್ಧತೇ
ಅತೋ ನ ರಾಘವಾದ್ ಭೀತಿಸ್ತವ ರಾಜ್ಞೋ ವಿಶೇಷತಃ ॥ ೧೧–೭ ॥
ಅಹಂ ತವ ಹಿತೇ ಸಕ್ತೋ ವತ್ಸ ನಾನ್ಯಂ ವಿಚಾರಯ ।

ಗುಹಾವಾಸಶ್ಚ ನಿರ್ಭೀಸ್ಯ ಇತ್ಯುಕ್ತಂ ವಾನರೈಸ್ತು ಯತ್ ||
ತದೇತದ್ರಾಮ ಬಾಣಾನಾಮಭೇದ್ಯಂ ಕಿಂ ಜಗತ್ರಯೇ || ೧೨–೭ ||

ಅದನ್ನೇ ಕನ್ನಡದಲ್ಲಿ

ಅವನು ಕೇಳ್ದು ಹನುಮ ಮೆಲ್ಲನೆ | ನುಡಿದನಿ ತಕ್ಕಿಸಿಂದಂಗದನ ನುಡಿ
ಇದನು ನುಡಿದನು ನಿನಗದೇಕೀ ದುರ್ವಿಚಾರವಿದು ||
ಮೊದಲೆ ಸುಗ್ರೀವಂಗತಿಪ್ರಿಯ | ನವರ ಮೇಲಾ ರಾಮ ಲಕ್ಷ್ಮಣ
ರಿವೆಯು ಜೀವದವೊಲು ಕಂಡಿಹರನುದಿನವು ನಿನ್ನ || ೭–೩೬ ||
ರಾಮಗಾ ಸುಗ್ರೀವಗಿಮ್ಮಡಿ | ಪ್ರೇಮ ನಿನ್ನಲ್ಲುಂಟು ಹತ್ತಿರೆ
ನಾ ನುಡಿದವ ಮಾತುತ್ತಿಹೆನು ಸಂದೇಹ ಬೇಡದಕೆ ||
ಈ ಮಹಿಯ ಗುಹೆಯೊಳಗಿರುವವೆಂ | ದೀ ನುಡಿಯು ವಾನರರು ನುಡಿವರೆ
ರಾಮ ಬಾಣಕಭೇದ್ಯವೆಡೆಯುಂಟೇ ಜಗತ್ರಯದಿ || ೮–೩೬ ||

ಹೀಗೆ ಅನೂಚಾನವಾಗಿ ಸಂಸ್ಕೃತದ ಅನುವಾದವನ್ನು ಕನ್ನಡದಲ್ಲಿ ಸುಲಭ ಭಾಷೆಯಲ್ಲಿ ಮಾಡಿರುತ್ತಾನೆ.

ಹನುಮ ರಾಮನ ಮೂಲಸ್ವರೂಪ ಜ್ಞಾನವನ್ನು ಅಂಗದನಿಗೆ ಮಾಡಿ ಕೊಡುತ್ತಾನೆ ಮತ್ತು ತಾವು ಯಾವ ಕಾರಣಕ್ಕಾಗಿ ಜನ್ಮವೆತ್ತಿದ್ದೇವೆ. ಎಂಬ ಸೂಕ್ಷ್ಮವನ್ನು ತಿಳಿಸುತ್ತಾನೆ. ಇಲ್ಲಿ ಸಂಸಾರದ ಸುಖದುಃಖ ಕಷ್ಟನಷ್ಟ ಮೊದಲಾದವುಗಳ ವಿವರ ನೀಡಿ ಅತನನ್ನು ಸಮಾಧಾನ ಪಡಿಸುತ್ತಾನೆ

ಮುಂದಿರುವ ಸಮುದ್ರವನ್ನು ನೋಡಿ ಕಪಿಗಳು ಸಂಭ್ರಾಂತರಾಗು ತ್ತಾರೆ ರಾಮಪಾದವೇ ಗತಿ ಎಂದು ಕಪಿಗಳು ಕುಳಿತಾಗ ಮಹೇಂದ್ರ ಪರ್ವತದಿಂದ ಒಂದು ಹದ್ದು ಸಾವಕಾಶವಾಗಿ ಇಳಿದು ಬರುತ್ತ ಈ ಹೊತ್ತು ತನಗೆ ಒಳ್ಳೆಯ ಆಹಾರ ಸಿಕ್ಕಿತು ಎಂದು ಸಂತೋಷಪಟ್ಟು ಮುಂದೆ ಬರ ತೊಡಗಿತು. ಕಪಿಗಳು ಚಿಂತಾಕ್ರಾಂತರಾದರು ರಾಮಕಾರ್ಯಕ್ಕಿಲ್ಲದೇ ನಮಗೆ ದುರ್ಮರಣ ಬಂದೊದಗಿತು. ರಾಮಕಾರ್ಯಕ್ಕಾಗಿ ಮಡಿದ ಆ ಜಟಾಯುವೇ ಪುಣ್ಯವಂತ ಎಂದಿತ್ಯಾದಿಯಾಗಿ ಮಾತಾಡಿಕೊಳ್ಳತೊಡ ಗಿದರು ಅದನ್ನು ಕೇಳಿದ ಸಂಪಾತಿಯು ಜಟಾಯುವಿನ ಬಗ್ಗೆ ವಿಚಾರಿಸಿದ ಜಟಾಯುವಿನ ವಿವರ ತಿಳಿದ ಆ ಸಂಪಾತಿ ಹೇಳಿದ- ತಾನು ಅತನ ಅಣ್ಣ. ಅವನ ಸುದ್ದಿ ತಿಳಿಯದೆ ಸಹಸ್ರ ವರ್ಷವಾಯಿತು ಈಗ ಅತನಿಗೆ ಉದಕಾಂ ಜಲಿಯನ್ನು ಕೊಡುವೆ. ಸಮುದ್ರದ ಬಳಿ ನನ್ನನ್ನು ಕರೆದೊಯ್ಯಿರಿ ನಂತರ

ನಂತರ ಸೀತೆಯ ಸುದ್ದಿ ಹೇಳುತ್ತೇನೆ. ಅಂತೆಯೇ ಪಾಪಿಷ್ಠ [illegible] ಸೀತೆ ನೂರು ಯೋಜನ ದೂರದಲ್ಲಿರುವ ಲಂಕೆಯಲ್ಲಿದ್ದಾಳೆ [illegible] ದಲೇ ಲಂಕೆ ಕಾಣುತ್ತಿದೆ ಸೀತೆಯೂ ಕಾಣುತ್ತಿದ್ದಾಳೆ. [illegible] ವನ್ನು ಲಂಘಿಸಿ ಲಂಕೆಯನ್ನು ಕಾಣುವರೋ [illegible] ಸೀತೆಯನ್ನು [illegible] ಬಲ್ಲರು. ನಾನಾದರೋ ನಿಮಿಷಮಾತ್ರದಲ್ಲಿ ಹೋಗಿ ಬರುತ್ತೇನೆ [illegible] ರೆಕ್ಕೆಯೇ ಇಲ್ಲ ಎನ್ನುತ್ತ ತನ್ನ ವೃತ್ತಾಂತವನ್ನೆಲ್ಲ ಹೇಳಿದ [illegible] ಮುನಿಯ ಹೇಳಿಕೆಯಂತೆ ಇಲ್ಲಿಯೇ ಇದ್ದೇನೆ

ಮುಂದಿನ ಅಧ್ಯಾಯದಲ್ಲಿ ಚಂದಮ ಮುನಿಯು [illegible] ದೇಹೋತ್ಪತ್ತಿಯ ವಿಚಾರ ಇತ್ಯಾದಿ ಹೇಳುತ್ತಾನೆ ಪುಣ್ಯ ತೀರದ [illegible] ಈ ಕರ್ಮಭೂಮಿಗೆ ಜೀವಿಯು ಬರುತ್ತಾನೆ [illegible] ಮನುಷ್ಯ ಶರೀರ ಸೇರುತ್ತಾನೆ ನಂತರ ರಕ್ತ ರೇತ [illegible] (ಪುರುಷ ನಾರಿಯೊಂದಿಗೆ ರಮಿಸಲು) ಕಲಲ ರೂಪ ಧರಿಸಿದ [illegible] ಕಾಲಕ್ಕೆ ಶರೀರದ ಬೇರೆ ಬೇರೆ ಅವಯವ ಹೊಂದುವನು. [illegible] ನಂತರ ಯೋನಿ ಮೂಲಕ ಹೊರಬರುವನು. ನಂತರ ಬಾಲ್ಯ, [illegible] ಯುವ್ವನ ಮೊದಲಾದ ಅವಸ್ಥೆಗಳಲ್ಲಿ ಸುಖದುಃಖ, [illegible] ಮೊದಲಾದವುಗಳನ್ನು ಪೂರ್ವಕರ್ಮಾರ್ಜಿತವಾಗಿ ಅನುಭವಿಸುವನು [illegible] ರಿಂದ ಸಂಪಾತಿಯೇ ದುಃಖವನ್ನು ಬಿಡು ರಾಮ [illegible] ಕಪಿವರರು ಇಲ್ಲಿಗೆ ಬರುತ್ತಾರೆ ಅವರಿಗೆ ಸೀತೆಯ ವಿಷಯ ತಿಳಿಸು [illegible] ಪಕ್ಕಗಳು ಪುನಃ ಹುಟ್ಟುವವು ಈಗ ನೋಡಿ ! ನನ್ನ [illegible] ತೊಡಗಿದೆ. ನೀವು ಸಮುದ್ರವನ್ನು ದಾಟಿ ಸೀತೆಯನ್ನು ಕಂಡು [illegible] ಹೇಳಿ ಅವರನ್ನು ಬೀಳ್ಕೊಂಡು ಹಾರಿಹೋದನು. ಇತ್ತ ಕಪಿಗಳು [illegible] ವನ್ನು ಲಂಘಿಸುವ ವಿಚಾರದಲ್ಲಿ ತೊಡಗಿದರು. ಪ್ರತಿಯೊಬ್ಬನೂ [illegible] ಇಂತಿಷ್ಟು ಹಾರುವೆ ಎಂದು ಹೇಳಿದನು. ಅಂಗದ ತಾನು ಹೋಗಿ [illegible] ಎಂದ ಆದರೆ ನೀನು ಹೋಗುವದು ಯೋಗ್ಯವಲ್ಲ ಎಂದು ಜಾಂಬವ [illegible] ನನ್ನು ಸಮಾಧಾನಪಡಿಸಿದ. ನಂತರ ಹನುಮನನ್ನು ತೋರಿಸಿ [illegible] ಸಮುದ್ರ ದಾಟಿ ಬರಲು ಯೋಗ್ಯ ಎಂದು ಉಸುರಿದ ಹನುಮನನ್ನು ಪ್ರೋತ್ಸಾಹಿಸಿದ ಹನುಮ ಅತ್ಯಂತ ಸಂತೋಷದಿಂದ ಆ ಕಾರ್ಯಕ್ಕೆ [illegible]

ಯಾದ ಸೀತೆಯನ್ನು ಕಂಡೇ ಬರುತ್ತೇನೆ ಎಂದು ಆಶ್ವಾಸನೆ ನೀಡಿದ ಎಂಬಲ್ಲಿಗೆ ಕಿಷ್ಕಿಂಧಾಕಾಂಡ ಮುಗಿಯುತ್ತದೆ

ಇನ್ನು ಸುಂದರಕಾಂಡಕ್ಕೆ ಬರೋಣ

ಅಧ್ಯಾತ್ಮ ರಾಮಾಯಣದಲ್ಲಿ ಐದು ಸರ್ಗಗಳಲ್ಲಿ ಬರುವ ಸುಂದರ ಕಾಂಡದ ವಿಷಯವನ್ನು ಕವಿಯು ನಾಲ್ಕು ಸಂಧಿಗಳಲ್ಲಿ ವಿವರಿಸಿದ್ದಾನೆ

ಮೊದಲನೆಯ ಸಂಧಿಯಲ್ಲಿ ಸಮುದ್ರೋಲ್ಲಂಘನ ಸಮುದ್ರ ದಾಟು ವಾಗ ಬಂದ ಎಡರು ತೊಡರುಗಳ ನಿವಾರಣೆಯ ವಿಷಯ ಇತ್ಯಾದಿ ಇದೆ ಕವಿ ಪ್ರಾರಂಭದಲ್ಲಿಯೇ ಹನುಮನನ್ನು ದ್ವಾದಶ ನಾಮಗಳಿಂದ ಸ್ತುತಿಸಿದ್ದಾನೆ

ಹನುಮನಂಜನೆಯಾತ್ಮ ಸಂಭವ । ಘನ ಮಹಾಬಲ ವಾಯುನಂದನ
ಚಿನುಮಯುಜ್ಞ ರಾಮ ಶಿಷ್ಯನು ಫಲುಗುಣನ ಸಖನು ।
ವಿನಯ ಪಿಂಗಲನಮಿತ ವಿಕ್ರಮ । ವನಧಿಯುತ್ತರಿಸಿ ಸೀತಾಶೋಕಹ
ವಿನಯ ಲಕ್ಷ್ಮಣ ಪ್ರಾಣದಾತ ದಶಾಸ್ಯ ದರ್ಪಘ್ನ ॥ ೨ ೩೮ ॥

ಈ ಪದಕ್ಕೆ ಸಂವಾದಿಯಾದ ಶ್ಲೋಕ ಸಂಸ್ಕೃತದ ಅಧ್ಯಾತ್ಮ ರಾಮಾ ಯಣದಲ್ಲಿ ಇಲ್ಲ.

ಹನುಮ ಆಕಾಶ ಮಾರ್ಗದಲ್ಲಿ ಹೋಗುತ್ತಿರುವಾಗ ಅವನ ಶಕ್ತಿ ಯುಕ್ತಿಯನ್ನು ಪರೀಕ್ಷಿಸಲೋಸುಗ ದೇವತೆಗಳು ನಾಗಮಾತೆಯಾದ ಸುರಸೆ ಯನ್ನು ಕರೆದು ಹನುಮಂತನಿಗೆ ವಿಘ್ನವನ್ನೆಸಗಲು ಹೇಳಿದರು. ಅವಳು ಹನುಮನಿಗೆ ಅಡ್ಡಗಟ್ಟಿ ನೀನು ನನಗೆ ಆಹಾರವಾಗಬೇಕು ಎಂದಳು.

ತೂಗಿನೋಡಳು ಬಂದು ನುಡಿದಳು । ಬಾರದುವ ಹನುಮಂತ ಹೊಟ್ಟೆಗೆ
ಹೋಗು ಕೊಟ್ಟಿರು ದಿವಿಜರೆನಗಾಹಾರವನು ನಿನ್ನ ॥ ೧೦-೩೮ ॥

ಆದಕ್ಕೆ ಹನುಮನ ಉತ್ತರ

ಹಸಿವು ಘನವೆನಗೆಂದಡೆಂಬನು । ವಸುಧೆಸುತೆಯನು ಕಂಡು ರಾಘವ
ಗುಸುರಿ ವಾರ್ತೆಯ ದೂತಕೃತ್ಯವ ಮಾಡಿ ನಾ ಮರಳಿ ॥
ಬಸುರ ಹೊಗುವೆನು ತಾಯೆ ನಿನ್ನ । ಗಸಡ ಮಾರ್ಗವನೆನಗೆ ಕೊಡು ಬೇ
ಗುಸುರಬೇಡಾ ಸುರಸೆ ನಮೊ ನಮೊಯೆಂದನಾ ಹನುಮ ॥ ೧೧-೩೮ ॥

ಆದಕ್ಕೆ ಅವಳು ಒಪ್ಪುವದಿಲ್ಲ ಬಾಯಿತೆರೆದೇ ಬಿಟ್ಟಳು ಹನುಮ ಬೆಳೆದ. ಆಕೆ ಮತ್ತೂ ದೊಡ್ಡದಾಗಿ ಬಾಯಿ ತೆರೆದಳು. ಹನುಮ ಮತ್ತೂ

ಬೆಳೆದ. ಆಕೆ ಮತ್ತೂ ದೊಡ್ಡದಾಗಿ ಬಾಯಿ ತೆರೆದಳು. ಆಗ ಹನುಮ ಅಂಗುಷ್ಠರೂಪಧರಿಸಿ ಅವಳ ಬಾಯಿ ಪ್ರವೇಶಿಸಿ ಹೊರಬಂದ. ನಿನ್ನ ಮಾತಿನಂತೆಯೇ ನಿನ್ನ ಬಾಯಿ ಪ್ರವೇಶಿಸಿ ಬಂದೆ ಕಾರಣ ನನಗೆ ಮುಂದೆ ಹೋಗಗೊಡು ಅವಳು ನಿನಗೆ ಮಂಗಳವಾಗಲಿ ಎಂದು ಆಶೀರ್ವ ದಿಸಿ ಮುಂದೆ ಕಳುಹಿಸಿಕೊಟ್ಟಳು ನಂತರ ಸಮುದ್ರರಾಜನ ಮೈನಾಕ ಪರ್ವತದಿಂದ ವಿಶ್ರಾಂತಿಗಾಗಿ ಆಮಂತ್ರಣ ಹನುಮ ಶಿಖರವನ್ನು ಹಸ್ತದಿಂದ ಸ್ಪರ್ಶಿಸಿ ತಾನು ಕಾರ್ಯ ಮುಗಿಸಿದ ನಂತರ ಬರುವ ಆಶ್ವಾಸನೆಯನ್ನು ಕೊಟ್ಟು ಮುಂದೆ ತೆರಳಿದ. ನಂತರ ಹನುಮನಿಗೆ ಛಾಯಾಗ್ರಾಹಿಯಾದ ಸಿಂಹಿಕೆಯು ಹಿಡಿತ. ವೇಗ ಕುಗ್ಗಲು ಕಾರಣವನ್ನರಸುತ್ತ ಕೆಳಕ್ಕೆ ಛಾಯಾಗ್ರಾಹಿಯಾದ ಸಿಂಹಿಕೆಯನ್ನು ನೋಡಿದ ಆಕೆಯನ್ನು ಕೊಂದು ಮುಂದುವರಿದ

ಸ ಸಂ ವಿಚಿಂತ್ಯ ಹನುಮಾನಥೋ ದೃಷ್ಟಿಂ ಪ್ರಸಾರಯತ್
ತತ್ರ ದೃಷ್ಟ್ವಾ ಮಹಾಕಾಯಾಂ ಸಿಂಹಿಕಾಂ ಘೋರರೂಪಿಣೀಂ ॥
ಪಪಾತ ಸಲಿಲೇ ತೂರ್ಣಂ ಪದ್ಭ್ಯಾಮೇವಾಹನದ್ ರುಷಾ
ಪುನರುತ್ಪ್ಲುತ್ಯ ಹನುಮಾನ್ ದಕ್ಷಿಣಾಭಿಮುಖೋ ಯಯೌ ॥ [illegible]

ಅದೇ ಕನ್ನಡದಲ್ಲಿ

ಆರು ತಡೆದರು ತನ್ನ ವೇಗದ । ದಾರಿಗಟ್ಟಿದರೆನುತ ನೋಡುತ
ನೀರ ಮಾರುತಿ ಸುತ್ತ ಕಾಣದೆ ಕೆಳಗೆ ನೋಡುತಿರೆ ॥
ಘೋರ ಕಾಯದ ಸಿಂಹಿಕೆಯು ವಿ । ಕಾರ ರೂಪದ ಕಂಡು ಧುಮುಕಿ
ವೀರ ಅವಳನು ಮೆಟ್ಟಿಕೊಂದುಪ್ಪರಿಸಿದನು ಮೇಲೆ ॥ ೨೦-೩೮ ॥

ವೇಗದಿಂದ ಹೊರಟು ಲಂಕಾಪಟ್ಟಣ ಸೇರಿದ ಇಲ್ಲಿ ತ್ರಿಕೂಟ ಪರ್ವತದ ಕೋಟೆಯ ವರ್ಣನೆ

ಸುತ್ತಲೂ ಪ್ರಾಕಾರ ಪರಿಕೆಯು । ಚತ್ತಳದ ಮೇಗೋಟೆ ತೆನೆಗಳ
ಕೊತ್ತಳದ ಕಾಹುಗಳಮಂಕದ ರೆಂಕೆ ಡೆಂಕೆಯುದ ॥
ಮತ್ತೆ ವಜ್ರಕವಾಟವಿೂಟಿನ । ಹತ್ತು ದೋಣಿಯು ತಾಳವಿಂಡಿಗೆ
ಯತ್ತ ನೋಡಲು ಹೇಮಮಯದಟ್ಟಾಲ ಗೋಪುರವು ॥ ೨೨-೩೮

ರಾತ್ರಿಯ ಕಾಲದಲ್ಲಿ ಸೂಕ್ಷ್ಮರೂಪಿನಿಂದ ಲಂಕೆಯ ಒಳ ಪ್ರವೇಶಿಸ ಬೇಕು ಎಂದು ಆಲೋಚಿಸಿ, ರಾತ್ರಿಯಾದ ಕೂಡಲೇ ಒಳ ಪ್ರವೇಶ ಮಾಡಲು ಹೊರಟ. ಆಗ ಆ ಪುರದ ರಕ್ಷಿಣಿಯಾದ ಲಂಕಿಣಿಯು ಬಾಗಿ

ಲಲ್ಲಿ ತಡೆದಳು ಹನುಮನಿಗೆ ಹೊಡೆದಳು ಹನುಮನೂ ಆಕೆಗೆ ಗುದ್ದಿದ. ಆಕೆ ಆ ಏಟನ್ನು ತಾಳಲಾರದೇ ಕೆಳಕ್ಕೆ ಬಿದ್ದಳು. ಹೇಳಿದ್ದು ಹೀಗೆ ನುಡಿದಳು-ವಿಷ್ಣುವೇ ರಾವಣನನ್ನೂ ಕೊಲ್ಲಲು ರಾಮನಾಗಿ ಹುಟ್ಟಿಬರುವ. ರಾವಣನಿಂದ ಸೀತಾಪಹರಣವಾದಾಗ ಒಂದು ಕಪಿ ಸೀತೆಯನ್ನರಸಲು ಲಂಕೆಗೆ ಬರುವದು ಆ ಕಪಿಯಿಂದ ನೀನು ಸೋಲಿಸಲ್ಪಡುವಿ ಆಗ ರಾವಣನಿಗೆ ಮರಣ ಸಮೀಪಿಸಿದೆ. ಎಂದು ತಿಳಿ. ಅಂತೆಯೇ ಈಗ ನಡೆಯಿತು ನೀನು ಲಂಕೆಯನ್ನು ಗೆದ್ದೆ. ನೀನು ಒಳಗೆ ಹೋಗು. ಉದ್ಯಾನವನದಲ್ಲಿ ರಾಕ್ಷಸಿಯರಿಂದ ಪರಿವೃತಳಾದ ಸೀತೆಯಿದ್ದಾಳೆ. ರಾಮನನ್ನು ಸದಾ ನೆನೆಯುತ್ತಿದ್ದಾಳೆ.

ನನ್ನ ಪೂರ್ವಪುಣ್ಯದ ವಿಶೇಷದಿಂದ ರಾಮನ ನೆನಪು ಬಂತು ಆ ರಾಮನ ವರ್ಣನೆಯನ್ನು ಏನೆಂದು ಮಾಡಲಿ ! ರಾಮನೇ ನನ್ನ ಪರದೈವ ಎಂದು ರಾಮನನ್ನು ನೆನೆದಳು. ಇತ್ತ ಸೀತೆಯ ಹಾಗೂ ರಾವಣನ ಶರೀರದ ಎಡಭಾಗ ಅದುರಿದವು ಹಾಗೂ ಅತ್ತ ರಾಮನ ಬಲಭಾಗ ಅದುರಿ ಸಂತೋಷವನ್ನುಂಟು ಮಾಡಿತು

ಹನುಮ ಲಂಕಾ ಪಟ್ಟಣದ ಒಳಸೇರಿ ಎಲ್ಲೆಲ್ಲೂ ಸೀತೆಯರಸಿದ. ಸೀತೆಯನ್ನು ಕಾಣದೆ ರಾವಣನ ಅರಮನೆಯನ್ನು ಪ್ರವೇಶಿಸಿದ ಅಲ್ಲೂ ಕಾಣದೆ ಲಂಕಿಣಿ ಹೇಳಿದ ಕುರುಹಿನ ಪ್ರಕಾರ ಅಶೋಕಾವನಕ್ಕೆ ಹಾರಿದ ಅಲ್ಲಿ ಸೀತೆಯನ್ನು ಕಂಡ.

ದಾನವೀಯರ ಮಧ್ಯದಲಿ ಕಂಡ । ದೀನೆಯಾಗಿರಲೇಕವೇಣಿಯ
ಸಾನನದಲಿಳಿವಶ್ರು ಜಲ ಮಲಿನಾಂಬರಂಗಳಲಿ ॥
ಜ್ಞಾನದೇವತೆಯಂತೆ ಸೊಗಸಿಪ । ತಾನತಪ್ರಿಯ ರಾಮ ರಾಮಾ
ಮಾನಿನೀ ಬಗೆದೊರೆದಲಾಯೆನುತೊರಲುತಿರೆ ಕಂಡ ॥ ೪೧-೩೮ ॥

ರಾಮ ಕಾರ್ಯವನ್ನು ನಾನು ಸಾಧಿಸಿದೆ ಎಂದು ಹನುಮನಿಗೆ ಸಂತಸ ಅಷ್ಟರಲ್ಲಿ ಕಿಲಕಿಲಾರವ ಕೇಳಿಸಿತು ಅದೇನೆಂದು ನೋಡಲು ರಾವಣ ತನ್ನ ಸತಿಯರೊಡನೆ ಬರುವದನ್ನು ಕಂಡ ಇತ್ತ ರಾವಣನ ಮನದ ಚಿಂತೆ

ಸೀತೆಯನು ತಂದೆಸುದಿನವಾಯ್ತು । ಶೇತಕಿನ್ನೂ ಬಾರ ರಾಮನು
ಘಾತಿಸಲು ತನ್ನವನು ಪ್ರೇಷ್ಣಿಸಿದೀನ ನಾನೆಂದ ॥ ೪೪-೩೮ ॥

ಹೀಗೆ ಯೋಚಿಸುತ್ತಾ ಇರುವ ರಾವಣನು ಸ್ವಪ್ನದಲ್ಲಿ ಸೀತೆಯ[illegible] ಣಿಗೆ ಬಂದ ಕಪಿಯನ್ನು ಕಂಡ ಸೀತೆ ಕಾಳಿತ ವೃಕ್ಷದಲ್ಲಿರುವವನ್ನು ನೋಡಿ[illegible] ಸೀತೆ ಮತ್ತಷ್ಟು ದುಃಖಿಸುವಂತೆ ಮಾಡುವೆ. [illegible] ಅವನ್ನು [illegible] ರಾಮನಿಗೆ ಹೋಗಿ ಹೇಳಲಿ. ರಾಮ ಬೇಗ ಬರಲಿ ಎಂದು [illegible] ಅಶೋಕಾವನಕ್ಕೆ ಬಂದ ರಾಕ್ಷಸಿಯರಿಗೆ ಸೀತೆಯು ತನ್ನನ್ನು ವರಿಸ[illegible] ಮಾಡಲು ಆಜ್ಞಾಪಿಸಿದ.

ಸೀತೆಯೂ ಕೂಡ ಎದುರಿಗೆ ಒಂದು ತೃಣವನ್ನಿಟ್ಟು[illegible] ರಾವಣನೊಂದಿಗೆ ಮಾತಾಡಿದಳು-ನಾಯಿಯು ಯಜ್ಞದ [illegible] ತುಡುಕುವಂತೆ ನೀನು ನನ್ನನ್ನು ತಂದುಬಿಟ್ಟೆ ನಿನ್ನ ಅವಸ್ಥೆ ಈ [illegible] ಆಗುವದು.

ಕೊಂಡ ನೀ ರಾಘವಗೆ ಗಮ್ಯವೇ । ಕಂಡು [illegible]
ದಿಂಡುಗೆಡಹನೆ ನಿನ್ನ ಶರಧಿಯ ಕಟ್ಟಿ ಶರದಿಂದ ॥
ಚಂಡ ಲಕ್ಷ್ಮಣ ಸಹಿತ ನಿನ್ನನು । ಖಂಡಿಸುವ ಬಲು [illegible]
ಕೊಂಡು [illegible] ಬಿಡಿಸಿ ನನ್ನಿಯ ಸೆರೆಯ ನಿಜ ಪುರಕೆ ॥ [illegible]

ಸೀತೆಯ ಪರುಷ ವಾಕ್ಯ ಕೇಳಿ ಆಕೆಯನ್ನು ಹೊಡೆಯಲು [illegible] ವನು ಮಂಡೋದರಿ ತಡೆಯುವಳು. ರಾಕ್ಷಸಿಯರಿಗೆ ಸೀತೆ ತನ್ನ [illegible] ವಂತೆ ಮಾಡಲು ಹೇಳಿ ರಾವಣ ಹೋಗುವನು. ರಾಕ್ಷಸಿಯರು ಸೀತೆಗೆ ಭತ್ಸ್ರ್ನೆ ಮಾಡುವರು ಆಷ್ಟರಲ್ಲಿ ತ್ರಿಜಟೆಯು ತಾನು ಸ್ವಪ್ನದಲ್ಲಿ [illegible] ವಿಷಯವನ್ನು ಹೇಳುವಳು ರಾಮ ರಾವಣನನ್ನು ಕೊಂದು ಸೀತೆಯನ್ನು ಸೆರೆ ಬಿಡಿಸಿಕೊಂಡು ಹೋಗುವನು. ರಾವಣನನ್ನು ಕೊಂದು ಸೀತೆಯನ್ನು ಸೆರೆ ಬಿಡಿಸಿಕೊಂಡು ಹೋಗುವನು. ರಾವಣ ಕತ್ತಲೆಯ ಮೇಲೆ [illegible] ಕೊಂಡು ತೆಂಕಮುಖನಾಗಿ ಸಕಲ ರಾಕ್ಷಸರ ಸಹಿತ ಹೋಗುವನು [illegible] ತ್ಯಾದಿಯಾಗಿ ಹೇಳಲು ರಾಕ್ಷಸಿಯರು ಹೆದರಿ ಕಂಗೆಟ್ಟರು.

ಮರದ ಮೇಲಿದ್ದ ಹನುಮನು ರಾಮಚರಿತ್ರೆಯನ್ನು ಸುಶ್ರಾವ್ಯ[illegible] ಕೇಳುವಂತೆ ಹೇಳುವನು. ಸಂಪಾತಿ ಹೇಳಿದಂತೆ ಈ ಉದಧಿಯನ್ನು ದಾಟಿ ಲಂಕೆಗೆ ಬಂದು ಸೀತಾಮಾತೆಯನ್ನು ಕಂಡೆ. ಎಂದು ಹೇಳಿ [illegible] ನಾಗುವನು. ಕರ್ಣಾನಂದಕರವಾದ ಈ ಮಾತು ಕೇಳಿ ಸೀತೆ ಸಂತೋಷ[illegible] ಯಾಗಿ ಇದನ್ನು ಯಾರು ಹೇಳಿದ್ದರೋ ಅವರು ತನ್ನ ಮುಂದೆ ಬರಬೇಕು

ಎಂದಳು ಹನುಮ ಬಂದು ಸೀತೆಯ ಎದುರಿಗೆ ನಿಂತ ನೀದ ಶಂಕಿತಳಾಗಿ ಸುಮ್ಮನಿರಲು ಹನುಮನೆಂದ.

ದಾಸನಾಶ್ರೀರಾಮಚಂದ್ರಗೆ । ಭಾಸುರದ ಸುಗ್ರೀವ ಸಚಿವನು
ಬೀಸುವಾತನ ಮಗನು ಕಳುಹಿದ ರಾಮನಿಲ್ಲಿಗೆನೆ ॥
ಸಾಶಯಂದಲೆಂದಳು ಕಪಿಯೆ ಕೆ । ಶ್ವಾಸ ನರ ವಾನರರಿಗೆಂತೆನೆ
ವಾಸುದೇವನ ಭೃತ್ಯನೆಂದನು ಸೀತೆಗುತ್ತರವ ॥ ೨೪–೩೯ ॥

ಪೂರ್ವ ಕಥೆಯನ್ನು ಹನುಮ ವಿವರಿಸುತ್ತಾನೆ ಸೀತೆಗೆ ನಂಬುಗೆ ಬರುವಂತೆ ಮಾಡುತ್ತಾನೆ. ನಂತರ ರಾಮ ಮುದ್ರಿಕೆಯನ್ನು ಸೀತೆಗೆ ನೀಡುತ್ತಾನೆ ರಾಮನಾಮಾಂಕಿತ ಮುದ್ರೆಯನ್ನು ಪಡೆದು ಸೀತೆ ಬಹಳ ಹರ್ಷಿಸುತ್ತಾಳೆ ರಾವಣನ ದರ್ಪವನ್ನು ನೀನೇ ನೋಡಿದಿ ಇನ್ನೆರಡು ತಿಂಗಳ ಮಾತ್ರ ನನಗೆ ಅವಕಾಶ ಅಷ್ಟರೊಳಗೆ ನನ್ನನ್ನು ಕರೆದೊಯ್ಯುವಂತೆ ರಾಮನಿಗೆ ಹೇಳು ಎಂದು ಕುರುಹಿಗಾಗಿ ತನ್ನ ಚೂಡಾರತ್ನವನ್ನು ಹನುಮಂತನಿಗೆ ನೀಡುತ್ತಾಳೆ. ಮತ್ತು ಕಾಕಾಸುರನ ವೃತ್ತಾಂತವನ್ನು ಹೇಳುತ್ತಾಳೆ.

ನಾನೇ ರಾಕ್ಷಸರ ಸಂಹಾರ ಮಾಡಿ ನಿನ್ನನ್ನು ಕರೆದೊಯ್ಯುವೆ ಎನ್ನಲು ಸೀತೆ ಸಂಶಯ ವ್ಯಕ್ತಪಡಿಸುತ್ತಾಳೆ. ಆಗ ಹನುಮ ತನ್ನ ರೂಪವನ್ನು ತೋರಿಸಿದ. ಸೀತೆಗೆ ಹರುಷವಾಯ್ತು ನೀನು ಬೇಗನೆ ಹೋಗಿ ರಾಮನಿಗೆ ತಿಳಿಸು. ನಿನಗೆ ಮಾರ್ಗದಲ್ಲಿ ಶುಭವಾಗಲಿ ಎಂದು ಹರಸಿದಳು ನಂತರ ಹನುಮ ಈ ರೀತಿ ಆಲೋಚಿಸಿದ

ಒಡೆಯ ಮಾಳ್ಪುದ ಮಾಡಬಾರದು । ನಡೆಯ ಬಾರದು ಕಾರ್ಯದೋರದೆ
ಜಡಧಿಯನು ದುತ್ತರದ ಪೊಳಲಿಗಳ ದೇಶ ಹೊಕ್ಕಲ್ಲಿ ॥
ನಡೆಯನರಿತವ ಶತ್ರುಗಣದಿ ತಾ । ಕಡುಗಲಿತ್ವವ ತೋರಿ ಕಿಂಚಿತ
ಪಡಿಗ ದಶಗಳನೊಡನೆ ಮಾತಾಡ್ಯದ ಬೇಕೆಂದ ॥ ೪೩–೪೦ ॥

ಈ ರೀತಿ ಆಲೋಚಿಸಿ ಆ ವನವನ್ನು ಹಾಳು ಮಾಡತೊಡಗಿದ ಪ್ರಾಕಾರ ಗೋಪುರಗಳನ್ನೂ ಧ್ವಂಸಗೊಳಿಸಿದ ರಾವಣನಿಗೆ ಸುದ್ದಿ ತಲುಪಿತು. ಕಪಿಯನ್ನು ಹಿಡಿಯಲು ರಾಕ್ಷಸರನ್ನು ಕಳುಹಿದ. ಅವರೆಲ್ಲರೂ ಅಂತಕನ ಮನೆಗೈದಿದರು. ಪಂಚ ಸೇನಾಪತಿಗಳು ಅಕ್ಷಯ ಕುಮಾರ ಮೊದಲಾದವರೆಲ್ಲರೂ ಹತರಾದರು ಕೊನೆಯಲ್ಲಿ ಇಂದ್ರಜಿತುವಿನ ಬ್ರಹ್ಮಾಸ್ತ್ರಕ್ಕೆ ಕಟ್ಟು ಬಿದ್ದು ರಾವಣನ ಆಸ್ಥಾನಕ್ಕೆ ಬಂದ

ಮಂತ್ರಿ ಪ್ರಹಸ್ತನು ನಿನ್ನ ಬರವೇನು ? ನಿನ್ನ [illegible] ? ರಾಕ್ಷಸರನ್ನೆಲ್ಲ ಯಾಕೆ ಕೊಂದೆ ? ನಿನ್ನನ್ನು ಯಾರು [illegible] ತ್ಯಾದಿಯಾಗಿ ಪ್ರಶ್ನಿಸಿದ ಹನುಮ ಉತ್ತರಿಸಿದ

ತಾನು ರಾಮನ ದೂತ ಸೀತೆಯನ್ನರಸಲು ಬಂದ [illegible] ಯನ್ನು ಕಂಡೆ ಕಪಿಚೇಷ್ಟೆಗನುಗುಣವಾಗಿ ಒಂದೆರಡು [illegible] ನನ್ನನ್ನು ಹೊಡೆಯಲು ರಾಕ್ಷಸರು ಬಂದರು ನನ್ನನ್ನು [illegible] ನಾನೂ ಹೊಡೆದೆ ಅವರೆಲ್ಲ ಮರಣ ಹೊಂದಿದರು. ಬ್ರಹ್ಮಾಸ್ತ್ರ [illegible] ಗಾಗಿ ನಾನು ನಿನ್ನಿದ್ದಲ್ಲಿಗೆ ಬಂದೆ ಅಷ್ಟೇ !

ಹನುಮ ರಾವಣನಿಗೆ ಸಾಕಷ್ಟು ಬುದ್ಧಿ ಹೇಳಿದ ಕೊನೆಯಲ್ಲಿ

ಬಿಡು ಮನದ ಮೂರ್ಖತನವ ರಾಮನ । ತೊಡರಿಸಿದಿರೊ [illegible]
ತಡೆಯಂದೇ ಭಜಿಸೈ ಮಹಾಶರಣಾಗತಪ್ರಿಯನ ॥
ಪೊಡವಿಜೆಯು ನೊಲಿದಿತ್ತು ನಿನ್ನಯ । ಮಡದಿ ಮಕ್ಕಳ [illegible]
ತಡಿಗೆರಗಲನು ಕಾವನಾಶ್ರಿತ ಬಂಧು ನಿನ್ನವನು [illegible]

ಹನುಮನ ಮಾತಿಗೆ ಸಿಟ್ಟಿಗೆದ್ದ ರಾವಣನು ಆತನನ್ನು [illegible] ಆಜ್ಞಾಪಿಸುತ್ತಾನೆ. ವಿಭೀಷಣ ಅಣ್ಣನನ್ನು ತಡೆಯುತ್ತಾನೆ [illegible] ಯೋಗ್ಯವಲ್ಲ ಎಂದು ತಿಳಿಸುತ್ತಾನೆ ದೂತನನ್ನು ಕೊಂದರೆ ಈ [illegible] ರಾಮನಿಗೆ ತಿಳಿಸುವವರು. ಯಾರು ? ಜೀವ ಭಂಗಕ್ಕಿಂತ [illegible] ಲೇಸು ಎನ್ನುತ್ತ ಆತನ ಬಾಲವನ್ನು ಸುಟ್ಟು ಕಳುಹುವಂತೆ [illegible] ಆಜ್ಞಾಪಿಸುತ್ತಾನೆ ದೂತರು ಅಂತೆಯೇ ಮಾಡುತ್ತಾರೆ [illegible] ಅಗ್ನಿಯಿಂದ ಯಾವದೇ ರೀತಿ ತೊಂದರೆಯಾಗುವದಿಲ್ಲ. ಆತ [illegible] ತನ್ನ ಬಂಧನವನ್ನೆಲ್ಲ ಕಳಚಿಕೊಂಡು ಬಾಲದ ತುದಿಯ [illegible] ಇದೇ ಲಂಕಾಪಟ್ಟಣವನ್ನೇ ಸುಡುತ್ತಾನೆ ಲಂಕೆ ಸುಡುತ್ತಿ[illegible] ಭಯಂಕರ ದೃಶ್ಯ

ತಾತಹಾಹಾ ತರುಣ ಹಾಹಾ । ಭ್ರಾತ ಹಾಹಾ ಮಗನೆ ಹಾಹಾ
ಮಾತೆ ದಾಹಾ ಕೆಟ್ಟೆ ಕೆಟ್ಟೆವು ಕಿಚ್ಚು ಬಲುಗಿಚ್ಚು ॥
ಮಾತಿಗಗಸರವಿಲ್ಲ ದೊರೆಯೋ । ಸೀತೆಯನು ಖಳತಂದು [illegible]
ಬೂತು ಮಾಡಿದನಕಟಕಟ ಯೆಂದುದು ಖಳವ್ರಾತ [illegible]

ಸುತ್ತ ಕಟ್ಟಿತು ಕಿಚ್ಚು ಮಾರ್ಗವ | ಸುತ್ತಲೋಡಲು ತೆರಪುಗಾಣದೆ
ಸತ್ತಿದರು ಪ್ರಾಸಾದ ಶಿಖರದ ಮೇಲೆ ನಾರಿಯರು ||
ಉತ್ತಮಾಗ್ನಿಯು ದೇವತೆಗಳಿಗೆ | ಮತ್ತೆ ನೋಳ್ಪರ ಕಂಗೆಸೆವರುಂ
ದತ್ತಿ ಹೊಡಕರಿಸಿದುದು ರಾವಣ ಗೃಹದ ಮಧ್ಯದಲಿ || ೪೧–೪೦ ||

ಹೀಗೆ ಲಂಕೆಯನ್ನೆಲ್ಲ-ವಿಭೀಷಣನ ಮನೆಯೊಂದನ್ನು ಬಿಟ್ಟು-ಸುಟ್ಟನು ನಂತರ ಬಾಲವನ್ನು ಸಮುದ್ರದಲ್ಲಿ ಅದ್ದಿ ನಂದಿಸಿ ಸೀತಾಮಾತೆಯ ಬಳಿಗೆ ಬಂದನು ಮತ್ತು ರಾಮನ ಬಳಿ ಹೋಗಲು ಆಕೆಯ ಅಪ್ಪಣೆಯನ್ನು ಬೇಡಿದ ಆತ ಆಕೆಗೆ ಹೇಳಿದ್ದೇನೆಂದರೆ-

ತಡವು ಮಾಡದೆ ಹೋಗಿ ರಾಘವ | ನಡಿಗಳನು ನಾ ಕಂಡು ಬೇಗದಿ
ಪಡೆ ಸಹಿತ ಸುಗ್ರೀವ ಲಕ್ಷ್ಮಣ ರಾಮರೊಡಗೊಂಡು ||
ಒಡೆಯರನು ಕೊಲೆ ಕರೆದು ತಹೆನೆನೆ | ನುಡಿದಳೆತ್ತಿ ಮುಖದಲಿ ತನಗಾ
ಪ್ರಾಣಿಯು ರಾಮನ ವಾರ್ತೆಯರಿಯದದೆಂತು ಜೀವಿಸುತ || ೩–೪೦ ||

ಹನುಮ ಪುನಃ ಗಗನಮಾರ್ಗದಲ್ಲಿ ಮೊದಲಿನಂತೆಯೇ ಹೊರಟ ಹನುಮ ವೇಗವಾಗಿ ಬರುತ್ತಿರುವ ಶಬ್ದ ಕೇಳಿ ಕಪಿಗಳೆಲ್ಲರೂ ಹನುಮ ಸೀತೆಯನ್ನು ಕಂಡು ಬಂದ- ಹರ್ಷಚಿತ್ತರಾದರು. ಹನುಮ ಕಪಿಗಳಿಗೆ ಸಾದ್ಯಂತ ವೃತ್ತಾಂತವರುಹಿ ಲಂಕಾಪಟ್ಟಣವನ್ನು ಸುಟ್ಟ ಪರಿಯನ್ನೂ ವಿವರಿಸಿದ ಇವೆಲ್ಲವನ್ನೂ ನಾವು ರಾಮ ಹಾಗೂ ಸುಗ್ರೀವರಿಗೆ ತಿಳಿಸುವಾ ಎಂದು ಹೇಳುತ್ತ ಎಲ್ಲರೂ ಪುನಃ ಸುಗ್ರೀವನ ಬಳಿ ಹೊರಟರು. ಮಾರ್ಗ ಮಧ್ಯದಲ್ಲಿ ಮಧುವನವನ್ನು ಕಂಡು ಮಧು ಸೇವಿಸುವ ಇಚ್ಛೆ ಅವರಿಗಾಯಿತು. ಅಂಗದನ ಅಪ್ಪಣೆಯಂತೆ ವಾನರರು ಮಧು ಸೇವಿಸಿದರು ವನ ರಕ್ಷಕನಾದ ದಧಿಮುಖನು ಈ ಸಂಗತಿಯನ್ನು ಸುಗ್ರೀವನಿಗೆ ತಿಳಿಸಿದನು. ಸುಗ್ರೀವ ಸಂಪ್ರೀತನಾಗಿ ಹನುಮದಾದ್ಯರನ್ನು ಕೂಡಲೇ ಕಳುಹಿಸುವಂತೆ ಹೇಳಿದ ಅವನ ಮಾತನ್ನು ಕೇಳಿದ ಅಂಗದ ಮೊದಲಾದವರು ಕೂಡಲೇ ಸುಗ್ರೀವನ ಬಳಿ ಹೊರಟರು ಸೀತೆಯನ್ನು ನೋಡಿ ಬಂದ ಸಂಗತಿಯನ್ನರುಹಿದರು. ಹನುಮ ಸಕಲ ವೃತ್ತಾಂತದನ್ನು ನಿವೇದಿಸಿದ, ಸೀತೆಗೆ ಧೈರ್ಯ ಹೇಳಿದ ಸಂಗತಿಯನ್ನೂ ನಿವೇದಿಸಿದ.

ನಿಮ್ಮ ನೆನೆನೆನೆದಳುತ ಹಗಲಿರು | ಳೊಮ್ಮೆಯೂ ನಿಜವಾರ್ತೆಯಿಂದವೆ
ರಮ್ಮ ಕರಗುವ ನಾನು ಹೋಗಿಯು ಹೇಳಲೀ ಸ್ಥಿತಿಯ ||
ಘಮ್ಮನೈತಹೆ ರಾಮನಂಘ್ರಿ | ದಮ್ಮ ಸುಗ್ರೀವಾಂಕ ಲಕ್ಷ್ಮಣ
ರಿಮ್ಮ ಪಡೆ ಸಹಿತ ವಾರ್ತೆಯನು ಕೇಳಿದಾಕ್ಷಣಕೆ || ೩೬–೪೧ ||

ರಾಮನ ಸ್ವರೂಪದ ಗುಣಗಾನವನ್ನು ಮತ್ತೆ ಹನುಮ ಮಾಡುತ್ತಾನೆ ನಂತರ ಸೀತೆಯ ಚೂಡಾರತ್ನವನ್ನು ರಾಮನಿಗೆ ನೀಡುತ್ತಾನೆ ರಾಮನು ಅದನ್ನು ನೋಡಿ ಹರ್ಷಿತನೂ ಮತ್ತು ದುಃಖಿತನೂ ಆಗುತ್ತಾನೆ. ನಂತರ ಹೇಳಿದ ಮಾತು

ತನ್ನ ಸರ್ವಸ್ವಂಗಳೆಲ್ಲವ । ನಿನ್ನವಾಗಿಯೆ ಕೊಟ್ಟೆನೆನುತವೆ
ಸನ್ನುತಸ್ತ್ರೀಯುಬಿಂಘು ಪ್ರೀತರಾಮಿಂಗನಲೊಲಿದು ॥
ಚೆನ್ನಸುವೆ ಬಾ ಲೆಂದುತ ನು । ಪೂರ್ಣ ಪುಳಕಾಶ್ರುಗಳಲಿಪ್ಪಿದ
ಉನ್ನತೋನ್ನತ ಮಹಿಮನಾ ತನ್ನೆರಡು ಕರಗಳಲಿ ॥ ೪೨-೪೩ ॥

ಈ ರೀತಿಯಾಗಿ ಸುಂದರ ಕಾಂಡ ಮುಕ್ತಾಯವಾಗುತ್ತದೆ. ಈ ಮೊದಲೇ ಮೊದಲನೆಯ ಭಾಗದಲ್ಲಿ ತಿಳಿಸಿದಂತೆ ವಾಲ್ಮೀಕಿ ರಾಮಾಯಣ ಕ್ಕಿಂತ ಭಿನ್ನವಾದ ಅಂಶ ಇದರಲ್ಲಿಯೂ ಇದೆ ಇದರಲ್ಲೂ ಕೂಡ ತಾನು ವಿಷ್ಣುವಿನ ಅವತಾರ ಎಂಬುದನ್ನು ಮೊದಲೇ ತಿಳಿಸುತ್ತಾನೆ.

ಅರಣ್ಯ ಕಾಂಡದಲ್ಲಿ ಶೂರ್ಪನಖಿಯು ರಾವಣನಿಗೆ ರಾಮನ ಸಂಗತಿ ಯನ್ನು ತಿಳಿಸಿದಾಗ ರಾವಣ ಹೇಳಿದ್ದೇನೆಂದರೆ-ರಾಮ ಮನುಷ್ಯನಲ್ಲ ಆತ ಸಾಕ್ಷಾತ್ ಪರಮಾತ್ಮ ನಾನು ಅವನಿಂದ ಮರಣಹೊಂದಿದರೆ ಸ್ವರ್ಗವನ್ನು ಪಡೆಯುವೆ ಆತನು ಭಕ್ತಿಗೆ ಬೇಗ ಒಲಿಯುವದಿಲ್ಲ ವಿರೋಧಭಾವದಿಂದಲೇ ಆತನ ಬಳಿ ಸೇರುವೆ ಎಂದು ತಿಳಿಸುವದು ಹೊಸತರದ್ದಾಗಿದೆ. ಅಂತೆಯೇ ರಾಮನು ಸೀತೆಗೆ ರಾವಣ ಬರುವ ವಿಚಾರ ತಿಳಿಸುತ್ತಾನೆ, ನೀನು ಅಗ್ನಿ-ಯಲ್ಲಿ ಅಡಗಿರು. ಮಾಯಾಸೀತೆ ನನ್ನೊಡನಿರಲಿ. ರಾವಣನ ವಧೆಯಾದ ಮೇಲೆ ನೀನು ನನ್ನನ್ನು ಪುನಃ ಸೇರುವೆ ಎಂದಿತ್ಯಾದಿಯಾಗಿ. ಇದು ವಾಲ್ಮೀಕಿ ರಾಮಾಯಣದಲ್ಲಿಲ್ಲದ ವಿಷಯ.

ಹಾಗೆಯೇ ಅರಣ್ಯ ಕಾಂಡದಲ್ಲಿಯೂ ವಾಲಿಯು ಕೆಳಕ್ಕೆ ಬಿದ್ದಾಗ ವಾಲಿ ತಾರೆ ಮೊದಲಾದವರಿಗೆ ಅಧ್ಯಾತ್ಮಿಕ ವಿಷಯದ ಬಗ್ಗೆ ಉಪದೇಶ ಮಾಡುತ್ತಾನೆ. ಕಿಷ್ಕಿಂಧೆಯಲ್ಲಿ ಗುಹೆಯಲ್ಲಿ ವಾಸವಾಗಿರುವಾಗ ಲಕ್ಷ್ಮಣನಿಗೆ ಅಧ್ಯಾತ್ಮಿಕ ವಿಷಯದ ತತ್ತ್ವೋಪದೇಶ ಮಾಡುತ್ತಾನೆ. ರಾಮಪೂಜಾ ವಿಧಾನ ತಿಳಿಸುತ್ತಾನೆ.

ಇನ್ನು ಸುಂದರ ಕಾಂಡದಲ್ಲಿ ಅಧ್ಯಾತ್ಮಿಕ ವಿಚಾರ ಕಡಿಮೆ ಕಥೆ ನಾಗಾಲೋಟದಿಂದ ಸಾಗಿದೆ. ಸಂಕ್ಷಿಪ್ತವಾಗಿದೆ. ಕೆಲವೆಡೆಗಳಲ್ಲಿ-ಹನುಮಂತ

ಅಂಗದನಿಗೆ ರಾಮನ ವಿಚಾರ ತಿಳಿಸುವದು ಲಂಕಿಣಿಯು ರಾಮನ ಬಗ್ಗೆ ತಿಳಿಸುವದು ಇತ್ಯಾದಿ ಮಾತ್ರ ಸ್ವಲ್ಪದರಲ್ಲಿ ತತ್ವದ ವಿವರಣೆ ಇದೆ. ಅಂತೆಯೇ ಇದನ್ನು ವಾಲ್ಮೀಕಿ ರಾಮಾಯಣಕ್ಕಿಂತ ಭಿನ್ನ ರೀತಿಯಲ್ಲಿ ತತ್ವ ವಿಚಾರಗಳಿಗೆ ಮಹತ್ವ ಕೊಟ್ಟು ಹೇಳಲಾಗಿದೆ.

ಕವಿಯು ತನ್ನ ಈ ಕಾವ್ಯದಲ್ಲಿ ಅನೇಕ ಕಡೆಗಳಲ್ಲಿ ಗಾದೆಮಾತು, ಆಡುನುಡಿ ಮೊದಲಾದವುಗಳನ್ನು ಸಾಕಷ್ಟು ಉಪಯೋಗಿಸಿದ್ದಾನೆ ಕಾವ್ಯಕ್ಕೆ ಮೆರುಗು ತಂದಿರುತ್ತಾನೆ. ಉದಾಹರಣೆಗಾಗಿ ಕೆಲವು ಗಾದೆಮಾತುಗಳನ್ನು ಈ ಕೆಳಗೆ ಕೊಡಲಾಗಿದೆ.

1 ಅಶುಚಿಯನು ಮುದನಾಯಿ ಬಯಸುವಪೋಲು
2 ರಾತ್ರಿಯಲಿ ಬೇಕೆಂಬ ಮೊಡವೆಂಬ ನೇತ್ರವಿದ್ದರು ದೀಪವಿಲ್ಲದೆ ನೇತ್ರ ಗೋಚರವಾಗದಂದದಿ
3 ಮುಕ್ಕುನಂದದಿ ಕಲ್ಲಿ ಬೆಣ್ಣೆಯ
4 ವಳ್ಳಿ ಗರುಡನ ಮರಿಯ ತುಡುಕಿತೆ
5 ಅಧ್ವರ ಹವಿಯನು ತುಡುಕಿ ನಾಯಿ ಕೂಡು ತಿಂಬ ಪೋಲ್
6 ಮುಂಡೆ ಬಸುರಾಯ್ತೆಂದು ಮುತ್ತೈದೆಯನು ಬಡಿದಪೊಲು
7 ಹಾವುಗಳ ಹದ್ದೊಯ್ದ ಪರಿಯಲಿ
8 ಗಾಳಿಗೊಡ್ಡಿದ ಸೊಡರಿನಂದದಿ
9 ಮರುಳು ಮಾನವ ಮದ್ದು ಮೆದ್ದಾ ಪರಿಯ
10 ಹೆರೆಯ ಸರ್ಪನು ಬಿದ್ದ ಪರಿ
11 ನಾಯಿ ಬಂದೊಳ ಹೊಕ್ಕು ಹವಿಯನು ತುಡುಕುವಂದದಿ
12 ಕುಂಜರನ ಮೇಲೇರಿ ಬಪ್ಪನನೆಂಜಲಿಸುವುದೆ ನಾಯಿ
13 ಸತ್ಸಾರದಧ್ವರ ಹವಿಯ ನಾಯ್ನರಿ ತುಡುಕಿ ತಿಂದಂತೆ
14 ತುಂಬಿರ್ದ ಗಗನಕೆ ಲೋಪ ಹೊಂದಂತೆ
15 ಹಾಹೆಗಳೆತ್ತಲಿತ್ತಲು ಸುಳಿದಡೂ ಸೂತ್ರಿಕನನುಳಿದುಂಟೆ

ಪ್ರಕೃತ ಈ ಅಧ್ಯಾತ್ಮ ರಾಮಾಯಣದ ಎರಡನೇ ಪ್ರತಿಯನ್ನು ಹುಡುಕುತ್ತಿರುವಾಗ ಆಕಸ್ಮಾತ್ತಾಗಿ ಇನ್ನೊಂದು ಪ್ರತಿ ದೊರಕಿತು. ಕುಮಟಾ ತಾಲೂಕಿನ ಊರಕೇರಿ ಗ್ರಾಮದ ಸಮೀಪವಿರುವ ಉಂಚಗೇರಿ ಗ್ರಾಮದ ಶ್ರೀ ಶಿವಾ ಗಣಪತಿ ಹೆಗಡೆ, ತಮಟಿ ಇವರಲ್ಲಿ ದೊರಕಿತು.

ಮೊದಲನೇ ಪ್ರತಿಯಲ್ಲಿಯ ಕೆಲವು ದೋಷಗಳನ್ನು ಕಂಡುಹಿಡಿಯಲು ಅನುಕೂಲವಾಯಿತು. ಬಿಟ್ಟು ಹೋದ ಪದ್ಯದಭಾಗಗಳನ್ನು ತಿಳಿಯಲು ಸಾಧ್ಯವಾಯಿತು.

ಈ ಪುಸ್ತಕವು 20" ಉದ್ದವಾಗಿದ್ದು 2½" ಅಗಲವಾಗಿದೆ ಪ್ರತಿ ಅತ್ಯಂತ ಉತ್ತಮ ಸ್ಥಿತಿಯಲ್ಲಿದೆ. ಪ್ರತಿಯೊಂದು ಹಾಳೆಯ ಎರಡೂ ಬದಿಗೆ ಬರೆಯಲ್ಪಟ್ಟಿದೆ. ಪ್ರತಿ ಅಕ್ಷರವೂ ಸುಂದರವಾಗಿ ಬರೆಯಲ್ಪಟ್ಟಿದೆ ಪ್ರತಿ ಬದಿಗೆ ಸುಮಾರು ೭-೮ ಸಾಲುಗಳು ಇವೆ. ಪ್ರಾರಂಭವು ಈ ರೀತಿಯಾಗಿದೆ. "ಸ್ವಸ್ತಿ ಶ್ರೀ ಗುರು ಗಣೇಶ ಶಾರದಾಂಬಾಭ್ಯೋನಮಃ ॥ ನಿರ್ವಿಘ್ನಮಸ್ತು" ನಂತರ ಪದ ಪ್ರಾರಂಭ. ಯುದ್ಧ ಕಾಂಡದ ಕೊನೆಯಲ್ಲಿ ಈ ರೀತಿ ಇದೆ. "ಶ್ರೀ ರಾಮಚಂದ್ರಾಯನಮಃ । ಮಂಗಳಾನಿ ಭವಂತು"

ನಂತರ ಉತ್ತರ ಕಾಂಡ ಪ್ರಾರಂಭವಾಗಿದೆ. ಶ್ರೀ ಗಣೇಶಾಯನಮಃ । ದಿಂದ ಪ್ರಾರಂಭವಾಗಿದೆ ಅಂತ್ಯ ಈ ರೀತಿ ಇದೆ. ಶ್ರೀ ರಾಮಚಂದ್ರಾಯಃ ನಮಃ ಮಂಗಳಾನಿ ಭವಂತು ॥ ಅಗ್ನಿಮೂಷಿಕ ಚೋರೇಭ್ಯೋ ಶಿವಂ ರಕ್ಷಂತು ಪುಸ್ತಕಂ ॥ ವಿಸರ್ಗ ಬಿಂದು ಮಾತ್ರಾಣಿ ಪದ ಪಾದಾಕ್ಷರಾಣಿ ಚ । ನ್ಯೂನಾನಿ ಚಾತಿರಿಕ್ತಾನಿ ಕ್ಷಮಸ್ವ ಪುರುಷೋತ್ತಮ ॥ ವಿಕೃತು ಸಂ । ಶ್ರಾವಣ ಶುದ್ಧ ೧೧ ಯಲ್ಲು ಗು ॥ ವೆಂಕಟರಮಣ ಭಟ್ಟನ ಮಗ ಕೃಷ್ಣ ಭಟ್ಟನ ಬರಹದ ಅಧ್ಯಾತ್ಮ ಪುಸ್ತಕಂ । ಯೆಾತನ ಪುಸ್ತಕಮಿದಂ ॥ ಅಂತೂ ಸುಮಾರು 150 ವರ್ಷಕ್ಕಿಂತಲೂ ಹಿಂದಿನ ಪ್ರತಿ ಎಂದು ತಿಳಿದುಬರುತ್ತದೆ.

## ಕೃತಜ್ಞತೆಗಳು

ಈ ಪುಸ್ತಕವನ್ನು (ತಾಳೆಗರಿ ಕೃತಿಯನ್ನು) ಕೊಟ್ಟವರು ವೆಂಕಪ್ಪಾ ಪರಮಯ್ಯ ಹೆಗಡೆಯವರ ಮಗ ಪರಮಯ್ಯ ಎಂಬವರು. ಅವರಿಗೆ ನನ್ನ ಅನಂತ ಕೃತಜ್ಞತೆಗಳು. ಎರಡನೆ ಪ್ರತಿ ಕೊಟ್ಟ ಶಿವಾ ಗಣಪತಿ ಹೆಗಡೆ ತಮ್ಮಟೆ ಉಂಚಗಿ ಇವರಿಗೆ ಕೃತಜ್ಞತೆಗಳು. ತಿರುಮಲ ತಿರುಪತಿ ದೇವಸ್ಥಾನದವರು ಈ ಪುಸ್ತಕಕ್ಕೆ ರೂ 10.000 ಧನಸಹಾಯ ನೀಡಿದ್ದಾರೆ.

ಈ ಪುಸ್ತಕದ ಮೊದಲನೆಯ ಭಾಗದ ಮುದ್ರಣಕ್ಕೆ ಧನಸಹಾಯ ನೀಡಿದ ತಿರುಮಲ ತಿರುಪತಿ ದೇವಸ್ಥಾನದವರಿಗೂ ಸಿರ್ಸಿಯ ತೋಟಗಾರ್ಸ ಸೊಸೈಟಿಯ ಮುಖ್ಯಸ್ಥರಿಗೂ ಶ್ರೀ ಶಿವಾ ಗಣಪತಿ ಹೆಗಡೆ ತಮ್ಮಟೆ

ಕುಮಟಾ ಇವರಿಗೂ ನನ್ನ ಅನಂತ ಕೃತಜ್ಞತೆಗಳು ಈ ಕೃತಿಗೂ ಅವರೆಲ್ಲರ ಧನಸಹಾಯ ದೊರೆಯುಬಹುದೆಂಬ ಆಶೆಯಿದೆ.

ಈ ಪುಸ್ತಕದ ಅಂದವನ್ನು ಹೆಚ್ಚಿಸಲು ಫೋಟೋಗಳನ್ನು ಸೇರಿಸಿ ಪ್ಲೇನ ಫೋಟೋಗಳೆಲ್ಲ ಗೀತಾಪ್ರೆಸ್ ಗೋರಖಪುರದಲ್ಲಿ ಮುದ್ರಿತವಾದ ರಾಮಾಯಣದೊಳಗಿನವು ಈ ಪುಸ್ತಕವನ್ನು ಕೊಟ್ಟವರು ಮೂರೂರಿನ ಕೋಣಾರೆ ಕೇರಿಯಲ್ಲಿರುವ ಶ್ರೀ ಗಜಾನನ ಹೆಗಡೆ ವರ್ಧನ್ ಇವರು. ಇದರಂತೆ ಅಧ್ಯಾತ್ಮ ಪ್ರಕಾಶ ಕಾರ್ಯಾಲಯ ಹೊಳೆನರಸೀಪುರ ಇವರ ಪುಸ್ತಕದೊಳಗಿಂದಲೂ ಫೋಟೋಗಳನ್ನು ಉಪಯೋಗಿಸಲಾಗಿದೆ ಅವರೆಲ್ಲ-ರಿಗೆ ನನ್ನ ಅನಂತ ಕೃತಜ್ಞತೆಗಳು

ಬ್ಲೋಕಗಳನ್ನು ಸಕಾಲದಲ್ಲಿ ತಯಾರಿಸಿಕೊಟ್ಟ ಶ್ರೀ ಎಸ್. ಎಂ ಮಲಕಾಯಿ ಶಾರದಾ ಪ್ರೊಸೆಸ್ ಸ್ಟುಡಿಯೋ ಧಾರವಾಡ ಇವರಗೂ ನನ್ನ ಅನಂತ ಕೃತಜ್ಞತೆಗಳು.

ಈ ಪುಸ್ತಕದ ಪ್ರಕಟನೆಯ ಭಾರ ಹೊತ್ತ "ಕನ್ನಡ ಕರಾವಳಿ ಗ್ರಂಥ ಪ್ರಕಾಶನ ಹೆಗಡೆ" ಇವರಿಗೂ ಇದನ್ನು ಸಲ್ಪವೇ ಸಮಯದಲ್ಲಿ ಅಂದವಾಗಿ ಮುದ್ರಿಸಿಕೊಟ್ಟ "ಶ್ರೀ ಕೃಷ್ಣ ಮುದ್ರಣಾಲಯ ಹೆಗಡೆ" ಇದರ ಕಾರ್ಯಕರ್ತರಿಗೂ ಕೆಲಸಗಾರರಿಗೂ ನನ್ನ ಅನಂತ ಕೃತಜ್ಞತೆಗಳು.

ಓದುಗರಾದ ತಾವು ಈ ಹಿಂದಿನ ಕೃತಿಗಳನ್ನು ಕೊಂಡು ಪ್ರೋತ್ಸಾಹಿಸಿದಂತೆ ಈ ಸುಂದರ ಬೃಹತ್ ಕಾವ್ಯವಾದ ಈ ಅಧ್ಯಾತ್ಮ ರಾಮಾಯಣವನ್ನು ಸಾನಂದರಿಂದ ಕೊಂಡುಕೊಳ್ಳಬೇಕೆಂತಲೂ ನನ್ನನ್ನು ಈ ದಿಶೆಯಲ್ಲಿ ಕೃತಾರ್ಥನನ್ನಾಗಿ ಮಾಡಬೇಕೆಂತಲೂ ಈ ಮೂಲಕ ಕೇಳಿಕೊಳ್ಳುತ್ತೇನೆ. ಹಾಗೂ ಇದರ ಮುಂದಿನ ಭಾಗದ ಪ್ರಕಟನೆಗೆ ಉದಾರ ಹಸ್ತದಿಂದ ಧನ ಸಹಾಯ ನೀಡಿ ಪ್ರೋತ್ಸಾಹಿಸಬೇಕೆಂದೂ ಕೇಳಿಕೊಂಡು ನನ್ನ ಈ ಸವಿನಯ ಮಾತನ್ನು ಮುಗಿಸುತ್ತೇನೆ

|| ಭದ್ರಂ ಶುಭಂ ಮಂಗಳಂ ||

ಎನ್. ಕೆ. ಹೆಗಡೆ
ಸಂಪಾದಕರು





ಮೂಡಲ ದೇವಸ್ಥಾನದ ಶ್ರೀ ಗೋಪಾಲಕೃಷ್ಣ

# ಅಧ್ಯಾತ್ಮ ರಾಮಾಯಣ

## ಅರಣ್ಯಕಾಂಡ



ಜಟಾಯುಷೋ ದೀನದಶಾಂ ವಿಲೋಕ್ಯ ಪ್ರಿಯಾವಿಯೋಗಪ್ರಭವಂ ಚ ಶೋಕಂ
ಯೋ ವೈ ವಿಸಸ್ಮಾರ ತಮಾರ್ದ್ರಚಿತ್ತಂ ಶ್ರೀಜಾನಕೀಜೀವನಮಾನತೋಽಸ್ಮಿ ||

# ॥ ಶ್ರೀ ರಾಮಚಂದ್ರ ಧ್ಯಾನಮ್ ॥

ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ ।
ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ ॥೧॥

ವೈದೇಹೀ ಸಹಿತಂ ಸುರದ್ರುಮತಲೇ ಹೈಮೇ ಮಹಾಮಂಟಪೇ
ಮಧ್ಯೇಪುಷ್ಪಕಮಾಸನೇ ಮಣಿಮಯೇ ವೀರಾಸನೇ ಸುಸ್ಥಿತಮ್ ।
ಅಗ್ರೇ ವಾಚಯತಿ ಪ್ರಭಂಜನಸುತೇ ತತ್ತ್ವಂ ಮುನಿಭ್ಯಃ ಪರಂ
ವ್ಯಾಖ್ಯಾಂತಂ ಭರತಾದಿಭಿಃ ಪರಿವೃತಂ ರಾಮಂ ಭಜೇ ಶ್ಯಾಮಲಮ್ ॥೨॥

ವಾಮೇ ಭೂಮಿಸುತಾ ಪುರಶ್ಚ ಹನುಮಾನ್ ಪಶ್ಚಾತ್ ಸುಮಿತ್ರಾಸುತಃ
ಶತ್ರುಘ್ನೋ ಭರತಶ್ಚ ಪಾರ್ಶ್ವದಲಯೋರ್ವಾಯ್ವಾದಿಕೋಣೇಷು ಚ ।
ಸುಗ್ರೀವಶ್ಚ ವಿಭೀಷಣಶ್ಚ ಯುವರಾಟ್ ತಾರಾಸುತೋ ಜಾಂಬವಾನ್
ಮಧ್ಯೇ ನೀಲಸರೋಜಕೋಮಲರುಚಿಂ ರಾಮಂ ಭಜೇ ಶ್ಯಾಮಲಮ್ ॥೩॥

ರಾಮಂ ರಾಮಾನುಜಂ ಸೀತಾಂ ಭರತಂ ಭರತಾನುಜಮ್ ।
ಸುಗ್ರೀವಂ ವಾಯುಸೂನುಂ ಚ ಪ್ರಣಮಾಮಿ ಪುನಃ ಪುನಃ ॥೪॥

ನಮೋಽಸ್ತು ರಾಮಾಯ ಸಲಕ್ಷ್ಮಣಾಯ
ದೇವ್ಯೈ ಚ ತಸ್ಯೈ ಜನಕಾತ್ಮಜಾಯೈ ।
ನಮೋಽಸ್ತು ರುದ್ರೇಂದ್ರ ಯಮಾನಿಲೇಭ್ಯೋ
ನಮೋಽಸ್ತು ಚಂದ್ರಾರ್ಕ ಮರುದ್ಗಣೇಭ್ಯಃ ॥೫॥

ಚರಿತಂ ರಘುನಾಥಸ್ಯ ಶತಕೋಟಿಪ್ರವಿಸ್ತರಮ್ ।
ಏಕೈಕಮಕ್ಷರಂ ಪ್ರೋಕ್ತಂ ಮಹಾಪಾತಕನಾಶನಮ್ ॥೬॥

ವಾಲ್ಮೀಕಿ ಗಿರಿ ಸಂಭೂತಾ ರಾಮಸಾಗರಗಾಮಿನೀ ।
ಪುನಾತು ಭುವನಂ ಪುಣ್ಯಾ ರಾಮಾಯಣ ಮಹಾನದೀ ॥೭॥

ಶ್ಲೋಕಸಾಗರಮಾಕೀರ್ಣಂ ಸರ್ಗಕಲ್ಲೋಲಸಂಕುಲಮ್ ।
ಕಾಂಡಗ್ರಾಹಮಹಾಮೀನಂ ವಂದೇ ರಾಮಾಯಣಾರ್ಣವಮ್ ॥೮॥



|| ಸ್ವಸ್ತಿ || ಶ್ರೀ ಗುರುಗಣೇಶಾಯ ನಮಃ || ಶುಭಮಸ್ತು ||
|| ನಿರ್ವಿಘ್ನಮಸ್ತು || ಶ್ರೀ ಗೋಪಾಲಕೃಷ್ಣಾಯ ನಮಃ ||
|| ಶ್ರೀ ರಾಮಚಂದ್ರಾಯ ನಮಃ ||

# ಅಧ್ಯಾತ್ಮ ರಾಮಾಯಣ



## ಅರಣ್ಯಕಾಂಡ

### ಇಪ್ಪತ್ತನೆಯ ಸಂಧಿ

**ವಿರಾಧನಿಗೆ ಮೋಕ್ಷ ಕರುಣಿಸಿದ್ದು**

ಸೂಚನೆ || ದಂಡಕಾರಣ್ಯದ ವಿರಾಧನ
ದಿಂಡುದರಿದಾತಂಗೆ ಕೊಟ್ಟನ
ಖಂಡಲನ ಸೌಖ್ಯವನು ಸೀತಾರಾಮ ಶುಭರಾಮ ||

ಪದ || ಶ್ರೀಗಿರೀಶ್ವರನಮರನುತಪದ
ಭೋಗಿ ಭೂಷಣ ಭಕ್ತ ತೋಷಣ
ಯೋಗಸುಖ ದಾತಾರನಿಂದುಕಲಾರ್ಧ ಶೇಖರನು ||
ಭೋಗ ಮೋಕ್ಷ ಸುಖಪ್ರದಾಯಕ
ನಾಗರುವ ಪಾರ್ವತಿಗೆ ರಾಘವ
ನಾಗಿಸಿದ್ದಾರಣ್ಯಕಾಂಡವ ತೊಡಗಿ ಪೇಳಿದನು ||೧||

ಮತ್ತೆ ಪಾರ್ವತಿ ಕೇಳು ರಾಘವ
ನತ್ರಿಯಾಶ್ರಮದಲ್ಲಿಯೊಂದಿರು
ಳುತ್ತರಿಸಿ ಮರುದಿವಸ ಮುಂದಾ ಮುನಿಯನನುವರಿಸಿ ||

ಅತ್ತ ಯಾತ್ರೆಗೆ ದಂಡಕಾನನ
ದರ್ಥಿಯಲಿ ಮುನಿ ಸೇವ್ಯ ಸುಸ್ಥಳ
ದೊತ್ತಿಗಾವೈದುವವನುಜ್ಞೆಯ ಯೆಂದನಾ ರಾಮ || ೨ ||

ಎಂದಡದ ಕೇಳ್ದತ್ರಿ ಮಹಋಷಿ
ಮುಂದೆ ರಾಮನ ನೋಡಿ ನಗುತಿಂ
ತೆಂದನಾಡಿದೆ ರಾಮ ಮಾರ್ಗವ ತೋರಿಸೆಂದೆಮಗೆ ||
ತಂದೆ ನೀನೇ ಸಕಲ ಶ್ರುತಿಮುಖ
ದಿಂದ ಮಾರ್ಗವ ತೋರಿಯಿಹೆ ಯರ
ವಿಂದ ರಾಮನೆ ನೀನೆ ಕಾರಣಹೇತುವೀ ಜಗಕೆ || ೩ ||

ವೇದಶಾಸ್ತ್ರ ಪುರಾಣ ಸಂಹಿತೆ
ಯಾದಿಯಾಗಮ ಸೌಪನಿಷತುಗ
ಳಾದ ವಿರತಿ ವಿವೇಕ ಭಕ್ತಿಜ್ಞಾನಮಾರ್ಗವನು ||
ಸಾಧಕರಿಗೆಲೆ ರಾಮ ಮಾಯಾ
ಪಾದಿಯಟವಿಯ ನಡುವೆ ತೋರುವ
ನಾದಿ ಮೂರುತಿ ನಿನಗೆ ಬೇರಾರರುಹುವರು ಪಥವ || ೪ ||

ಆದರೂ ನೀ ನಮ್ಮ ಕೇಳಿದ
ಡೋದುವೆನು ಲೋಕಾನುಸಾರದ
ಹಾದಿ ಮಾತ್ರವನೆನುತ ಶಿಷ್ಯರ ಸಹಿತ ಕೆಲವೆಡೆಗೆ ||
ಹೋದನಾ ಮುನಿ ರಾಮನೊಡನೊಲಿ
ದಾದರಿಸುತವೆ ಬಳಿಕ ರಾಘವ
ಹೇ ದಯಾನಿಧಿಯಿಲ್ಲಿ ನಿಲ್ಲಿಯೆನುತ್ತ ಬೆಸಸಿದನು || ೫ ||

ಬಳಿಕ ಸೌಹಾರ್ದದಲಿ ಶಿಷ್ಯರ
ಕಳುಹಿಯೊಡನಾಶ್ರಮಕೆ ನಡೆದನು
ಕೆಲವು ದೂರ ಕ್ರೋಶ ಮಾತ್ರಕೆ ಬರಲು ಮುಂದಲ್ಲಿ ||

ಹೊಳೆ ಮಹತ್ತರವಾಗಿ ಹರಿದುದ
ನಳಿಸದೃಶನೀಕ್ಷಿಸುತ ದಾಂಟಲಿ
ಕಳುಕಿದಂದದಿ ಮುನಿಯ ಶಿಷ್ಯರ ಕರೆದು ಬೆಸಗೊಂಡ || ೬ ||

ಯಾವುಪಾಯಗಳಿಂದ ನದಿಯಿದ
ನಾವು ದಾಟುವೆವೆನಲು ನುಡಿದರು
ದೇವ ದಾಂಟುವ ದೋಣಿ ದೃಢವಾಗುಂಟರೆ ಕ್ಷಣದಿ ||
ನಾವೆ ದಾಂಟಿಸಿ ನಿಮ್ಮನಾಚೆಯು
ಲೋವಿ ಬಹೆವೆನೆ ಬಳಿಕ ಸೀತಾ
ದೇವಿ ಲಕ್ಷ್ಮಣ ಸಹಿತ ಕುಳಿತನು ನಗುತ ನಾವೆಯಲಿ || ೭ ||

ಒಂದು ಕ್ಷಣ ಮಾತ್ರದಲಿ ನದಿಯನು
ಹಿಂದುಗಳೆದಾಚೆಯಲಿಳಿದು ಮುನಿ
ನಂದನರ ಕಳುಹಿದನು ಕರುಣದಲತ್ರಿಯಾಶ್ರಮಕೆ ||
ಹಿಂದೆ ಮರಳಿದರವರು ರಾಘವ
ಮುಂದೆ ಘೋರಾರಣ್ಯ ಕೈದಿದ
ಲಿಂದು ಮುಖಿ ಲಕ್ಷ್ಮಣನು ಸಹಿತ ನಿಧಾನಿಸುತ ವನವ. || ೮ ||

ಹೊಕ್ಕರತಿ ಘೋರಟವಿಯಲ್ಲಿರು
ವಿಕ್ಕೆಲದ ಹುಲಿಕರಡಿ ಸಿಂಹದ
ಕಿಕ್ಕಲವು ಕಾಡ್ಗೋಣ ಕಮ್ಮೃಗಗಳು ಭೀಕರದ ||
ಕರ್ಕಶದ ಜೂರ್ಜರಿವ ವನದೊಳ
ಗೊಕ್ಕಲಿಕ್ಕುವನೇಕ ಮೃಗಕುಳ
ರಕ್ಕಸರ ಬಹುರೂಪ ಭಯ ವೈರೋಮ ಕಮರಿಡಲು || ೯ ||

ಆಗ ಲಕ್ಷ್ಮಣಗೆಂದ ರಾಮನು
ಯೋಗಳತಿ ಜತನದಲಿ ಅಟವಿಯ
ಸಾಗಬೇಕೈ ತಮ್ಮ ನಮ್ಮಯ ಬಲ ಪರಾಕ್ರಮದಿ ||

ಬೇಗ ತಿಬ್ಬನು ಧನುವಿಗೇರಿಸ
ಮೋಘಶರವನು ತೊಡಿಸಿ ಹಿಡಿದೇ
ಹೋಗಬೇಕಾ ಮುಂದೆ ನಿಂದಿರು ನೀನು ಧನುವಿಡಿದು ॥ ೧೦ ॥

ಮುಂತೆ ನಾನೀ ಹಿಂದೆ ನಡುವೀ
ಕಾಂತೆ ಜಾನಕಿ ಬರಲಿ ಮೆಲ್ಲಗ
ದಂತೆನಲು ಜೀವೇಶ ಮಧ್ಯದ ಮಾಯೆಯುಂವದಲಿ ॥
ಅಂತೆ ಬಿಡದಿರು ಸುತ್ತ ದೃಷ್ಟಿಯು
ನಾಂತಿರೆಲ್ಲಾ ಕಡೆಗೆ ದನುಜರ
ತಿಂಥಿಣಿಗಳುಂಟೆಂದು ಕೇಳಿಹೆ ದಂಡಕಾನನದಿ ॥ ೧೧ ॥

ಎಂದೆನುತ ದನುಜಾರಿಗಳು ಬರೆ
ಮುಂದೆ ಮೂವರು ಸಾರ್ಧ ಯೋಜನ
ದಿಂದ ವನವನು ಕಳಿದು ಕಂಡರು ಪುಷ್ಕರಣಿಯಲ್ಲಿ ॥
ಚೆಂದದುತ್ಪಲ ಕುಮುದ ಹಂಸೆಗ
ಳಿಂದ ಶೈತ್ಯೋದಕಪಲಿರಲಾ
ನಂದದಿಂ ತತ್ಸಲಿಲವನು ಸೇವಿಸಿದರೀಕ್ಷಿಸುತ ॥ ೧೨ ॥

ಸಲಿಲ ಪಾನಗಳಿಂದ ದಗೆಯನು
ಕಳೆದು ತತ್ಸನ್ನಿಧಿಯ ವೃಕ್ಷದ
ನೆಳಲನಾಶ್ರೈಸಿದ್ದ ವಂದರೆ ನಿಮಿಷವಷ್ಟರೊಳು ॥
ಘುಳು ಘುಳಿಸುತಿದಿರಿನಲಿ ಬೇಗದಿ
ಬಲು ಮಹಾ ಘೋರಾಂಗ ವದನ
ಕ್ಕುಳಿಸುವತಿ ಭೀಕರದ ದಾನವ ಬಂದನಾಸ್ಥಳಕೆ ॥ ೧೩ ॥

ಕರಿಕುವರಿದಂಗಭವಯಾನನ
ದುರಿವ ದಾಡೆಯ ಬಿಟ್ಟ ಕಂಗಳ
ತೆರಹುದೊಗಲಿನ ಜೋಲ್ವ ಮೈಗೂದಲಿನ ಮೊರಗಿವಿಯು ॥

ಧರಿಸಿಹಲು ಶೂಲದಲಿ ನರರುಗ
ಳಿರಿದೆಡದ ಹೆಗಲದ್ದಿ ಬಾಯಲಿ
ತುರುಕಿ ಮಹಿಷವ್ಯಾಘ್ರವನು ಗರ್ಜಿಸುತ ನಡೆತಂದ ‖ ೧೪ ‖

ಮತ್ತನೇಕ ಮೃಗೌಘ ಗಜವನು
ತುತ್ತುಗೊಳುತೈತರಲು ರಾಘವ
ನೊತ್ತಿನನುಜಗೆ ತೋರಿದನು ನೋಡತಿ ಭಯಂಕರದ ‖
ಮೃತ್ಯು ದಾನವ ಬಂದನದೆಕೊ ಭ
ಯಸ್ಥರಿಗೆ ಬೀರುವನು ಸಜ್ಜೀ
ಕೃತ್ಯ ಧನುವಿಂದಿರು ಬೆದರದಿರು ಸೀತೆ ನೀನೆಂದ ‖ ೧೫ ‖

ಥಿಟ್ಟ ರಾಘವನಿದಿರಿಸಲಿ ಹಿ
ಮ್ಮೆಟ್ಟದಚಲ ಸಮಾನನಾಗಿರಿ
ಮುಷ್ಟಿ ಶರಚಾಪವನು ಕೊಂಡಂಗನೆಯನುಜ ಸಹಿತ ‖
ದುಷ್ಟ ದಾನವ ನೋಡಿ ಹಾಯಿಸು
ತಟ್ಟ ಹಾಸವ ಮಾಡಿ ಮುರಿವುತ
ಬೆಟ್ಟವನು ಹಾರೈಸಿ ಭೀಕರ ನುಡಿಯಲಿಂತೆಂದ ‖ ೧೬ ‖

ಆರೆಲವೊ ಶರಚಾಪ ವರ ತೂ
ಣೀರ ವಲ್ಕಲ ಜಟೆಯ ಧರಿಸಿದ
ಮಾರಸನ್ನಿಭ ಬಾಲರಂಗನೆ ಸಹಿತ ಮುನಿಯಂತೆ ‖
ಸೇರಿದಿರಿ ವನಕೇನು ಕಾರಣ
ಮೂರುಖರಿರಾ ತನ್ನ ತುತ್ತಿನ
ಗೋರೆಯಣಲಿಗೆ ಸರ್ಪ ಸಂಕುಲ ಘೋರ ಕಾನನಕೆ ‖ ೧೭ ‖

ರಕ್ಕಸನ ನುಡಿಗೇಳಿ ರಾಘವ
ನಕ್ಕು ನುಡಿದನು ನಾನು ರಾಮನು
ಲಕ್ಷ್ಮಣನು ಯೆಂಬಾತನೀತನು ತನಗೆ ಹಿತವಂತ ‖

ತಕ್ಕಸತಿ ತನಗಿವಕೆ ಜಾನಕಿ
ಹೊಕ್ಕೆನಡವಿಗೆ ತಂದೆಯಾಜ್ಞೆಗೆ
ರಕ್ಕಸರ ನಿಮ್ಮಂಪದವರನು ಸವರಲೋಸುಗರ ‖ ೧೮ ‖

ಕೇಳಿ ರಾಮನ ಮಾತ ಕೋಪ ಚ
ಢಾಳಿಸಿತು ಬಾಯ್ದೆರೆದು ಕೆತ್ತನು
ಸಾಲವೃಕ್ಷವನಟ್ಟಿ ಹಾಸವ ಮಾಡಿ ಭುಜ ಹೊಯ್ದು ‖
ಕೇಳಿದರಿಯಾ ರಾಮ ತನ್ನ ಕ
ರಾಳ ದೈತ್ಯ ವಿರಾಧನೆಂಬುದ
ಕಾಲಮೃತ್ಯುಕಣಾ ಜಗತ್ರಯವರಿಯದೇ ಯೆಂದ ‖ ೧೯ ‖

ಹೆಸರ ಕೇಳಿಯೆ ಮುನಿಗಳೀ ವನ
ವಸತಿಯನು ಬಿಟ್ಟೆಲ್ಲರೋಡಿದ
ರಸಮ ವಿಕ್ರಮ ನಾನು ನೀವೀಕ್ಷಣವೆ ಬದುಕುವಡೆ ‖
ಶಶಿಮುಖಿಯನಿತ್ತಾಯುಧಂಗಳ
ಬಿಸುಟು ಹೋಗದಡೀಗ ನುಂಗುವೆ
ನುಸಿ ತನಗೆ ನೀವೆನುತ ಸೀತೆಯ ತುಡುಕೆ ಹರಿತಂದ ‖ ೨೦ ‖

ಬರಲು ನಸುನಗುತೊಂದು ಬಾಣದಿ
ಕರವ ಕಡಿದಿಡುಕಿದನು ರಾಘವ
ನುರವಣಿಯ ಬಾಯ್ದೆರೆದು ಮತ್ತೈತರಲು ಸಮ್ಮುಖಕೆ ‖
ಹರಿದು ಬರುತಿರೆ ಮತ್ತೆ ರಾಮನು
ಚರಣವೆರಡನು ಬಾಣವೊಂದರ
ಲುರುಳೆಗಡಿದರೆ ಬಿದ್ದನದ್ಭುತದಿಂದಲಾ ದೈತ್ಯ ‖ ೨೧ ‖

ಬಿದ್ದನೆಲದಲಿ ಸರ್ಪನಂದದ
ಲದ್ರಿ ಸನ್ನಿಭನೊಡೆದು ಬಾಯನು
ಹೊದ್ದಿ ರಾಮನ ನುಂಗಲೆಂದೈತರಲು ರಾಘವನು ‖

ಅರ್ಧ ಚಂದ್ರಾಕಾರ ಬಾಣವ
ತಿದ್ದಿ ತಲೆಯನು ಕಡಿಯೆ ರಕುತಗ
ಳಿದ್ದೆಸೆಗೆ ಕಡಲಿಡಲು ಕೆಡದುದು ಮುಂಡವುರುಳುತ್ತ || ೨೨ ||

ಧರಣಿಸುತೆ ಬಂದಪ್ಪಿದಳು ರಘು
ವರನನಾಕಾಶದಲಿ ದಿವಿಜರು
ನೆರೆದು ಗಂಧರ್ವಪ್ಸರೋಗಣ ಗರುಡ ಕಿನ್ನರರು ||
ಹರುಷದಲಿ ಹೊಗಳುತ್ತ ರಾಮನ
ಸರಳ ಮಳೆ ದುಂದುಭಿಯ ಶಂಖೋ
ತ್ತರದ ಗೀತದಲೋಲಗಿಸುತಿದ್ದುದು ಜಗನ್ಮಯನ || ೨೩ ||

ಗಿರಿಜೆ ಕೇಳಾಕ್ಷಣ ವಿರಾಧನ
ಶರಿರದಿಂದಿವ್ಯಾಂಗ ವಿದ್ಯು
ಸ್ಫುರಿತ ಭೂಷಣ ಮಕುಟ ಹಾರಾಂಬರದ ಕುಂಡಲದ ||
ಪರಮ ರೂಪೋದಾರದಂಬರ
ತರಣಿ ಮಂಡಲದಂತೆ ಹೊರವಂ
ಟಿರಗಿದನು ಬಂದಾ ರಘೂತ್ತಮನಂಘ್ರಿ ಕಮಲದಲಿ || ೨೪ ||

ಮಣಿ ಮಣಿದು ದಂಡಪ್ರಣಾಮದ
ಲೆಣಿಕೆಯಿಲ್ಲದೆ ರಾಮ ಚರಣದಿ
ದಣಿಯೆ ನೋಡುತ ಹೊಗಳಿದನು ಗದ್ಗದ ಗಳಾಕ್ಷರದಿ ||
ಪ್ರಣತ ಜನ ಭಯಹಾರಿ ನಾರಾ
ಯಣ ಕೃಪಾಕರ ದೀನ ವತ್ಸಲ
ಗುಣಗಣಾಢ್ಯ ಚರಿತ್ರ ಸುಸ್ಥಿತವಕ್ತ್ರ ಶುಭಚರಿತ || ೨೫ ||

ರಾಮ ರಾಜೀವಾಕ್ಷ ಸನ್ನುತ
ಕಾಮಧೇನುವೆ ಚಿತ್ತವಿಸು ಸು
ತ್ರಾಮ ಲೋಕದಿ ಮುನ್ನ ನಾ ವಿದ್ಯಾಧರಾಂಹಯನು ||

ಸೋಮಜಿತ ಸಂಕಾಶನಾಗಿರ
ಲಾ ಮುನಿಪ ದುರ್ವಾಸ ಕೋಪ
ಸ್ತೋಮ ಮೂರುತಿ ಶಪಿಸಕಾರಣದಿಂ ದನುಜನಾದೆ || ೨೬ ||

ಇಂದು ತನ್ನಯ ಶಾಪವಳಿಯನು
ತಂದೆ ಕಳಚಿದೆ ನಿನ್ನ ಕಂಡ
ಲ್ಲಿಂದ ಮೇಲಿನ್ನೆನಗೆ ನಿಮ್ಮ ಪದಾಂಬುಜದ್ವಯವ ||
ಎಂದು ಮಗಲದೆ ನೆನೆದು ಸುಖದಲಿ
ದಂದುಗದ ಭಯಭವವ ಗೆಲಿದಾ
ನಂದ ಶಾಂತಿಯು ಪಡೆವ ಮತಿಯನೆ ಕರುಣಿಸುವುದೆಂದ || ೨೭ ||

ಅನ್ನು ದಿನವೆಡಬಿಡದೆ ಕಾಮಜ
ಗನ್ನಿವಾಸ ಮುಕುಂದ ಮಾಧವ
ಪನ್ನಗಾರಿಧ್ವಜ ನೃಸಿಂಹಾನಂತ ಮುರವೈರಿ ||
[ಚೆನ್ನಿಗನೆ ಶ್ರೀರಾಮಚಂದ್ರನೆ
ನನ್ನ ಕರ ಮೇಣ್ ಶಿರವು ನಿನ್ನಯ
ಉನ್ನತಾಮಳ ಚರಣಯುಗಳದ ಸೇವೆಯಲಿ ನಿಲಲಿ || ೨೮ ||]

ನಿನ್ನ ಭಕುತರ ನೀನು ಮಾಡಿ
ದ್ದುನ್ನ ತಾಮಳ ಚರಿತ ಸುಧೆಯನು
ವರ್ಣಿಸುವಗಾವೆಡೆಯಲನ್ಯೋನ್ಯದಲಿ ತಮ್ಮೊಳಗೆ ||
ಧನ್ಯರಾಗಿದ್ದುದನು ತನ್ನಯ
ಕರ್ಣ ಪುಟದಲಿ ತುಂಬಿ ಕೇಳು
ತ್ತನ್ಯ ವಾರ್ತೆಯ ಕೇಳದಂದದಿ ಕರುಣಿಸೆನಗೆಂದ || ೨೯ ||

ಪತ್ರ ಪುಷ್ಪಾದಿಗಳ ತಂದೀ
ಹಸ್ತ ನಿನ್ನನೆ ಪೂಜಿಸುತ್ತವೆ
ನಿತ್ಯ ಸೇವೆಯಲಿರಲು ಬೇಕಡಿಗಡಿಗೆ ನಿನ್ನಿದಿರ ||

ಮಸ್ತಕವು ನಮಿಸುತ್ತಿರಲು ಬೇ
ಕೆತ್ತಲೇನೂ ನೆನೆಯದೆನ್ನಯ
ಚಿತ್ತ ನಿನ್ನನೆ ನೆನೆವ ಮತಿಯನೆ ಕರುಣಿಸುವುದೆಂದ || ೩೦ ||

ನೀಲ ಮೇಘನಿಭಾಂಗ ಸಮುಸುರ
ಪೋಲ ಸುಸ್ಮಿತದಂತ ಪಙ್ಕ್ತಿಯ
ಭಾಳದೀಶ ಸ್ವೇದ ಬಿಂದು ಜಟಾ ವಿರಾಜಿತದ ||
ಲೋಲನೇತ್ರದ ಶರಧನುರ್ಧರ
ಬಾಳ ಕರ ವಲ್ಕಲ ವಸನ ಸುವಿ
ಶಾಲ ಸೀತೆಯು ಸಹಿತವೆಸೆದಿರು ನೆನ್ನ ಹೃದಯದಲಿ || ೩೧ ||

ಜಯತು ಭಗವಾನಂತ ಮಹಿಮನೆ
ಜಯ ವಿನಷ್ಟಜ್ಞಾನ ಮೂರುತಿ
ಜಯತು ವಾತ್ಮಾರಾಮ ಸೀತಾರಾಮ ಸಿರಿರಾಮ ||
ಜಯತು ಮಾಂ ಪರಿ ಪಾಹಿ ರಾಘವ
ಜಯತು ನಾ ಮರೆವೊಕ್ಕೆನಖಿಳಾ
ಶ್ರಯನೆ ಗತಿ ತನಗೆನುತ ವಿದ್ಯಾಧರ ನಮಿಸುತಿರ್ದ || ೩೨ ||

ಎಲೆ ರಘೂತ್ತಮ ದೇವಲೋಕದ
ನೆಲೆಗೆ ಹೋಹೆನು ತನಗನುಜ್ಞೆಯ
ಸಲಿಸು ಮುಂದೆಂದೆದು ನಿನ್ನಯ ಮಾಯೆ ತನ್ನುವನು ||
ಬಳಿವಿಡಿಯದಂದದಲಿ ಕರುಣದಿ
ಸಲಹೆನಲು ನೆರೆ ನೋಡಿ ರಾಘವ
ನೊಲವು ಮಿಗಿಲೆಂತೆಂದನಾ ವಿದ್ಯಾಧರಂಗೊಲಿದು || ೩೩ ||

ಆಯಿತಿತ್ತೆನು ವರವನೆನ್ನಯ
ಮಾಯೆ ನಿನ್ನನು ಮುಟ್ಟದಂತೆನೆ
ಪಾಯದಿಂದೆನ್ನಂಘ್ರಿಯುಗವನು ಕಂಡೆ ನಿನಗೀಗ ||

ಆಯಿತೆಂದರಿ ಮುಕುತಿ ಸುಖವ
ತಾ಼ಯು ಭೋಗವನುಣ್ಣು ವಿಷಯದ
ಲಾಯು ಕಾಡದು ತನ್ನ ಪದ ಪರಿನಿಷ್ಠರಿಂಗೆಂದ || ೩೮ ||

ದುರ್ಲಭವು ಮತ್ಪಾದಯುಗಳದ
ಸಲ್ಲಲಿತ ಸದ್ಭಕ್ತಿಯೆಂಬುದ
ದೆಲ್ಲರಿಗೆ ದೊರಕುವುದೆ ಲೋಕದಲಾರಿಗಾದರೆಯು ||
ಅಲ್ಲಿ ಸಾವಿರ ಲಕ್ಷದೊಳಗು
ಬ್ಬಾಳ್ಳವಗೆ ಮದ್ಭಕ್ತಿ ದೊರಕಿದ
ಡಿಲ್ಲ ಭವ ಬಳಿಕವಗೆ ಪಡೆವನು ಮೋಕ್ಷ ಸಂಪದವ || ೩೫ ||

ಆ ಮಹಾ ರಾಕ್ಷಸ ವಿರಾಧನು
ಭೀಮಶಾಪವ ಗೆಲಿದನಾ ಶ್ರೀ
ರಾಮನಿಂದವೆ ಪಡೆದು ನಿಧನವ ವರವನೆರೆ ಲಭಿಸಿ ||
ತಾ ಮೊದಲ ವಿದ್ಯಾಧರತ್ವವ
ನೇಮಗಳ ಲಭಿಸಿದನಿದನು ಕೇ
ಳ್ದಾ ಮಹಾತ್ಮರು ಪಡೆವರಖಿಳೇಷ್ಟಾರ್ಥ ಸಂಪದವ || ೩೬ ||

ಶ್ರೀ ಮಹೇಶ್ವರ ಗಿರಿಜೆಗೆಂದೀ
ರಾಮ ಚರಿತದಿ ಸಂಧಿಯಿಪ್ಪ
ತ್ತೀ ಮಹಾಧ್ಯಾಯದಲಿ ಪದಕೃತಿ ಧೃತಿಯು ಸಂಜ್ಞೆಗಳು ||
ನಾಮರೂಪ ವಿದೂರ ನಿರ್ಗುಣ
ಧಾಮ ನಿಜ ನಿರ್ದ್ವಂದ್ವ ನಾತ್ಮಾ
ರಾಮ ಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹ ಸಲಹೆಮ್ಮ || ೩೭ ||

ಅಂತೂ ಸಂಧಿ ೨೦ ಕ್ಕೆ ಪದ ೮೫೯ ಕ್ಕೆ
ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

|| ಶ್ರೀ ರಾಮಚಂದ್ರಾಯ ನಮಃ ||



# ಇಪ್ಪತ್ತೊಂದನೆಯ ಸಂಧಿ

## ಶರಭಂಗ ಮುನಿಗೆ ಮುಕ್ತಿ, ಅಗಸ್ತ್ಯಾಶ್ರಮದಲ್ಲಿ ವಾಸ

ಸೂಚನೆ || ಮುಕುತಿಯನು ಶರಭಂಗ ಮುನಿಗಿ
ತ್ತ ಕುಟಿಲ ಶ್ರೀ ರಾಮ ಋಷಿಗಳ
ನಿಕಟವೆಲ್ಲವ ನೋಡುತಿದ್ದನಗಸ್ತ್ಯನಾಶ್ರಮದಿ ||

ಪದ || ದೇವಿ ಕೇಳು ವಿರಾಧಗಿತ್ತಾ
ದೇವ ಲೋಕವ ರಾಮ ಸೀತಾ
ದೇವಿ ಲಕ್ಷ್ಮಣ ಸಹಿತ ಶರಭಂಗಾಶ್ರಮಕ್ಕೈದಿ ||
ದೇವನದನಂತಿರಲು ಕಂಡನು
ಕೋವಿದನು ಶರಭಂಗನಿದಿರಲಿ
ಭಾವದೂರನ ಬರವ ಜಾನಕಿ ಲಕ್ಷ್ಮಣಾನ್ವಿತನ || ೧ ||

ಎದ್ದು ಸಂಭ್ರಮದಿಂದಿರಲು ಬಂ
ದದ್ವಯಂಗಾಸನವನಿತ್ತನು
ಹೃದ್ಯ ಪೂಜಾತಿಥ್ಯ ಸತ್ಕಾರಂಗಳನು ಮಾಡಿ ||
ಇದ್ದ ಫಲ ಪಕ್ವಾನ್ನ ಭಕುತಿಯ
ಬದ್ಧ ಹೃದಯನು ಕೊಟ್ಟು ಶರಣದ
ಯಾರ್ದ್ರನಯನನ ನೋಡಿ ಬಿನ್ನಹ ಮಾಡಿದನು ಮುನಿಪ || ೨ ||

ನಿನ್ನ ದರುಶನಕಾಂಕ್ಷೆಯಿಂ ತಾ
ನಿನ್ನವರ ತಪದಿಂದ ನೆನೆವು
ತ್ತನ್ನವರ ವಿರುತಿರ್ದೆ ಯೆಲೆ ಜಗದೀಶ ತನಗಿಂದು ||
ಸನ್ನಿಹಿತನಾದೆ ಯೆಲೆ ತಪಸಿನ
ಲೆನ್ನಲುಳ್ಳ ಫಲಂಗಳೆಲ್ಲವ
ನಿನ್ನಲರ್ಪಿಸಿ ಕೊಟ್ಟು ಮುಕ್ತಿಯ ಪಡೆವೆ ನಾನೆಂದ || ೩ ||

ಎಂದು ತನ್ನ ಮಹಾ ಸುಪುಣ್ಯದ
ವೃಂದವನು ರಾಮನಲಿ ವಿರತಿಯ
ಲಿಂದು ಯೋಚಿಸಿ ನಮಿಸಿ ಸೀತಾರಾಮ ಚರಣದಲಿ ||
ಮುಂದೆ ಚಿತಿಯಗ್ನಿಯಲಿ ಮಾಡು
ತ್ತಿಂದ ನಾಗಳೆಯಪ್ರಮೇಯ ಮು
ಕುಂದ ರಾಮನನೊಳ ಹೊರಗೆ ತನ್ಮಯದಲೀಕ್ಷಿಸುತ || ೪ ||

ಸಕಲ ಹೃದಯಾಧ್ಯಕ್ಷನಬುಜಾಂ
ಬಕನ ದೂರ್ವಾದಳಾಭತನು ವೇ
ಚಕ ಜಟಾ ಚೀರಾಂಬರನ ಸೀತಾ ಸಮನ್ವಿತನ ||
ಭಕುತರಿಚ್ಛಿತ ಕಾಮಧೇನುವ
ನಕುಟಿಲನ ನಿನ್ನವರ ನೆನೆದೆನು
ಪ್ರಕಟನಾದೈ ರಾಮನುಜ ಸಹ ಭಾಪುರೇ ಯೆಂದ || ೫ ||

ಅನ್ಯ ಚಿಂತೆಯನುಳಿದು ನಿನ್ನನೆ
ಯಿನ್ನವರ ನೆನೆದಿದ್ದೆ ಯೀಗ ಪ್ರ
ಸನ್ನನಾದೈ ರಾಮ ಸೀತಾದೇವಿ ಸಹವಾಗಿ ||
ವಹ್ನಿಯಲಿ ತಾನೀಗ ದೇಹವ
ನಿನ್ನಿದಿರಲೇ ಬೇಳಿ ಗಮಿಸುವೆ
ನುನ್ನತದ ನಿರ್ಮಲ ಪರಬ್ರಹ್ಮಾತ್ಮ ಲೋಕವನು || ೬ ||

ಸೀತೆ ವಾಮಾಂಕದಲಿ ಮೇಘ
ದ್ಯೋತ ವಿದ್ಯುವಿನಂತೆಸೆವ ಸಾ
ಕೇತನಾಥನೆ ಹೃದಯದಲಿ ನೆಲಸಿರಲೆನುತ್ತೊಳಗೆ ||
ಜ್ಯೋತಿಯಂತಿರೆ ಕಂಡು ಹೊರಗು
ದ್ಭೂತವಾಗಿಯು ಕಂಡು ದೇಹವ
ವೀತಿ ಹೋತ್ರಗೆ ಬೇಳೆ ಬಿದ್ದನು ಪಂಚ ಭೌತಿಕವ || ೭ ||

ಅಳಿದು ತನುವನು ದಿವ್ಯದೇಹವ
ತಳೆದು ಸಂದನು ಬ್ರಹ್ಮಪದವಿಗೆ
ಬಳಿಗೆ ಬಂದುದು ದಂಡಕಾನನವಾಸಿ ಮುನಿ ನಿವಹ ||
ಅಳಿದು ಶರಭಂಗಾವಸಾನದ
ಬಳಿಯಲೀ ಶ್ರೀ ರಾಮ ಲಕ್ಷ್ಮಣ
ಲಲನೆ ಸಹಿತಿರೆ ಕಂಡರಾ ಶ್ರೀ ರಾಮ ಲಕ್ಷ್ಮಣರ || ೮ ||

ನೋಡಿ ಮಾಯಾ ಮನುಜ ರೂಪದ
ಗೂಢ ಸರ್ವಾಂತಸ್ಥನನು ನೆರೆ
ರೂಢಿಯಲಿ ಪ್ರೈಯ್ಯಿಕ್ಕೆ ಹರುಷದಲಾಶಿಯೋಕ್ತಿಯನು ||
ಮಾಡಿ ಕೈ ಮುಗಿದೆಂದರಜ ನೀ
ರೂಢಿ ಭಾರವ ಕಳೆಯಲೆಂದೇ
ಬೇಡಿ ಧರಿಸಿದೆ ಚಾಪ ಶರವಿದನವತರಿಸಿ ಧರೆಗೆ || ೯ ||

ನಾವು ಬಲ್ಲೆವು ವಿಷ್ಣು ನೀ ಶ್ರೀ
ದೇವಿ ಜಾನಕಿ ಶೇಷ ಲಕ್ಷ್ಮಣ
ದೇವ ಭರತನು ಶಂಖ ಶತ್ರುಘ್ನಾಂಕನೇ ಚಕ್ರ ||
ದೇವರಿಪುಗಳ ಸವರಲಿಳಿದಿರಿ
ನೀವು ರಾಘವಯಿಲ್ಲಿ ಋಷಿಗಳ
ನೋವ ಕಳೆಯೆ ಸಮರ್ಥನಹೆ ನೀನೆಂದು ಹೊಗಳಿದರು || ೧೦ ||

ಬಂದು ನೀ ಸಮ್ಮಾಶ್ರಮಂಗಳ
ನಿಂದುಮುಖಿ ಲಕ್ಷ್ಮಣ ಸಹಿತ ನಲ
ವಿಂದವೆಲ್ಲವ ನೋಡಿ ಪಾವನ ಮಾಡೆ ಬಳಿಕೆಮಗೆ ||
ಇಂದು ನಿಜ ಕೃಪೆ ದೃಢವಹುದು ಯೆನು
ತಂದು ಕರಪುಟದಿಂದೆರಗೆ ರಘು
ನಂದನನು ಬಳಿಕ್ಕೈದಿದನು ಮುನಿನಿಕರದೊಡನೊಲಿದು || ೧೧ ||

ಬರುತ ರಾಮನ ನೋಡಿ ವನದಲಿ
ಹರಿದೆಲುಗಳದಾರದೆಂದೆನೆ
ಮರಳಿ ನುಡಿದರು ರಾಮ ಕೇಳವು ಮುನಿಗಳೆಲುಗುಗಳು ||
ದುರುಳ ರಾಕ್ಷಸರಿಲ್ಲಿ ಚರಿಸುತ
ಪರಮತತ್ವ ಸಮಾಧಿ ನಿಷ್ಠರ
ಮುರಿದು ತಿಂದವರೆಲುವು ತಲೆಯೋಡಿಡುಕಿ ಬಿಸುಡಿದರು || ೧೨ ||

ಕೇಳಿ ಮುನಿಗಳ ದೈನ್ಯ ಭಯವ ಕೃ
ಪಾಳು ರಾಕ್ಷಸರುಳಿಯದಂದದಿ
ಕಾಲಗಟ್ಟುವೆನೆಂದು ಮಾಡಿದನು ಪ್ರತಿಜ್ಞೆಯನು ||
ಲೋಲಲೋಚನೆ ತಮ್ಮ ಸಹ ಮುನಿ
ಜಾಲ ಪೂಜಿತನಾಗಿ ವನದೊಳು
ಬೀಳುಗೊಟ್ಟನು ಕೆಲವು ವರುಷವ ಮುನಿಗಳಾಶ್ರಮದಿ || ೧೩ ||

ಎಲ್ಲ ಖುಷಿಯಾಶ್ರಮಗಳನು ಕ್ರಮ
ದಲ್ಲಿ ನೋಡುತ ಮುಂದೆ ಬರಬರ
ಲಲ್ಲಿ ಋಷಿ ಪ್ರಖ್ಯಾತನೊಬ್ಬ ಸುತೀಕ್ಷ್ಣನಾಂಹಯನ ||
ಸಲ್ಲಲಿತದಾಶ್ರಮದ ವನದೊಳ
ಗೆಲ್ಲ ಖುಷಿಗಳ ಸರ್ವ ಕಾಲದ
ಲೆಲ್ಲರಿಗೆ ಸುಖವಾದ ವನವನು ಕಂಡನಾ ರಾಮ || ೧೪ ||

ವರ ಸುತೀಕ್ಷ್ಣ ರಾಮ ಮಂತ್ರೋ
ಚ್ಚರಣ ನಿಷ್ಠನಗಸ್ತ್ಯ ಶಿಷ್ಯನು
ಬರವ ಕೇಳಿದಿರಾಗಿ ಬಂದಾ ರಾಮಚಂದ್ರಂಗೆ ||
ಕರೆದು ತಂದಾದರದಿ ಪೂಜಿಸಿ
ಹಿರಿದು ಭಕುತಿಯಲಶ್ರು ಜಲದಲಿ
ಕರಗಿ ಕರವನು ಮುಗಿದು ಮಗುಳಿಂತೆಂದನಾ ಮುನಿಪ || ೧೫ ||

ನಿನ್ನ ಮಂತ್ರ ಸುಜಾಪಕನು ನಾ
ನಿನ್ನನಂತ ಗುಣ ಪ್ರಮೇಯವ
ವರ್ಣಿಸುವೆನೆಂತಜಭವಾರ್ಚಿತಪಾದ ಪೀಠನನು ||
ಉನ್ನತದ ರಾಮಾಭಿ ರಾಮ ಭಿ
ವಾರ್ನಯೋತ್ತಾರಂಘ್ರಿ ಕಮಲನೆ
ನಿನ್ನ ದಾಸರ ದಾಸ ನಾನೆಂದನು ಸುತೀಕ್ಷ್ಣನು || ೧೬ ||

ಮತ್ತೆ ನಿನ್ನಯ ಮಾಯೆಯಿಂದವೆ
ಪುತ್ರ ಮಿತ್ರ ಕಳತ್ರ ಗೃಹಧನ
ಕ್ಷೇತ್ರ ಬಂಧು ಪ್ರಮುಖ ಭವದೀ ಹಾಳು ಕೂಪದಲಿ ||
ರಕ್ತ ಮಲ ಮೂತ್ರಾದಿ ಷಣ್ಮಲ
ಯುಕ್ತ ಪಿಂಡದಿ ಮೋಹ ಪಾಶವು
ಸುತ್ತಿ ಬಿದ್ದಿಗೆ ಬಂದು ಮೈದೋರಿದೆಯಲಾ ಯೆಂದ || ೧೭ ||

ನೀನು ಸರ್ವ ಹೃದಾಂತಗೆತ ವಿ
ಜ್ಞಾನಮಯನಾದಡೆಯು ಕಳಿಯರು
ದೀನರೀ ನಿಜಮಂತ್ರ ವಿಮುಖರು ನಿನ್ನ ಮಾಯೆಯನು ||
ಸ್ವಾನುಭವ ನಿಜಮಂತ್ರ ಜಾಪಕ
ರೇ ನಿರಾಕರಿಸುವರು ಮಾಯೆಯ
ನೀನು ಫಲವನು ಕೊಡುವೆ ನೀವಾ ಸ್ವಾರ್ಥಕನುಗುಣವ || ೧೮ ||

ಲೋಕ ಸೃಷ್ಟಿಸ್ಥಿತಿಲಯಂಗಳಿ
ಗೇಕ ನೀ ಮಾಯೆಯಾಲಿಯಜಹರಿ
ಯಾ ಕಪರ್ದಿಯೆನಿಪ್ಪುಪಾಧಿಯ ಗುಣದಿ ತೋರಿದಡೆ ||
ಲೋಕ ಲೋಚನ ಭಾನು ಪಾತ್ರಾ
ನೀಕ ಜಲ ಭಿನ್ನದಲಿ ಹೊಳೆದಂ
ತೇಕನರಿವಡೆ ಬಯಲು ಕಾಂಬುದು ಭಿನ್ನರಿಂಗೆಂದ || ೧೯ ||

ಇಂದು ತನ್ನ ತಪಃ ಫಲೌಘವು
ಬಂದವೀ ನಿನ್ನಂಘ್ರಿಕಮಲ
ದ್ವಂದ್ವಗೋಚರನಾದ ನೀ ದೃಗ್ರೂಪವೆಲ್ಲರಲಿ ||
ಒಂದೆ ಸಮನಾಗಿದ್ದಡೆಯು ನೀ
ನೊಂದು ಮಂತ್ರದಿ ಪೂತ ಹೃದಯರ
ನಿಂದು ಮಂಡಲಂತೆ ಬೆಳಗುವೆ ಸುಪ್ರಸನ್ನದಲಿ || ೨೦ ||

ಕಂಡೆನಲ್ಲೈ ರಾಮ ನಿಜಪದ
ಪುಂಡರೀಕವ ರೂಪ ರಹಿತಾ
ಖಂಡ ಚಿನುಮಯನಾದಡೆಯು ಮರ್ತ್ಯ ವಿಡಂಬನದಿ ||
ಮಂಡನದ ಮಾಯೆಯಲಿ ನೀ ತನು
ಗೊಂಡು ನಟಿಸುವ ಮಾನುಷಾಂಗದ
ಗಂಡುತನವಿದನಾವನರಿವನು ನಿಜ ವಿಹಾರವನು || ೨೧ ||

ಕೋಟಿಕಂದರ್ಪಾಂಗ ಸುಭಗ ಕಿ
ರೀಜ ಜಟೆಗಳ ವಲ್ಕಲಾಜಿನ
ಶಾಟಿಗಳ ಕಮನೀಯ ಚಾಪ ಶರಾಸಿಯಿಂದೆಸೆವ ||
ನೋಟದಿಂದಾಶ್ರಿತರ ತಾಪದ
ತೋಟಿದೆಗೆವ ಕೃಪಾರ್ದ್ರ ನಯನದ
ಕೋಟಿ ಸೂರ್ಯ ಸಮಾನತೇಜನ ಕಂಡೆ ನಾನೆಂದ || ೨೨ ||

ಎಸಳುಗಂಗಳ ಭ್ರೂಲತೆಯು ಕೆಂ
ಪೆಸೆವ ಧರ ವರದಂತ ಪಙ್ಕ್ತಿಯು
ನಸುನಗೆಯು ಸುಕಪೋಲ ಚಿಬುಕದ ಚಾರು ಭುಜಯುಗ್ಮದ ||
ಬಸುರೊಳಗೆ ಬ್ರಹ್ಮಾಂಡಕೋಟಿಯು
ಪ್ರಸರವನು ಹೊತ್ತಾಡುವಗ್ಗದ
ಕುಶಲಿಗಳ ದಾತಾರನಲ್ಲೈ ರಾಮ ನೀನೆಂದ || ೨೩ ||

ನೀಲ ಮೇಘ ನಿಭಾಂಗ ಕಾಂತೀ
ಸಾಲ ಶೋಭಾಮಯದ ನಿರ್ಗುಣಾ
ಶೀಲ ಶಾಂತಾಕಾರದಾರಿಗು ತಿಳಿಯಶಕ್ಯವಹ ||
ಬಾಲೆ ಸೀತೆಯು ಸಹಿತ ಲಕ್ಷ್ಮಣ
ನೋಲಗಿಸುವಂಘ್ರಿದ್ವಯದ ಸುವಿ
ಶಾಲ ಸತ್ವಾತ್ಮಕಗೆ ವೈದೋರಿದೆಯಲಾ ಯೆಂದ || ೨೪ ||

ಬಲ್ಲೆ ನಾನೆಲೆ ರಾಮ ರೂಪವ
ದಿಲ್ಲ ನಿನಗಾ ಶೇಷ ಕಾಲಗ
ಳಿಲ್ಲುಪಾಧಿವಿಹೀನ ಜರೆ ಮರಣಾದಿ ಭಯ ಶೂನ್ಯ ||
ಸಲ್ಲಲಿತ ಚಿದ್ಘನ ಸುತೇಜದ
ಲಿಲ್ಲಿ ವೈದೋರಿತ್ತಲಿಂದೆ
ಮ್ಮಲ್ಲಿ ಸೂಸಿದೆ ದೀನರಲಿ ನಿಜ ಮಹಿಮೆಯುರು ಧನವ || ೨೫ ||

ಮತ್ತೆಯನ್ಯವನೇನು ಬೇಡೆನು
ನಿತ್ಯ ತನ್ನ ಹೃದಾಬ್ಜದಲ್ಲೀ
ಮೂರ್ತಿಯನೆ ನೆರೆ ಬೆಳಗಬೇಕೆನಗಾವ ಕಾಲದಲೂ ||
ಸತ್ಯರೂಪನೆ ರಾಮ ಪಾಲಿಸೆ
ನುತ್ತೆ ಸಂಸ್ತುತಿ ಸಲಿಕೆ ನಗುತಮ
ರುತ್ತಮಾರ್ಚಿತ ಚರಣನಿಂತೆಂದನು ಸುತೀಕ್ಷ್ಣಗೆ || ೨೬ ||

ಆರಿತೆ ನಾನೆಲೆ ಮುನಿಪ ನಿಜಮನ
ದರಕೆಯನು ನಿರ್ಮಲದ ಮತಿಯಲಿ
ಸೆರೆವಿಡಿದು ತನ್ನುವನು ಭಜಿಸುತ್ತಿದ್ದೆಯೆಂಬುದಕೆ ||
ಮರೆಯ ಮಾತೇಕಾನು ನಿನ್ನೃನ
ನರಸಿ ಕಾಣಲು ಬಂದೆ ನಿನಗಿ
ನ್ನರಿವ ಸಾಧನವಲ್ಲ ಬೇರೆಂದನು ರಘೂತ್ತಂಸ || ೨೭ ||

ಆರು ಮನ್ಮಂತ್ರವನುಪಾಸಿಯು
ಸಾರಿ ಜಪಿಸುತ್ತನ್ಯವೇನನು
ಹಾರದೇ ಶಾಂತೇಂದ್ರಿಯದಿ ನಿರಪೇಕ್ಷನಾಗಿಪ್ಪು ||
ಧೀರತನದಲಿ ತನ್ನನೇ ನೆರೆ
ಸಾರಿ ಭಜಿಸುವ ಪುಣ್ಯವಂತಗೆ
ದೂರನಲ್ಲೆಲೆ ಮುನಿಪ ಕಾಂಬರು ತನ್ನನನವರತ || ೨೮ ||

ಆರು ಪಠಿಸುವರೀಗನೆನಗೆಂ
ದೀ ರಹಸ್ಯವ ಸ್ತುತಿಯ ನಿತ್ಯವು
ಸಾರವಾಗಿದ್ದೆನಗತಿ ಪ್ರಿಯವಿದನು ಭಕುತಿಯಲಿ ||
ಸೇರುವುದು ಮದ್ಭಕ್ತಿ ತತ್ವವಿ
ಚಾರಪಥ ಸುಜ್ಞಾನವವರಿಗೆ
ಧೀರತಿಕೆ ನಿರ್ಮಲತೆ ಸೇರುವುದೆಂದನಾ ರಾಮ || ೨೯ ||

ನೀನು ನನ್ನಯ ಭಕುತಿ ಮಂತ್ರ
ಧ್ಯಾನದಿಂದ ವಿಶುದ್ಧನಾದೆಯ
ದೇನು ಸಂಶಯವಿಲ್ಲ ಸಕಲದಿ ಮುಕ್ತನಾದೆಯಲ ||
ಮಾನನಿಧಿ ದೇಹಾಂತದಲಿ ಮತ್
ಸ್ಥಾನ ಸಾಯುಜ್ಯವ ಪಡೆವ ಸಂ
ಧಾನವಿದು ನೆಲೆಯಾಯ್ತು ತನ್ನೊಳಗೆಂದನಾ ರಾಮ || ೩೦ ||

ಕಾಣಿಸುವೆಯಾ ತನಗೆ ನನ್ನಯ
ಪ್ರಾಣ (ತ್ರಾಣ) ಗುರುವರ ಮುನಿಯಗಸ್ತ್ಯ
ಪ್ರೀಣವಾಯ್ತಾತನೆ ನಿರೀಕ್ಷಿಸಲಲ್ಲಿ ಕೆಲವು ದಿನ ||
ರಾಣಿ ಸಹಿತಿರಬೇಕೆನಲು ಗೀ
ರ್ವಾಣ ವಂದ್ಯಂಗಾ ಸುತೀಕ್ಷ್ಣ
ಕಾಣದಾಗಲಿ ರಾಮ ನಾಳಿಗೆ ಹೋಗೆ ನಾವೆಂದ || ೩೧ ||

ಬಹೆನು ನಾ ಸಹ ಮುನಿಯು ಕಾಣದೆ
ಬಹಳ ದಿನವಾಯಿತ್ತೆನುತ್ತಿರೆ
ವಿಹಿತವಾದರೆ ನಾ ತಡೆವೆನೆನುತವರ ವಾರಿಧಿಗೆ ||
ಮಿಹಿರನಿಳಿಯಲು ಹೋಗಲೇನಾ
ಯ್ತಿಹೆನು ರಾಮನ ಕಾಯದಂದದ
ಸಹಜವಾಗಿಯೆನುತ್ತ ಬಂದಳು ರಜನಿ ಖಳ ಸುಜನಿ || ೩೨ ||

ತೆತ್ತಲಾ ತಃನಾದು ರಾಘವ
ನೊತ್ತಿನಲ್ಲಿಹನೆನ್ನ ಕುಲಜನ
ನೊತ್ತಿ ಮೋಹಿಸಿ ಮರಘುವಳೆ ಬಾಹೀಕ್ಷಿಸುವೆನೆನುತ ||
ಹತ್ತಿ ಮೂಡಣಗಿರಿಗೆ ರವಿಬರೆ
ಕಿತ್ತು ಕೊಂಡೋಡಿದಳು ಗಿರಿಗುಹೆ
ಯತ್ತಲತ್ತಲು ಹೊಕ್ಕು ಬದುಕುತಿದ್ದಳಾ ರಜನಿ || ೩೩ ||

ಬಳಿಕ ವುದಯದಲೆದ್ದು ನಿತ್ಯವ
ಸಲಿಸಿ ರಾಮ ಸುತೀಕ್ಷ್ಣನು ಸಹೆ
ಲಲನೆ ಲಕ್ಷ್ಮಣರೊಡನಗಸ್ತ್ಯ ಮಹಾಮುನೀಶ್ವರನ ||
ಬಳಿಯ ಸಂಭಾಷಣೆಯ ಮಾಡಲು
ತಳುವಿತೆನುತವೆ ಮೆಲ್ಲಮೆಲ್ಲನೆ
ತಿಳಿದು ಬಂದನಗಸ್ತ್ಯ ಮುನಿಪನ ತಮ್ಮನಾಶ್ರಮಕೆ || ೩೪ ||

ಚೆನ್ನೆ ಪಾರ್ವತಿ ಕೇಳು ಬಳಿಕ ಮ
ಧ್ಯಾನ್ಹವಾಯ್ತಾಗಸ್ತ್ಯನನುಜನ
ಸನ್ನಿಧಿಗೆ ಸತಿಯನುಜ ಮುನಿಸಹ ರಾಮಬರೆ ಕಂಡು ॥
ಧನ್ಯನಾದೆನೆನುತ್ತಿದಿರು ಬಂ
ದುನ್ನತೋನ್ನತ ಭಕುತಿಯಲಿ ಸಂ
ಪನ್ನನಿಧಿ ಪೂಜಿಸಿದನತಿ ಸಂತೋಷ ಭಾರದಲಿ ॥ ೩೫ ॥

ಶಿವ ಶಿವಾವನ ಕಾಣರಜಭವ
ದಿವಿಜ ಮುಖ್ಯರು ವೇದ ಮಸ್ತಕ
ನಿವಹವರಳಿಯು ಮೂಕಗೊಂಡವು ಕರುಣದಿಂದೀಗ ॥
ತವಗೆ ಗೋಚರಿಸಿದೆಯಲಾ ರಾ
ಘವ ಯೆನುತ ಫಲಪಕ್ವ ಭೋಜ್ಯದ
ನಿವಹದಲಿ ಸತುಕರಿಸಲಿದ್ದನು ರಾಮನಂದಲ್ಲಿ ॥ ೩೬ ॥

ಆ ದಿನವನಲ್ಲಿದ್ದು ಮರುದಿನ
ವೈದಿದರು ಮೆಲ್ಲನೆಯಗಸ್ತ್ಯನ
ಪಾದ ದರುಶನಕಾಂಕ್ಷೆಯಲಿ ಕಂಡರು ಮಹಾವನವ ॥
ಚೋದಿಗದಿ ಸರ್ವರ್ತು ಕಾಲ ವಿ
ಭೇದವಿಲ್ಲದೆ ಪುಷ್ಪಫಲ ಮಧು
ವಾದಿ ಶೋಭಿಸುತಿಹುದು ನಾನಾವೃಕ್ಷ ನಿಕರದಲಿ ॥ ೩೭ ॥

ಎತ್ತ ನೋಡಲು ವಿವಿಧ ಮೃಗಗಳು
ಮೊತ್ತ ನಾನಾ ಪಕ್ಷಿಗಳ ಕಳ
ವೃತ್ತ ಸುಸ್ವರ ನಂದನೋದ್ಯಾನೋಪಮದಲಿಹುದು ॥
ಸುತ್ತಲೆಲ್ಲಾ ದೇವಋಷಿ ಸ
ದ್ವೃತ್ತರಾದ ಬ್ರಹ್ಮಋಷಿಗಳು
ನಿತ್ಯ ಸೇವಿಸುತಿದ್ದರಾಶ್ರಮಗಳಲಿ ಮುನಿವರನ ॥ ೩೮ ॥

ಅಲ್ಲಿಯೂ ಸ್ವಾಧ್ಯಾಯ ಸುಸ್ವರ
ವೆಲ್ಲಿಯೂ ಪೌರಾಣ ಶಾಸ್ತ್ರಗ
ಳೆಲ್ಲಿಯೂ ಜಪತಪ ಸಮಾಧಿಧ್ಯಾನರತರುಗಳೆ ||
ಯೆಲ್ಲಿಯೂ ಯಾಗಾಂಗ ಶಾಲೆಗ
ಳೆಲ್ಲಿಯೂ ತತ್ವಾರ್ಥ ಬೋಧೆಗ
ಳೆಲ್ಲಿಯೂ ಶ್ರೀರಾಮ ಜಪವಾ ಮುನಿಗಳಾಶ್ರಮದಿ || ೩೯ ||

ಸರ್ವತೋಲಂಕಾರದಿಂದಿರ
ಲುರ್ವಿಯಲ್ಲಿದು ಬ್ರಹ್ಮಲೋಕಕೆ
ನಿರ್ವಿಶೇಷವೆನಲ್ಕೆ ಸಾಕ್ಷಾದ್ಬ್ರಹ್ಮ ಸಭೆಯಂತೆ ||
ಸರ್ವಗತ ರಾಘವನು ಲಕ್ಷ್ಮಣ
ನುರ್ವಿಸುತೆ ಸಹಿತಾಶ್ರಮದ ಹೊರ
ಗುರ್ವಿಯಲಿ ತಾನಿಂದು ಕರೆದೆಂದನು ಸುತೀಕ್ಷ್ಣಗೆ || ३೦ ||

ಹೋಗಗಸ್ತ್ಯಂಗೆನ್ನ ಮುನಿಪ ಮ
ದಾಗಮನವನು ರಘುಕುಲೋತ್ತಮ
ಲಾಗಿನಿಂ ಹೊರಗಿಹನು ಸತಿ ಲಕ್ಷ್ಮಣನು ಸಹಿತೆಂದು ||
ಬೇಗದಿಂದೆನಲಾ ಸುತೀಕ್ಷ್ಣ
ನಾಗಲೆನುತೈತಂದು ಕಂಡನು
ಯೋಗನಿಧಿಯನು ಮುನಿಸಮಾವೃತನಾಗಿ ಕುಳಿತಿರಲು || ४೧ ||

ರಾಮಭಕ್ತಿಯಲಮಳ ಹೃದಯದಿ
ನೇಮದಿಂ ನೆರೆ ತಿಳಿವ ಶಿಷ್ಯ ಸ
ಮೂಹಕುತ್ತರ ರಾಮ ಮಂತ್ರಾರ್ಥವನು ಪ್ರಕಟಿಸುತ ||
ಸೋಮಸನ್ನಿಭನಿರೆ ಸುತೀಕ್ಷ್ಣ
ನಾ ಮಹಾತ್ಮನ ಕಂಡು ಬಂದಾ
ಭೂಮಿಯಲಿ ದಂಡಪ್ರಣಾಮವ ಮಾಡುತಿಂತೆಂದ || ४೨ ||

ಮುನಿಪ ಬಿನ್ನಹ ರಾಮನೆಂಬವ
ಜನಪ ದಶರಥನಾತ್ಮಜನು ನಿಜ
ವನದ ಹೆರ ನಿಂತಿಹನು ಲಕ್ಷ್ಮಣ ಸೀತೆ ಸಹ ಬಂದು ||
ಅನುವಿನಿಂ ನಿಜ ದರುಶನಾರ್ಥದ
ಲೆನಲು ಲೇಸಾಯ್ತೆಲ್ಲಿಹನು ಯನು
ದಿನವು ಮಹದೇಯದಲಿ ಬೆಳಗುವ ಚಿದಾತ್ಮಕನೆ || ೪೩ ||

ಇಷ್ಟುದಿನ ಹೃದಯದಲಿ ಧ್ಯಾನದಿ
ದೃಷ್ಟಿಗೋಚರನಾಗಿ ಕಾಣಲು
ಮುಟ್ಟೆ ನೆನೆವುತ್ತಿದ್ದೆನೆನುತವೆ ಮುನಿನಿಕರ ಸಹಿತ ||
ನೆಟ್ಟನಿದಿರಾಗೈದಿ ಬೇಗದ
ಲಿಷ್ಟ ದೈವವಗಂಡು ನುಡಿದನು
ಹೃಷ್ಟ ಮಾನಸನಾಗಿ ಭಕುತಿಯಲಾ ಮಹಾ ಮುನಿಪ || ೪೪ ||

ಬಂದಿರೈ ಶ್ರೀರಾಮಭದ್ರಾ
ನಂದವೇ ಲೇಸಾಗಲೆನ್ನಯ
ಮಂದಿರಕ್ಕತಿಥಿಗಳಾಗಿಯೆ ಯನ್ನ ಜನ್ಮವಿದು ||
ಇಂದು ಸಫಲತೆಯಾಯ್ತು ನಿನ್ನ
ದ್ವಂದ್ವ ಚರಣಸರೋಜ ದರುಶನ
ದಿಂದೆನಲು ಬಳಿಕಾ ರಘೂತ್ತಮ ನೋಡಿದನು ಮುನಿಯ || ೪೫ ||

ಮುನಿಪನಂಘ್ರಿಗೆ ದಂಡದಂದದ
ಲನುಜ ಸತಿ ಸಹಿತರ್ಥಿಯಲಿ ಮುನಿ
ಮನವಿದೂರನು ನಮಿಸಿರಲು ಬೇಗದಲಿ ಹಿಡಿದೆತ್ತಿ ||
ವಿನಯ ಭಕುತಿಯಲಪ್ಪಿ ಮೈಮರ
ದನುಪಮಾನಂದಾಶ್ರುಜಲದಲಿ
ತನು ನೆನೆದು ಪರಿಪೂರ್ಣ ತತ್ವಗಳೈಕ್ಯದಂತಾದ || ೪೬ ||

ಮೆನವ ತಾ ತದ್ಭಾವದಲಿ ವಾ
ಕ್ಯನು ರಘೂತ್ತಮ ಸೂಕ್ತಿಯಲಿ ನಿಜ
ತನುವನಾ ಶ್ರೀರಾಮನಂಗಾಲಿಂಗನಗಳಿಂದ ||
ಮುನಿಯಗಸ್ತ್ಯನು ರಾಮನಿಂ ಬೇ
ರೆನಿಸದಂದದಲಿರ್ದು ಕೈವಿಡಿ
ದನುಪಮನೆ ಕರತಂದನಾಶ್ರಮಕಧಿಕ ಭಕುತಿಯಲಿ || ೪೭ ||

ವಿಷ್ಟರದ ಮೇಲ್ದ್ಯೃತ ರೂಪವಿ
ಶಿಷ್ಟನನು ಕುಳ್ಳಿರಿಸಿ ಪೂಜಾ
ದ್ವಿಷ್ಟದುಪಚಾರವನು ಮಾಡಿದನೆಕ್ರಿಯಾತ್ಮಂಗೆ ||
ತುಷ್ಟಿವಡೆಸಿದ ನಿತ್ಯ ನಿಜಸುಖ
ತುಷ್ಟನನು ವತ್ಸನ್ನ ಭೋಜ್ಯದ
ಲಿಷ್ಟನಾಗಿರುತಿರ್ದ ರಾಮನಗಸ್ತ್ಯನಾಶ್ರಮದಿ || ೪೮ ||

ಸಂದ ಸಂಧಿ ಸಮುದ್ಗಣನೆ ಪದ
ವೃಂದವಾರೆಂಟಾದವೀ ರಘು
ನಂದನನ ಚಾರಿತ್ರವಿದನೊಲಿದಮಳ ಭಕುತಿಯಲಿ ||
ಒಂದೆ ಮನದಿಂದೋದಿ ಕೇಳಲು
ದಂದುಗವನಪಹರಿಸಿ ಸಲಹುವ
ನೆಂದು ಗುರು ನಿತ್ಯಾತ್ಮ ಲಕ್ಷ್ಮಿನೃಸಿಂಹನೊಲವಿನಲಿ || ೪೯ ||

ಅಂತು ಸಂಧಿ ೨೧ ಕ್ಕೆ ಪದ ೯೦೮ ಕ್ಕೆ
ಮಂಗಳಮಹಾ ಶ್ರೀ ಶ್ರೀ ಶ್ರೀ
ಶ್ರೀ ಶ್ರೀ



§ ಶ್ರೀ ರಾಮಚಂದ್ರಾಯ ನಮಃ §



# ಇಪ್ಪತ್ತೆರಡನೆಯ ಸಂಧಿ

## ಅಗಸ್ತ್ಯನು ರಾಮನ ಹೊಗಳಿದ್ದು. ಪಂಚವಟಿ ಪ್ರವೇಶ

ಸೂಚನೆ || ರಾಮನನು ತತ್ವಾರ್ಥ ಸಾರದ
ಲಾ ಮುನಿಪ ಸತುಕರಿಸಿ ಕಳುಹಲು
ಭಾಮೆ ಲಕ್ಷ್ಮಣ ಸಹಿತ ನಡೆದನು ಪಂಚವಟಿಗಾಗಿ ||

ಪದ || ಗಿರಿಜೆ ಕೇಳಾ ರಾಘವೇಶ್ವರ
ನಿರಲಗಸ್ತ್ಯಾಶ್ರಮದಿ ಸುಖ ವಿ
ಸ್ತರದಲೇಕಾಂತದಲಿ ಮುಖಪೂರ್ಣೇಂದುಮಂಡಲದ ||
ಪರಿಯಲಾಗಲಗಸ್ತ್ಯ ಭಕುತಿಯ
ಭರದಿ ಬಂದು ಕೃತಾಂಜಲಿಯ ಪುಟ
ನೆರಗಿ ಬಿನ್ನಹಮಾಡಿದನು ರಾಮಂಗೆ ನಿಜಮತವ || ೧ ||

ರಾವಣನ ಕೊಲಲೋಸುಗರ ವೀ
ಭೂವಿ ಭಾರವ ಕಳೆಯಲೋಸುಗ
ತಾವರೆಯ ಮಗ ಹಿಂದೆ ಕ್ಷೀರಾಂಬೋಧಿಗೈತಂದು ||
ದೇವ ನಿನ್ನನು ಬೇಡಿಕೊಳಲದ
ನಾವರಿತುವಾದಿನ ಮೊದಲೆ ಬಂ
ದೀ ವನದಿ ನಿನ್ನಾಗಮನ ಕಾಂಕ್ಷೆಗಳಲಿಹೆವೆಂದ || ೨ ||

ಎಂದು ನೀ ಬಹೆ ವನಕೆ ಯಾನತ
ಬಂಧು ಭಕ್ತಾಭೀಷ್ಟದಾಯಕ
ನಿಂದಿರೆಯು ಸಹವೆಂದು ನೋಡುತ ಮುನಿನಿಕರ ಸಹಿತ ||

ಅಗಸ್ತ್ಯನು ರಾಮನಿಗೆ ಧನುರ್ಬಾಣಗಳನ್ನು ನೀಡಿದ್ದು



ಶೂರ್ಪನೆಖಿಯ ಕಿವಿಮೂಗುಗಳನ್ನು ಕೊಯ್ದದ್ದು



ಸಂದು ತಪದಲಿ ನಿನ್ನ ಚರಣ
ದ್ವಂದ್ವ ಚಿಂತೆಯಲಾವ ವಿಷಯದ
ದಂದುಗವ ಮರೆದಿಹೆವು ನಿಜನಾಮವನೆ ಜಪಿಸುತ್ತ ‖ ೩ ‖

ಸೃಷ್ಟಿಯಿಂ ಮುನ್ನಿಹೆಯಲಾ
ದೃಷ್ಟ ದರುಶನ ಶೂನ್ಯನಾಗಿ ವಿ
ಶಿಷ್ಟ ಪರಮಾನಂದ ನಿರ್ಮಲನೇಕನೆಂದೆನಿಸಿ ‖
ಕಷ್ಟ ಕಲ್ಪನೆ ನಾಮ ರೂಪದ
ಬಟ್ಟೆಯಿಲ್ಲದೆ ನಿರ್ವಿಕಾರೋ
ತ್ಕೃಷ್ಟ ಸತ್ಯಾದ್ವೈತ ನಿರುಪಮನಾಗಿ ನೀನೆಂದ ‖ ೪ ‖

ಅಲ್ಲಿ ನಿನ್ನಾಶ್ರಮದಿ ನಿಜ ವಿಷ
ಯುಲ್ಲಸಿತ ಲೀಲಾರ್ಥವಾಗಿಯೆ
ಬಲ್ಲಿತೆನಿಸುವ ಯೋಗಶಕ್ತಿ ವಿಲಾಸದಲಿ ನಿನ್ನ ‖
ಸಲ್ಲಲಿತವೆನಿಸದ ಸದಾತ್ಮಕ
ದಲ್ಲಿಹುದಲೂ ವೇದದಂತ್ಯವ
ಬಲ್ಲವರು ಹೇಳುವರು ನಿರ್ಗುಣ ಶಕ್ತಿಯಿಂದದನು ‖ ೫ ‖

ಕೆಲರು ನಿರ್ಗುಣ ಶಕ್ತಿಯೆಂಬರು
ಕೆಲರು ವವ್ಯಾಕೃತವದೆಂಬರು
ಕೆಲರು ಮೂಲಪ್ರಕೃತರೆಂಬರು ಮಾಯೆಯೆಂದೆನುತೆ ‖
ಹಲವು ಪರಿಯಲಿ ವಿದ್ಯೆ ಮೊದಲಹೆ
ಕೆಲವು ವೇದವ ಹೊರಿಸುತದರೊಳು
ನಿಲುಕಿದೆಯೊ ನೀನೆಂಬವೋಲಿಹುದಜ್ಞರಿಂಗೆಂದ ‖ ೬ ‖

ಮೂಲದಪ್ರಕೃತಿಯಲಿ ನೀ ಸಂ
ಮೇಳವಡೆಯಲು ಜನನವಾಯ್ತಾ
ಶೀಲವಾದ ಮಹತ್ತುವಾ ಮಹತಿನ ಬಸುರಿನಿಂದ ‖

ಬಾಲರಾದರು ಪೂವರದನೇ
ಕೇಳುವೆನು ಸಾತ್ವಿಕವು ರಾಜಸ
ಮೇಲೆ ತಾಮಸರೆಂಬಹಂಕಾರ ತ್ರಿತಯರೆಂದ ॥ ೭ ॥

ಸತ್ವದಿಂ ವೈಕಾರಿಕವು ರಜ
ವೃತ್ತಿಯಿಂ ತೈಜಸವು ತಾಮಸ
ದತ್ತಣಿಂ ಭೂತಾದಿಯೂ ಭೂತಾದಿ ಸೂಕ್ಷ್ಮವುದಿ ॥
ಮತ್ತೆ ತನ್ಮಾತ್ರೆಗಳುದಿಸಲು
ತ್ಪತ್ತಿ ಶಬ್ದ ಸ್ಪರ್ಶ ರೂಪ ರ
ಸೋತ್ತಮದ ಗಂಧಂಗಳಾಯ್ತೊಂದರ ದೆಸೆಯಲೊಂದು ॥ ೮ ॥

ಗಗನ ಶಬ್ದಕ್ಕೊಂದು ಮರುತನ
ಲೊಗದ ಪುರುಷಕ್ಕೆರಡು ವಹ್ನಿಯ
ಬಗೆಯ ರೂಪಕೆ ಮೂರು ಶಬ್ದ ಸ್ಪರ್ಶ ರೂಪ ಸಹ ॥
ನೆಗೆವ ಜಲಗುಣ ರಸಕೆ ನಾಲುಕು
ವಿಂಗೆ ಧರೆಯ ಗುಣ ಗಂಧಕಾಯ್ತೆಲೆ
ರಘುಜ ಶಬ್ದ ಸ್ಪರುಶ ರೂಪು ರಸಾಖ್ಯ ಗಂಧಗಳು ॥ ೯ ॥

ಇನ್ನು ರಾಜಸ ತೈಜಸದಲೇ
ಕಾರ್ನತ್ವಕುದುಗ್ರಸನೆ ನಾಸಿಕ
ವೆನ್ನುತಿಹರದಕಾಗಿಸುವ ಕರ್ಮೇಂದ್ರಿಯಂಗಳೈದು ॥
ಕರ್ಣ ವಚನಕೆ ಕರವು ತ್ವಕ್ಕಿಗೆ
ವರ್ನ ಪಾದಕೆ ನೇತ್ರ ಕ್ರೀಡಾ
ಸನ್ನಿಧಿಗೆ ರಸ ದುಗ್ಧ ಗಂಧವನರಿಯೆ ನಾಸಿಕವು ॥ ೧೦ ॥

ಇಂದ್ರಿಯವು ಹತ್ತಿದನು ರಾಜಸ
ವೆಂದು ನುಡಿವರು ಸಾತ್ವಿಕದಲ್ಲೈ
ತಂದೆ ಮನಮತಿ ಹಮ್ಮು ಚಿತ್ತಗಳೆಂಬ ವೃತ್ತಿಗಳು ॥

ಇಂದು ವಿಧಿ ರುದ್ರಾಖ್ಯರಲ್ಲಿಂ
ಮುಂದೆ ಕ್ಷೇತ್ರಜ್ಞನು ಸಹಿತೆತ್ತಾಳೆ
ಸಂದಿಹಾಂತಃಕರಣದಧಿದೇವತೆಗಳಿವರೆಂದ ॥ ೧೧ ॥

ದಿಕ್ಕನಿಲ ರವಿ ವರುಣನಶ್ವಿಯು
ತಕ್ಕ ಪಾವಕನಿಂದ್ರ ವಿಷ್ಣು ಜ
ಮುಕ್ಕುವಾತನು ಜೀವಜಾತವನಿಂತು ಹದಿನಾಲ್ಕು ॥
ಮುಕ್ಕುಮಧಿದೇವತೆಗಳಿದರೊಳು
ತಕ್ಕ ಚೇಷ್ಟೆಗೆ ವಾಯುವೈದರ
ಲೆಕ್ಕ ಪ್ರಾಣಾಪಾನವ್ಯಾನೋದಾನ ಸಮನಗಳು ॥ ೧೨ ॥

ಇನಿತು ಕೂಡಿಯೆ ಸೂಕ್ಷ್ಮ ರೂಪೆಂ
ದೆನಿಸಿ ಲಿಂಗವದೇ ಮಹತ್ತೆಂ
ದೆನಿಸಿದೊಡ್ಡಿದ ರೂಪವಾಗಿಯೆ ನೀನು ಚೈತನದಿ ॥
ಅನುವಿನಿಂದೊಳಸಂದು ಲೋಕದ
ಘನ ವಿರಾಡ್ರೂಪದಲಿ ತೋರುವೆ
ಘನ ಮಹಾಭೂತಸ್ವರೂಪದಲೆಂದನಾ ಮುನಿಪ ॥ ೧೩ ॥

ಬಳಿಕ ನಿನ್ನ ವಿರಾಟ ರೂಪದ
ಬಳಕೆಯಿಂದೀ ಸ್ಥೂಲ [1]ರೂಪಗ[1]
ಳೊಳಗೆ ಸರ್ವ ಚರಾಚರಂಗಳು ಹೊಳೆದಳಿವುತಿಹವು ॥
ತಿಳಿಯೆ ತಿರ್ಯಗ್ಜ್‌ಮರ್ತ್ಯ ದಿವಿಜಾ
ವಳಿಗಳೀ ವ್ಯವಹಾರ ಭೇದದಿ
ಸುಳಿವುತಿಹೆ ನೀನುತ್ತಮಾಧಮ ಮಧ್ಯಮಾಖ್ಯೆಯಲಿ ॥ ೧೪ ॥

ಮೂರು ಲೋಕಕೆ ತಕ್ಕ ಕರ್ಮವ
ತೋರಿ ವುಣಿಸುವೆ ಸತ್ವರಜತಮ
ಮೂರರಿಂದ್ರಿಯ ವಿಜಯವೆಚ್ಚರು ವಿರತಿ ಶಾಂತಿ ॥

1 ಭೂತಗ (ಖ)

ಸಾರುವ ಶ್ರುತಿಗಳಲಿ ನಂಬುಗೆ
ಬಾರಿ [1]ದ[1]ಪ್ಪದ ನಡೆ ನಿರಂತರ
ಸೇರಿಸುವೆ ಸುರಲೋಕವಯ್ದುವೆ ಕರ್ಮವನು ಜಗಕೆ ॥ ೧೫ ॥

ಲೋಭ ಪಶುಧನ ಪುತ್ರ ಮಿತ್ರರ
ವೈಭವಚ್ಚ ಶರೀರ ರಕ್ಷಾ
ಲಾಭವಾಶಾ ಶಂಕೆಯಿಂ ರಾಜಸದ ಕರ್ಮದಲಿ ॥
ಕ್ಷೋಭವಡಿಸುವೆ ಮನುಜ ಲೋಕದ
ಲೀ ಭವ[2]ದಷಡೂರ್ಮಿ[2] ತನುವಿನ
ದಾಬಿನಲಿ [3]ನೆರೆ[3] ಬಿಗಿಸಿ ಮನುಜರನೆಂದನಾ ಮುನಿಪ ॥ ೧೬ ॥

ಅಪ್ರಕಾಶ ಪ್ರವೃತ್ತಿ ನಿರ್ದಯ
ಬೊಪ್ಪವರಿ ನಡೆ ಶೋಕ ನಿದ್ರೆಯು
ತಪ್ಪುವಪ್ಪುಗಳರಿಯದಾ ದುರ್ವಿಷಯ ಕಡುಗೋಪ ॥
ನಿಷ್ಪ್ರಯೋಜನ ಕರ್ಮದಿಂದವೆ
ಕಪ್ಪಳಿಸಿ ನರಕದಲಿ ತಿರ್ಯಗ
ನಿಪ್ಪ ಯೋನಿಯಲಾಡಿಸುವೆ ತಾಮಸದ ಜೀವಿಗಳ ॥ ೧೭ ॥

ಸೇರಿಸುವೆ ಸೃಷ್ಟಿಗಳನೀ ಸರ
ಸೀರುಹೋದ್ಭವನಾಗಿ ಮೂಜಗ
ಕಾರಣಾತ್ಮಕನೆನಿಸಿ ರಾಜಸ ಶಕ್ತಿಯಿಂದೊಲಿದು ॥
ಸಾರ ಸಾತ್ವಿಕ ಮಾಯೆಯಲಿ ಯುವ
ತಾರತಮ್ಯವನು ಮಾಡಿ ಲೋಕದ
ಮೇರೆಯನು ಪಾಲಿಸುವೆ ನೀನೇ ವಿಷ್ಣು ಸಂಜ್ಞೆಯಲಿ ॥ ೧೮ ॥

ಅಲಸಿ ಕಡೆಯಲಿ ರುದ್ರನಾಗಿ
ದ್ದಳಿವೆ ಜಗವನು ತಾಮಸಾಂಗದ
ಲೆಲೆ ರಘೂತ್ತಮ ನೀನೆ ಮಾಯಾ ಭೇದ ಗುಣದಿಂದ ॥

---

1 ತ (ಖ) 2 ದಲಿ ಷಡೂರ್ಮಿ (ಖ) 3 ನೆಲೆ (ಕ)

ಬೆಳೆಸಿ ನೋಡುವೆಯೊಮ್ಮೆ ನೀನೊಳ
ಗೊಳಿಸಿ ನೋದುವೆಯೊಮ್ಮೆ ನಿನ್ನೊಳ
ಗೆಳಸಿ ನೋಡಿಯು ನೋಡದಾತ್ಮಾರಾಮ ನೀನೆಂದ ॥ ೧೯ ॥

ಜಾಗರಣ ಸವುನವು ಸುಷುಪ್ತಿಯು
ನಾಗಿಸುವ ಬದ್ಧಿಗಳ ವೃತ್ತಿ ವಿ
ಭಾಗವನು ವಿೂರಿಹೆಯಲಾ ತತ್ಸಾಕ್ಷಿ ನೀನಾಗಿ ॥
ಆಗಿಯುಳಿಯದೆ ಹೊರಗೊಳಗೆ ಸಮ
ವಾಗಿ ನೀನಾವಸ್ಥೆ ಮೂರರ
ಬೇಗಡೆಯ ಹೊದ್ದದ ನಿರಾಮಯ ಸಚ್ಚಿದಾತ್ಮಕನು ॥ ೨೦ ॥

ಲೀಲೆ[1]ಯಿಂ ನೀ[1] ಸೃಷ್ಟಿ ಕರ್ಮ
ಲಾಲಿಸುವೆ ಯಾವಾಗಳಾಗಲಿ
ಬಾಲೆ ಮಾಯಾಶಕ್ತಿಯಿಂ ನೀ ಗುಣಿಯೊ ಯೆಂಬಂತೆ ॥
ತಾಳುವೆಯಲಾ ಶುದ್ಧ ದೇಹವ
ಕಾಲ ರೂಪನೆ ನಿನ್ನ ಮಾಯಾ
ಶೀಲ ತಾನೆರಡುಂಟು ವಿದ್ಯಾವಿದ್ಯೆ ಸಂಚಿತದಿ ॥ ೨೧ ॥

ನಿನ್ನ ವಿದ್ಯಾಶಕ್ತಿ ತಾನು
ತ್ಪನ್ನವಾಗಲು ಜೀವರಿಗೆ ಬಹು
ಭಿನ್ನ ವಿಕೃತಿಯಲಾಶೆ ವಿಷಯಾರಂಭ ಮದ ಮಮತೆ ॥
ಹೊನ್ನು ಹೆಣ್ಣಾವನಿಸುತಾದ್ಯರ
ಗನ್ನ ಗತಕಕೆ ಸಿಕ್ಕಿ ಸಂಸಾ
ರಾರ್ಣವದಿ ಮುಳುಗಿಸುವದೇಳದವೋಲವಿದ್ಯೆಯು[2]ನು[2] ॥ ೨೨ ॥

ಮಾಯೆಯಲಿ ಸಿಕ್ಕಿದ ಪ್ರವೃತ್ತರು
ಕಾಯ ಸುಖವನೆ ಬಯಸಿ ಬರಿದೇ
ನಾಯ ನಡೆ ಭೋನದ ಶರೀರವ [3]ನ[3]ನ್ನದೆಂದೆನುತ ॥

1 ಯಿಂದೀ (ಖ) 2 ದು (ಖ) 3 ತ (ಖ)

ಹೇಯಗಾಣಿಸಿಯಶುಚಿಯನು ಮುದ
ನಾಯಿ ಬಯಸುವವೋಲು ವಿಷಯದ
ಲಾಯ ಕ್ರಿಮಿಗಳ ವೋಲು [1]ಬದುಕು[1]ವವಾ ಭವದಲೆಂದ ॥ ೨೩ ॥

ಸತ್ತ್ವ ವಿದ್ಯಾಶಕ್ತಿಯುಕ್ತರು
ಸತ್ತ್ವಗುಣ ಮಾರ್ಗದಲಿ ವಿಷಯ ವಿ
ರಕ್ತಿ ಶಮದಮಕ್ಷಾಂತಿಯಾರ್ಜವ ನಿಷ್ಕಲುಷ ಶೌಚ ॥
ಉತ್ತಮದ ದಯಧರ್ಮವಿಡಿದು ನಿ
ವೃತ್ತರಾಗಿಯೆ ವೇದದಂತ್ಯದ
ತತ್ತ್ವ ಪರಿಚಿಂತನೆಯಲಿರುತಿಹರೆಂದನಾ ಮುನಿಪ ॥ ೨೪ ॥

ಅದ್ವಯಿತವನೆ ಬಯಸಿ ನಿನ್ನ ಪ
ದದ್ವಯವನನವರತ ನೆನೆವುತ
ಶುದ್ಧ ಬುದ್ಧಿಯಲಿಹರು ವಿದ್ಯಾ ವಿಷಯವುಳ್ಳವರು ॥
ಬದ್ಧರಾಗಿಯೆ ದೇಹದಿಚ್ಛೆಯ
ಉದ್ಧತಾಹಂಕಾರದಿಂದವೆ
ಬುದ್ಧಿಗೆಡುವರ ವಿದ್ಯೆಯುಳ್ಳವರೆಂದನಾ ಮುನಿಪ ॥ ೨೫ ॥

ತತ್ತ್ವ ವಿದ್ಯಾಭ್ಯಾಸ ನಿರತರು
ನಿತ್ಯ ಮುಕ್ತರು ಸಕಲ ಕಾಲವು
ತತ್ತ್ರಿ[illegible]ವರಿಂಗೆ ಪರಮಾನಂದ ಸಂಭೋಗ ॥
ಮತ್ತೆ ವಿಷಯಾಸಂಗದಲ್ಲಿಹ
ಕತ್ತೆ ಮೂಢಗೆ ಕುದಿಮನಿಂದವೆ
ನಿತ್ಯ ಮರಣವು ನರಕದಂದದ ಚಿಂತೆಯನವರತ ॥ ೨೬ ॥

ಲೋಕದೊಳು ನಿನ್ನಂಘ್ರಿಕಮಲದ
ಲೋಕಪಾವನವ ಭಕುತಿಯಿಂದವೆ
ಜೋಕೆಯಹ ನಿನ್ನಮಳ ಮಂತ್ರವ ಜಪಿಸುವಾತಂಗೆ ॥

---

1 ಮುಳುಗು (ಬ)

ಸೋಕುವುದು ವಿಜ್ಞಾನವಾಗಳೆ
ಕಾಕುತನದಿಂ ನಿನ್ನನರಿಯದ
ಬಾಕುಳಿಗಗೆಂದೆಂದು ಸೇರದು ತತ್ವಪಥವೆಂದೆ ॥ ೨೭ ॥

ನಿನ್ನ ಚರಣದಿ ಭಕುತಿಯುತ ಸಂ
ಪನ್ನನೇ ನೆರೆ ಮುಕ್ತನೆಂಬುದು
ನಿನ್ನ ಮತದಲಿ ಸಕಲ ಸನ್ಮತವೇಕೆ ಸಂಶಯವು ॥
ನಿನ್ನ ಭಕ್ತ್ಯಮೃತವನು ಕುಡಿಯದ
ಭಿನ್ನ ಕರ್ಮಾಸಕ್ತನಾದಂ
ಗೆನ್ನಲೇನದ ಸ್ವಪ್ನದಲಿ ಸಹ ಮೋಕ್ಷವಿಲ್ಲೆಂದ ॥ ೨೮ ॥

ಹಲವ ಹೇಳುವೆನೇನ ರಾಘವ
ತಿಳಿಯೆ ಸಾರವ ಕಿಂಚಿತೆಂದನು
ಹಲವು ಬಗೆಯಲಿ ನೋಡೆ ಮುಕುತಿಗೆ ಸಾಧು ಸಂಗತಿಯೆ ॥
ಮೊಳೆಯಲಾ ತತ್ಸಾಧು ಜನರೊಳು
ಸಲುಗೆನಡೆಯಲು ಸಕಲ ಪುಣ್ಯದ
ಬೆಳಸು ಬಂದೊದಗುವದು ತತ್ವವನರಿಯಬಹುದೆಂದ ॥ ೨೯ ॥

ಉತ್ತಮದ ಸಾಧುಗಳು ಸಲೆ ಸಮ
ಚಿತ್ತರಾಗಿಹರಖಿಳ ಭೂತದಿ
ಮಿತ್ರ ಶತ್ರುಗಳೆನ್ನದವತಿವರೆಂಬ ಬಗೆಯಳಿದು ॥
ಹೆತ್ತ ಮಕ್ಕಳವೋಲು ಹಿತವನು
ತತ್ತದಿಚ್ಛೆಯನರಿದು ಮಾಡುತ
ಮತ್ತೆ ತಮ್ಮಂತೆಲ್ಲರನು ಕಂಡಾಡುತಿಹರೆಂದ ॥ ೩೦ ॥

ತನುವಳಿಯೆ ಧನವಳಿಯೆ ಮಕ್ಕಳು
ಮನೆಯಳಿಯೆ ಪ್ರಿಯ ಬಂಧು ಬಾಂಧವ
ಜನವಳಿಯೆ ಲೋಕಂಗಳಳಿದಾಪತ್ತು ಬಂದರೆಯು ॥

ತನಗಪೇಕ್ಷೆಯು ಚಿಂತೆ ನಿರ್ಗುಣ
ಚಿನುಮಯನು ತಾನೆಂದು ಮರೆಯದೆ
ಕನಸಿನವೊಲಳಲರೆಂದೂ ಸಾಧು ಸಜ್ಜನರು ॥ ೩೧ ॥

ರಾಜತನ ಧನ ಶೌರ್ಯವೆಂದೆಂ
ಬೋಜಮುಖಿಯರು ಪುತ್ರ ಮಿತ್ರರು
ಮೂಜಗಕ್ಕಾಸಿದ್ಧ ಭೋಗವು ಬಂದರದರಲ್ಲಿ ॥
ವ್ಯಾಜಗೊಂಡಿವು ಕೆಡುಗು ಕಡೆಯಲಿ
ಬೀಜ ದುಃಖಕ್ಕೆಂದರಿದು ನಿ
ರ್ವ್ಯಾಜ ವಿರತಿಯುಲಾತ್ಮಸೌಖ್ಯದಲಿಹರು ಸಾಧುಗಳು ॥ ೩೨ ॥

ಚಿಂತಿಸಲು ಕೇಡಿನಲಿ ಸುಖದಲಿ
ಸಂತಸವ ಮಾಡುವರು ವಿಷಯ ವಿ
ಭ್ರಾಂತಿಯಿಲ್ಲವ ಬಿಟ್ಟು ಸಮಲೋಷ್ಟಾಶ್ಮ ಕಾಂಚನದಿ ॥
ಚಿಂತೆಸಂತಸು ಮರೆದು ಹಮ್ಮಿನ
ಪಂಥವಿಲ್ಲದೆ ಕಾಮ ರೋಷಾ
ಕ್ರಾಂತಿ ಮದಮತ್ಸರವ ಹೊದ್ದರು ಸತ್ಪುರುಷರೆಂದ ॥ ೩೩ ॥

ಉತ್ತಮದ ಸತ್ಕರ್ಮ ನಿಕರವ
ನಿತ್ಯ ನೈಮಿತ್ತಿಕವ ಲೌಕಿಕ
ವೃತ್ತಿ ತಪ್ಪದೆ ಪೂತ ಕರ್ಮಾದಿ ಪೂರ್ವ ಸಂಚಿತದ ॥
ಚಿತ್ತ ಮಲವನು ತೊಳೆದು ಕಾಮ್ಯಕ
ದರ್ಥಿಯಿಲ್ಲದೆ ತತ್ವ ವಿಷಯದ
ಲತ್ತ ಕರ್ಮವನೆಲ್ಲ ನಿನಗರ್ಪಿಸುವರುತ್ತಮರು ॥ ೩೪ ॥

ಯಮದಲಿಹ ಪರಿವಿಷಯವನು ಮುಳಿ
ದಮಳಪರ ತತ್ವಾರ್ಥ ನಿಯಮದಿ
ಸಮದಿಸಿದ್ದಾಸನದಲಿಲ್ಲವುದಾಸಿನವು ಕಂಡು ॥

ಕ್ರಮದಿ ಪ್ರಾಣಾಯಾಮದಿಂದೀ
ಭ್ರಮೆಯ ಜಗವನು ಮಿಥ್ಯಗಾಣುತ
ಸುಮತಿ ಪ್ರತ್ಯಾಹಾರದಿಂ ನೋಡುವರು ಸಾಧುಗಳು ॥ ೩೫ ॥

ತಿಳಿದು ನಿಶ್ಚಯದಿಂದ ವಸ್ತುವ
ನೊಳಗೆ ಧಾರಣೆಯಿಂದಲರಿದದ
ನಿಲಿಸಿ ನಿಜ ಚೈತನ್ಯ ತಾನೆಂದೆಂಬ ಧ್ಯಾನದಲಿ ॥
ಬಳಿಕ ಚೈತನ್ಯಾತ್ಮ ಭಾವವು
ಗಳಿತವಾಗಿ ಸಮಾಧಿಯಿಂದವೆ
ನಿಲುವರೆಲೆ ರಘುನಾಥ ನಿನ್ನಯ ಭಕ್ತರಾದವರು ॥ ೩೬ ॥

ಇಷ್ಟ ದೈವೇಚ್ಛೆಯಲಿ ದೊರಕೀ
ತಷ್ಟರಿಂದವೆ ಪ್ರಾರಬುಧ ತನು
ಗಟ್ಟಲೆಗೆ ಸಂತೋಷವಡುತಧಿಕವ ಬಯಸದಂತೆ ॥
ಮುಟ್ಟಿ ನಿನ್ನಂಘ್ರಿಯಲಿ ಮತಿ ರತಿ
ಪಟ್ಟರಹೆ ಸಾಧುಗಳು ಪಡ ಕೂ
ಡಿಷ್ಟರಾಗಲು ದೊರಕುವುದು ನಿಜ ಭಕುತಿ [illegible] ॥ ೩೭ ॥

ಕೇಳುವುದು ನಿನ್ನಮಳ ಚರಿತವ
ಹೇಳುವುದು ನಿಜ ನಾಮವನು ಪೊಳ
ಗಾಲಿಸುವುದೀ ಮೂರ್ತಿಯನು ಸೇವಿಯನು [illegible] ॥
ನೋಲೆಯರ್ಚಿಸುತೆರಗಿ ನಮಿಸು
ತ್ತಾಳಿನಿಸಿ ಸಖ್ಯದಲಿ ಸಕಲವ
ಕೋಳುವೋಗದೆಯರ್ಚಿಸುವರೀ ನಿನ್ನ ಸೇವಕರು ॥ ೩೮ ॥

ನಿನ್ನ ಭಕುತರ ಸಂಗವಿಲ್ಲದೆ
ನಿನ್ನ ಭಕುತಿಯ ಮಾರ್ಗ ದೊರಕದು
ನಿನ್ನ ಭಕುತಿಯದಿಲ್ಲದೆಂದೂ ಮುಕುತಿ ದೊ[illegible] ॥

ನಿನ್ನ ಭಕುತರ ಸಂಗವೇ ನಾ
ಕನ್ಯವೇತಕೆ ಮುಕುತಿವಡೆವಡೆ
ಧನ್ಯರಾಗರೆ ನಿನ್ನ ಭಕುತರ ಭಕುತರಾಧವರು || ೩೯ ||

ಇದುವೆ ಮುಕುತಿಗೆ ಮುಖ್ಯಮಾರ್ಗ
ತ್ವದನು ಭಕುತರ ಸಂಗದಿಂದಹ
ಸದಮಲದ ಸದ್ಭಕ್ತಿ ರಾಘವ ತನಗೆ ನೀ ನಿನ್ನ ||
ಪದಯುಗದ ಭಕುತಿಯನು ಭಕುತರ
ಲೊದವಿದನುದಿನ ಸಂಗವನು ಕೊಡು
ಸದು ಹೃದಯ ನಾನೆನಿಸುವೊಡೆ ರಘುನಾಥ ನೀನೆಂದ || ೪೦ ||

ಇಂದು ರಾಘವ ನಿನ್ನ ಸಂಗದಿ
ಬಂದ ಜನ್ಮವು ಸಫಲವಾಯಿ
ತ್ತಿಂದು ಬಹುವಿಧ ಯಾಗಫಲ ಕೈಸಾರಿತ್ತೈ ತನಗೆ ||
ಹಿಂದೆ ಬಹುಕಾಲವನು ತಪದಲಿ
ಸಿಂದನನ್ಯವ ನೆನೆಯದಾ ಫಲ
ವೃಂದವೆಲ್ಲವ ರಾಮ ನಿಜಪದಕರ್ಪಿಸಿದೆನೆಂದ || ೪೧ ||

ಇನ್ನು ರಾಘವ ಸೀತೆ ಸಹಿತವೆ
ನನ್ನ ಹೃದಯದಿ ನೀನುವಗಲದೆ
ಯನ್ನುದಿನವಿರಬೇಕು ನಾ ನಡೆವಾಗ ನಿಂತಾಗ ||
ಚನ್ನೆ ನುಡಿವಾಗೇಳುವಾಗಲು
ನನ್ನ ನಿದ್ರಾ ಸ್ವಪ್ನ ಜಾಗ್ರದಿ
ನಿನ್ನ ಮೂರ್ತಿಯೆ ಕಾಣುತಿರಬೇಕೆನ್ನ ಹೃದಯದಲಿ || ೪೨ ||

ಈ ಪರಿಯಲಿಯಗಸ್ತ್ಯ ರಾಮ
ನಾಪ ಪರಿ ಸಂಸ್ತುತಿಸಿ ಕೊಟ್ಟನು
ಚಾಪವನು ಮುನ್ನಿಂದ್ರನಿರಿಸಿದ್ದುದನು ರಘುವರಗೆ ||

ಓಪ ದಿವ್ಯಾಕ್ಷಯದ ಶರವನು
ದೀಪಿಸುವ ರತ್ನೌಘ ಖಚಿತ ಕ
ಲಾಪವಹ ಖಡ್ಗವನು ಮಿಗೆ ತಂದಾಗಲಾ ಮುನಿಪ || ೪೩ ||

ಇನ್ನೆರಡು ಯೋಜನದ ಮುಂದದೆ
ಪುಣ್ಯ ಕಾನನ ಪಂಚವಟಿಯಿಂ
ಬುನ್ನತಾಶ್ರಮ ನಾಮವದು ಗೌತಮಿಯ ತೀರದಲಿ ||
ಚಿನ್ನುಮಯ ನೀನಲ್ಲಿ ಕಾಲವ
ಮನ್ನಿಸುತ್ತಿರೆ ಬಹಳ ಕಾರ್ಯವ
ನಿರ್ಣಯಿಸಬೇಕಮರಕುತ್ಸವವೆಂದನಾ ಮುನಿಪ || ೪೪ ||

ಎಂದಡೆಲ್ಲವ ಕೇಳ್ದಗಸ್ತ್ಯ ಮು
ನೀಂದ್ರ ವಚನ ಸುತತ್ವ ಬೋಧೆಯ
ಲೆಂದ ಸಂಸ್ತವಕತಿ ಮುದದಿ ಸಂಭಾಷಣೆಯಲೊಲಿದು ||
ನಿಂದು ಕಳುಹಿಸಿಕೊಂಡು ಮುನಿವರ
ನಂದು ತೋರಿದ ಮಾರ್ಗದಲಿ ನಡೆ
ತಂದನಖಿಳಜ್ಞಾನ ಮೂರುತಿ ಪಂಚವಟಿಗಾಗಿ || ೪೫ ||

ಮುಗಿದುದಿಲ್ಲಿಗೆ ಸಂಧಿ ಕೃತಿಯಿಂ
ಮಿಗಿಲೆರಡು ಪದಬಂಧ ರುದ್ರರ
ಯುಗದಿ ಕೂಡಿದ ಮೇಲೆ ಗುಣದಲಿ ರಾಮ ಕಥೆಯಿದನು ||
ಪೊಗಸಿ ಹೇಳಲು ಕೇಳಲವರಿಗೆ
ಜಗದ ಪತಿ ಕರುಣದಲಿ ಕೆಡಿಸುವ
ನಘವ ಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹನೊಲವಿನಲಿ || ೪೬ ||

ಅಂತು ಸಂಧಿ ೨೨ ಕ್ಕೆ ಪದ ೯೫೪ ಕ್ಕೆ
ಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ



॥ ಶ್ರೀ ರಾಮಚಂದ್ರಾಯ ನಮಃ ॥



# ಇಪ್ಪತ್ತೊಂದನೆಯ ಸಂಧಿ

## ಜಟಾಯು ಸಖ್ಯ. ಲಕ್ಷ್ಮಣನಿಗೆ ತತ್ವಜ್ಞಾನ ಬೋಧನೆ

ಸೂಚನೆ ॥ ರಾಮನಿದ್ದನು ಪಂಚವಟಿಯ
ಲ್ಲಾ ಮಹಾಮತಿ ಲಕ್ಷ್ಮಣಗೆ ಸ
ಪ್ರೇಮದಿಂ ತಿಳುಹುತ್ತ ತತ್ವಜ್ಞಾನ ಮಾರ್ಗದಲಿ ॥

ಪದ ॥ ಗಿರೀಶ ಕೇಳ್ಳೈ ರಾಮ ಲಕ್ಷ್ಮಣ
ಧರಣಿಸುತೆ ಸಹ ಮಾರ್ಗದಲ್ಲೈತ್ತ
ರೆಘುತ ಕಂಡನು ವೃದ್ಧ ಪಕ್ಷಿ ಜಟಾಯ ಯೆಂಬವನ ॥
ಗಿರಿಯ ಶೃಂಗದವೋಲಿರಲಿಕ
ಚ್ಚರಿವಡುತ ವಿಸ್ಮಯಪಡಲೆಂದನು
ಶರ ಧನುವ ತಾ ತಮ್ಮ ರಾಕ್ಷಸ ಮುಂತೆ ನಿಂತವನು ॥ ೧ ॥

ಭಕ್ಷಿಸುವನಿವ ಋಷಿಗಳನು ತಾ
ಶಿಕ್ಷಿಸುವೆನೀತನನೀಗುತ್ತಲೆ
ಲಕ್ಷ್ಮಣಂಗೆಂದೆಂಬ ಮಾತನು ಕೇಳಿ ಭಯದಿಂದ ॥
ಪಕ್ಷಿ ನಡುಗುತ ರಾಮಗೆಂದನು
ಶಿಕ್ಷಿಸಲಿಕಪರಾಧಿ ತಾನ
ಲ್ಲಕ್ಷಮತೆಯುಳಿ ನಿನ್ನ ಪಿತಗತ್ಯಂತ ಸಖಿ ನಾನು ॥ ೨ ॥

ಕ್ಷಿಪ್ರ ನಾನಲ್ಲಕಟ ರಾಘವ
ಭದ್ರವಾಗಲಿ ನಿನಗತಿಪ್ರಿಯ
ಗೃಧ್ರ ನಾನು ಜಟಾಯು ಯೆಂಬವ ಪಂಚವಟಿಯಲ್ಲಿ ॥

ತಿದ್ದಿರುತ ನಿನಗತಿ ಹಿತದಿ ಸಂ
ಸ್ನಿದ್ಧನಾಗಿಹೆನೇಕೆ ಮಾಡುವೆ
ಕ್ರುದ್ಧವನು ರಘುನಾಥ ತಾನಲ್ಲೆಂದನಾ ವಿಹಗ || ೩ ||

ಯೆತ್ತಲಾನೂ ನೀ ಮೃಗವ ಬೆಂ
ಬೊತ್ತಿ ಲಕ್ಷ್ಮಣ ಸಹಿತಡವಿಗು
ದ್ವೃತ್ತನಾದಾ ಹೊತ್ತು ನಾಸೀ ಜನಕನಂದನೆಯ ||
ಸತ್ತು[1]ವಾಗಿಸಿ ರಕ್ಷಿಸುವೆನೆಂ
ದಿತ್ತಲಿಹನೆನೆ ಕೇಳಿ ವಿಹಗ ಕು
ಲೋತ್ತಮಗೆ ನಸುನಗುತ ಮಗುಳಿಂತೆಂದನಾ ರಾಮ || ೪ ||

ಲೇಸನಾಡಿದೆ ವಿಹಗ ಸಾಧು ಹಿ
ತೈಷಿ ನೀನೆನಗಹುದು ಹತ್ತಿರೆ
ವಾಸವಾಗಿದೆ ಮತ್ಪ್ರಿಯಾರ್ಥದಲೆಂದು ತಕ್ಕವಿಸಿ ||
ತೋಷಿಸುತ್ತವನನುವದಿಸಿ ಜಗ
ದೀಶ ನಡೆವನ ಪಂಚವಟಿಯೆಂ
ಬಾ ಸುಸ್ಥಳಕನುಜ ಸೀತಾದೇವಿಯರು ಸಹಿತ || ೫ ||

ನಡೆದು ಕಂಡರು ಪಂಚವಟಿಯೆಂ
ಬಡವಿಯನು ಸುಸ್ಥಳ ವಿಶಾಲವ
ನೊಡನೆ ಹರಿವಾ ಗೌತಮೀನದಿಯುತ್ತರ ತಟದಿ ||
ಒಡೆಯ ರಾಮಂಗಲ್ಲಿ ತನ್ನಯ
ಮಡದಿ ಸಹಿತಿರೆ ಮನೆಯನೊಂದನು
ಕಡು ಸಹಸಿ ಸೌಮಿತ್ರ ಮಾಡಿದನಾಕ್ಷಣದಲಲ್ಲಿ || ೬ ||

ಕದಳಿ ಫಲ ಸಾಮ್ರಾಳಿ ಖರ್ಜೂರ
ಮೊದಲುಗೊಂಡ ಫಲಾದಿ ಪಾದಪ
ದೊದವಿಯಲ್ಲೇಕಾಂತವಾಸ ನಿರೋಗದುಸ್ಥಳವು ||

---

1 ಸಾ (ಖ)

ಜದಕುಜನ ಸಂಬಾಧೆ ವರ್ಜಿತ
ವದು ಸುರೇಂದ್ರಾಲೋಕದಂತಿರೆ
ಸುದತಿಯೊಡನೆ ವಿನೋದದಿಂದಿರುತಿರ್ದನಾ ರಾಮ || ೭ ||

ನಿತ್ಯ ನಿತ್ಯವು ಕಂದ ಮೂಲಫ
ಲೋತ್ತಮವ ಲಕ್ಷ್ಮಣನು ತಂದೀ
ವುತ್ತ ರಾಮಂಗನುದಿನವು ತತ್ಸೇವೆಯಿಂದಿರುತ ||
ಮತ್ತೆ ರಾತ್ರಿಯಲೊರಗದೇ ಜಾ
ಗ್ರತ್ತಿ [1]ಲಿರ್ದನು ಶರವಿಡಿದು ಕಿರು
ಗುತ್ತ[1] ಲಿರ್ದನು ಪರ್ಣ ಶಾಲೆಯಲನುದಿನವು ಬಿಡದೆ || ೮ ||

ಮಿಂದು ನಿತ್ಯವು ಮೂವರಘಕುಲ
ವೃಂದನಾಶಿನಿ ಗೌತಮಿ ಜಲ
ದಿಂದ ಸುಖದಲ್ಲಿರುತಿರಲು ಕೆಲ ದಿನವನೀ ಪರಿಯ ||
ಒಂದು ದಿನ ಸೌಮಿತ್ರ ನತಮುದ
ದಿಂದಲಣ್ಣನ ಕಂಡನಾತ್ಮಾ
ನಂದದಿಂ ಕುಳಿತಾ ಜಗನ್ಮಯನಾಗಿರಲು ಕಂಡ || ೯ ||

ಹೊಳೆವ ಸೂರ್ಯ ಸಹಸ್ರಕಾಂತಿಯ
ಕಳೆಯೊಡಲ ಚತುರತೆಯನಟ್ಟಿವೆ
ಗಳ ಸುನೋಟದ ನಾಸಿಕಾಗ್ರದ ಬಿಟ್ಟ ಕೆಂಜೆಡೆಯ ||
ಗಳದ ಮೂರೇಖೆಗಳ ವಕ್ಷ
ಸ್ಥಳದ ತುಳಸೀದಳದ ವಲ್ಲೂ
ವಲಿಯ ನಾಭೀ ಹೃದದ ಮಂಗಳ ಮೂರ್ತಿ ರಂಜಿಸಲು || ೧೦ ||

ಚಾರು ದೀರ್ಘ ಭುಜದ್ವಯದ ಸುಕು
ಮಾರ ಗಾತ್ರದ ನಳಿನನೇತ್ರದ
ಚೀರವಸನದ ವಿಮಲಮುಖ ಪಂಕಜ ಮನೋಹರದ ||

---

1 ಯಲ್ಲಿರು ತೀರ್ಥ ಶರ ಪಿಡಿ | ವುತ್ತ (ಖ)

ಮೊರುತಿಗೆ ಬಂದೆರಗಿ ವಿನೆಯದ
ಸಾರ ಭಕುತಿಯಲಾ ಸುಮಿತ್ರನು
ದಾರ ತತ್ತ್ವಾರ್ಥವನು ಬೆಸಗೊಂಡನು ಜಗನ್ಮಯನ ‖ ೧೧ ‖

ಸ್ವಾಮಿ ನಿಮ್ಮನು ಕೇಳುವಿಜ್ಞಾ
ಕಾಮಘನೆನೆಮಗಾವ ಪರಿಯಲಿ
ನಾ ಮುದದಿ ತಿಳಿದಪೆನು ಮೋಕ್ಷೇಕಾಂತ ಸಾಧನವ ‖
ತಾಮರಸದಳನೇತ್ರ ನಿಮ್ಮಿಂ
ದಾಮಹತ್ವವನಲ್ಪವಾಗಿಯೆ
ನೇಮಿಸುವುದೆನಗೊಲಿದು ತತ್ಸಾಧನವ ಸಹಿತೆಂದ ‖ ೧೨ ‖

ಉತ್ತಮ ಜ್ಞಾನವನು ವಿಜ್ಞಾ
ನೋಕ್ತಿಯಿಂ ಸಹಿತವನು ನಿರ್ಮಲ
ಭಕ್ತಿಯನು ವೈರಾಗ್ಯವನು ನೀವಿಂದು ತನಗೊಲಿದು ‖
ವಿಸ್ತರಿಸಬೇಕನ್ಯರಾರು ಮ
ರೆತ್ತ ತಿಳುಪುವರಿಲ್ಲ ಧರೆಯಲಿ
ಸತ್ಯಸಂಧನೆ ಕರುಣಿಸೆನಲಿಂತೆಂದನಾ ರಾಮ ‖ ೧೩ ‖

ಲೇಸನಾಡಿದೆ ತಮ್ಮ ಮೋಕ್ಷಾ
ವಾಸವನು ಹೇಳುವೆನು ಗೌಪ್ಯದ
ರಾಶಿಯೊಳಗತಿ ಗೌಪ್ಯವಾದುತ್ಕೃಷ್ಟ ವಿದ್ಯೆಯನು ‖
ಮೋಸವೋಗದೆ ತಿಳಿಯಲದ ವಿ
ಶ್ವಾಸದಿಂ ಮಾನವರು ಗೆಲುವರು
ದಾಷ ಕಲಿ ಕಲ್ಮಷವನೆಂದನು ರಾಮನನುಜಂಗೆ ‖ ೧೪ ‖

ಮೊದಲು ಮಾಯಾ ರೂಪವನು ಕೇ
ಳಿದರಿನಿಂ ವಿಜ್ಞಾನ ಸಾಧನ
ವಿದಿತವಲ್ಲಿಂ ಜ್ಞಾನವನು ವಿಜ್ಞೇಯವನು ನಿನಗೆ ‖

ಮುದದಲೆಲ್ಲವನೊರೆವೆ ಸಂಕ್ಷೇ
ಪದಲಿ ಯದರಿಂ ಸಕಲ ಬಂಧವ
ನೊದೆದು ನಿಲಬಹುದಾತ್ಮಸುಖಸಾಮ್ರಾಜ್ಯದೊಳಗೆಂದ ‖ ೨೫ ‖

ತಾನದಲ್ಲದ ಹುಸಿಯ ದೇಹವ
ತಾನೆನಾತ್ಮಕವದನು ಮೋಹದಿ
ತಾನೆನಿಪ್ಪಾ ಬುದ್ಧಿಯದುವೇ ಮಾಯೆಯೆನಿಸುವುದು ‖
ತಾನದುವೆ ಸಂಸಾರ ಮೂಲದ
ಲಾನು ವರ್ತಿಸುತಿಹುದು ಮಾಯಾ
ಧೀನ ರೂಪವದೆರಡು ಪೂರ್ವದಲುಂಟು ಕೇಳೆಂದ ‖ ೧೬ ‖

ಆವರಣ ವಿಕ್ಷೇಪ ಶಕ್ತಿಗ
ಳಾ ವಿಗಡ ಮಾಯಾ ಸ್ವರೂಪಗ
ಳಾವರಿಸಿಕೊಂಡಿಹುದು ಮೊದಲೇ ಸ್ಥೂಲ ಸೂಕ್ಷ್ಮಮದಿ ‖
ಕೋವಿದನ ಲಿಂಗಾದಿ ಬ್ರಹ್ಮಾ
ದ್ಯಾ ವಿಧದ ಹೊರಗೊಳಗೆ ತೋರುವ
ಜಾವುಳವೆಯೊಂದರಲಿಯೊಂದೊಂದಾದ ವಿಕ್ಷೇಪ ‖ ೧೭ ‖

ಆವರಣವಾತುಮನನಾವಾ
ಗಾವರಿಸಿಕೊಂಡಿಹುದು ದೇಹದ
ಸೋವೆಯಿಂದ್ರಿಯ ಮನಮುಖಾದಿಗಳಿಂದವಿಂತೆರಡು ‖
ಆವ ಕಲ್ಪನೆಯಿಲ್ಲದಾತ್ಮನು
ಕೇವಲನು ಮಾಯಾ ವಿಕಾರದ
ಲೀ ವಿಧದ ವಿಶ್ವಗಳ ಕಲ್ಪನೆ ತೋರುತಿಹುದೆಂದ ‖ ೨೮ ‖

ಬರಿದೆ ನೇಣಹಿಯೆಂದು ಕಾಂಬಂ
ತರಿಯಲಿಹಿ ಕಲ್ಪಿತವೆ ಹುಸಿಯಾ
ತೆರದಿ ಕೇಳುವ ನುಡಿವ ನೋಡುವ ನೆನೆವುದೆಲ್ಲ ಸಹ ‖

ಬರಿಯ ಹಂಬಲು ಮಾತ್ರವೆಂತೆನೆ
ಮರದೊರಗಿದಗೆ ಕನಸು ಕಂಡೆ
ಚ್ಚರಿಯೆ ಹುಸಿಯುಸವ್ರೋಲು ಮಾಯಾಡಂಬರವಿದೆಂದ || ೧೯ ||

ತಮ್ಮ ತಿಳಿ ಸಂಸಾರವೃಕ್ಷಕೆ
ಹಮ್ಮ ಹಿಡಿದೀ ದೇಹ ಮೂಲವು
ಹಮ್ಮಿಗೂ ತಾ ಮೂಲ ಪುತ್ರ ಕಳತ್ರ ಮಿತ್ರ ಧನ ||
ಹೆಮ್ಮೆಯಾದೀ ದೇಹ ಮೂಲದ
ಸೊಮ್ಮು ತಾನೇ ಪಂಚಭೂತದ
ಧರ್ಮ ಶಬ್ದ ಸ್ಪರುಶ ರಸಗಂಧಂಗಳೆಂಬನಿವೂ || ೨೦ ||

ಭೂತ ಪಂಚಕ ಮನವು ಬುದ್ಧಿ
ಖ್ಯಾತಿ ಹಂಕೃತಿ ಚಿತ್ತವವ್ಯ
ಕ್ತಾ ತೆರದಲಿ ದಶೇಂದ್ರಿಯಂಗಳು ವಿಷಯ ಪಂಚಕವು ||
ವಾತವೈದು ಪ್ರಕೃತಿ ಸಂಗತಿ
ಚೇತನಿಚ್ಛಾದ್ವೇಷ ಸುಖದುಃ
ಖಾತಿಭಯವೆಂಬಿನಿತು ಸಹಿತ ಕ್ಷೇತ್ರವೆನಿಸುವುದು || ೨೧ ||

ಇನಿತು ಕೂಡಿರೆ ದೇಹ ಕ್ಷೇತ್ರವ
ದೆನಿಸಿದೀ ಕ್ಷೇತ್ರದಲಿ ಬೆಳೆಗಳು
ಘನಸುಕೃತ ದುಷ್ಕೃತಗಳಪ್ಪವು ಮೂಡಿದಂದದಲಿ ||
ಮನುಜರಿಗೆ ಭೂಮಿಯಲಿ ಕೃಷಿ ತರು
ಘನಫಲವ ಪಡೆದಲ್ಲದಿದ್ದ[1]ರೆ[1]
ತನಗೆ ತಾನೇ ಬೆಳೆಯದೇಕಾ ಬಿಟ್ಟವೆಂತಂತೆ || ೨೨ ||

ಕ್ಷೇತ್ರವಿದನರಿವವನೆ ಜೀವನು
ಮತ್ತೆ ತಾ ಕ್ಷೇತ್ರಜ್ಞನೆನಿಸುವ
ನುತ್ತಮನೆ ಕ್ಷೇತ್ರಜ್ಞ ಕ್ಷೇತ್ರಗಳೆಂಬೆರಡ ಕಾಂಬ ||

---

1 ಡೆ - (ಖ)

ವಸ್ತುವೇ ಪರಮಾತ್ಮನಕ್ರಿಯು
ಸತ್ಯರೂಪನು ಪರಮನೇ ತಾ
ಭಿತ್ತರದ ಕ್ಷೇತ್ರಜ್ಞನೆನಿಸುವನೆಂದನಾ ರಾಮ || ೨೩ ||

ಹಿಂದೆ ಹೇಳಿದ ಕ್ಷೇತ್ರನಿಕರದ
ನೊಂದು ಸಂಕಲ್ಪಾಭಿಮಾನವ
ಹೊಂದದಿದ್ದಡೆ ಜೀವನೇ ಪರಮಾತ್ಮನೆನಿಸುವನು ||
ಕಂದ ಕೇಳ್ಕೆ ಜೀವನಾತ್ಮನ
ಲೊಂದುವಜ್ಞಾನಾರ್ಥ ಸಾಧನ
ದಂದವನು ಸಂಕ್ಷೇಪದಲಿ ಹೇಳುವೆನು ನಿನಗೆಂದ || ೨೪ ||

ಬಲ್ಲವರು ನೆರೆ ಜೀವ ಪರಮರಿ
ಗೆಳ್ಳನಿತು ಭೇದವನು ಹೊರಿಸರು
ಖುಲ್ಲ ವಿದ್ಯೋಪಾಧಿ ಪರಮಗೆ ಬಂದ ಜೀವತ್ವ ||
ಸಲ್ಲಲಿತವಾಗಿಹುದು ಕೇಳಿ
ನ್ನಿಲ್ಲ ಜೀವನು ಪರಮನಪ್ಪನು
ಅಲ್ಲಿ ವಿದ್ಯೆಯು ಕೆಡಲು ವೊಬ್ಬನೆ ಆತ್ಮ ತಾನಾದ || ೨೫ ||

ಮೊದಲು ನಾ ನಾಮವನೆ ಯೆಲ್ಲವ
ನೊದೆದು ಡಂಭಾಹಂಕೃತಿಯನುಳಿ
ವುದು ಸದಾ ಮೃದು ಮಾತ ನುಡಿಯಲಿ ಮನದಲನ್ಯರಿಗೆ ||
ಕದಕ ನೆನೆಯದೆ ಸರ್ವಭೂತದ
ಲಿದಿಂನಾರಿಗು ನೋವ ಹುಟ್ಟಿಸ
ದೊದಗಿ ಹಿತವನು ಮಾಡುವುದು ಕಾಯಕದಲನವರತ || ೨೬ ||

ಪರರ ಬಾಧೆಯೆ ಪಾಪಪುಣ್ಯವು
ಪರಹಿತವು ಸಕಲಾಗಮದ ಮತ
ಪರವ ಪರದೊಳಗಾರಿಗೂ ದ್ರೋಹವ[1]ನು ಬಗೆಯುವದು[1] ||

1 ನೆಸಗದಿಹುದು (ಖ)

ನಿರತ ನಿರಹಂಕಾರನಾಗಿರು
ಜೆರವು ತನು ಜರೆ ಮರಣ ಬಾಧಾ
ಪರಿಪರಿಯ ರೋಗದಲಿ ದುಃಖದ ರೂಪನೀಂದರಿದು || ೨೭ ||

ಸುಟ್ಟ ವೊಡಲಿದು ಭಸುಮವಾಯ್ತೆನೆ
ನಿಷ್ಠೆಯಳಿದಿಡುಕಿದಡೆ ಕ್ರಿಮಿಗಳ
[1]ಕಟ್ಟವಂತ್ಯದಲಿದ್ದ ಕಾಲವು ಶುಚಿಯೆ ಮಲಮೂತ್ರ ||
ನೆಟ್ಟಿಲೆವು ನರಮಾಂಸ ನರಗಳು
ಕ್ಲಿಷ್ಟ ಕೂದಲು ತೊಗಲು ಕೀವಿನೆ
ಹುಟ್ಟೊರತೆಯಿಂದರಿದು ಬಿಡುವದು ಹಂಕೃತಿಯನೆಂದ || ೨೮ ||

ಪಾತಕದಿ ತನು ತನ್ನ ತನವೆಂ
ಬಾತರಿಸುತನ್ಯರನು ಜರೆಯದೆ
ಭೀತಿಸುತ್ತಿರಬೇಕು ಪರರುಪಹತಿಗೆ ತನು ಮನದಿ ||
ನೀತಿಯಿಂ ದಯೆ ಧೈರ್ಯ ಭಾವ
ಪ್ರೀತಿ ಸದ್ಗುಣ ಧನಸಹಾಯ
ವ್ರಾತ ಸೇವೆಯು ಸಕಲ ಭಕುತರಲಿರಗುತಿರಬೇಕು || ೨೯ ||

ತನು ಮನೋವಾಕ್ಕಾಯ ದಂಡದ
ಲನವರತ ಯಿರಬೇಕು ವಿಷಯವ
ನೆನೆಯುದೇನುವ ಬಯಸದೇನುವ ಕೋಪ ಮದ ಚಿಂತೆ ||
ಜನಿಸದಾನೆಂದೆಂಬ ಹಮ್ಮಿನೆ
ಕೊನೆ ಮುರಿದು ಭವಪಾಶವಿಲ್ಲದೆ
ನೆನೆವುತಿರಲೆನ್ನುವ ಮನೋದಂಡವದು ಕೇಳೆಂದ || ೩೦ ||

ಅನ್ಯವಾರ್ತಾ ಲಾಭವಿಲ್ಲದೆ
ಕರ್ನನಿಷ್ಠುರವಾಗಿ ನುಡಿಯದೆ
ಮುನ್ನನಾಗಿದ್ದುಳಿದು ನುಡಿಯಲಿ ನನ್ನ ಮಹಿಮೆಯನು ||

1 ಕೆ (ಖ)

ವರ್ಣಿಸುತ್ತನವರತನುಪನಿಷ
ದ್ವ್ಯನ್ನತ ಸ್ತೋತ್ರವನು ಮಾಡು
ತ್ತೆನ್ನ ನಾಮವನಿರದೆ ಕೀರ್ತಿಸುತಿರೆ ವಚನ ದಂಡ ॥ ೩೧ ॥

ಆವಗೂ ಬಾಧೆಯನು ಮಾಡದೆ
ದೇವ ಗುರು ವಿಪ್ರರನು ಪೂಜಿಸು
ತಾವ ಕಾಲಕು ಶೌಚವಾರ್ಜವಧರ್ಮ ಕರ್ಮವನು ॥
ಸಾವಧಾನದಿ ಬಿಡದೆ ಸತಿಯರ
ಭಾವ ಭಾವವ ತೊರೆದು ವಿಷಯವ
ಸೇವಿಸದ ಸದ್ಬ್ರಹ್ಮಚರ್ಯದಲಿಹುದೆ ತನು ದಂಡ ॥ ೩೨ ॥

ಪುತ್ರ ಮಿತ್ರ ಭ್ರಾತೃ ಪಿತೃಧನ
ಮತ್ತಕಾಶಿನಿ ಬಂಧು ಬಾಂಧವ
ವೃತ್ತಿ ಮೊದಲಾದಾಗು ಹೋಗನು ಹರುಷ ಶೋಕವನು ॥
ಚಿತ್ತದಲಿ ಮಾಡದೆ ಸಮಾಧಿ ನಿಜ
ತತ್ವ ಚಿಂತಕನಾದ ಗುರುವಿನ
ಹತ್ತಿರೋಲಗಿಸುವುದು ನಿಷ್ಕಲುಷತೆಯಲನವರತ ॥ ೩೩ ॥

ಗುರುವ ಹರಿಹರ ಬೊಮ್ಮರಂದದಿ
ನಿರುತ ಕಾಣುತ ತನ್ನ ವಿತ್ತವು
ಶರಿರ ಪ್ರಾಣವು ಸಹಿತ ಸೇವಾರ್ಥದಲಿಯರ್ಚಿಸುತ ॥
ಕರಗಿದಂತಃಕರಣದಿಂದವೆ
ದುರುಳತನವನು ಬಿಟ್ಟು ಭೂತಿಯು
ಭರದಿ ಸೇವೆಯು ಮಾಡಿ ತಿಳಿವುದು ತತ್ವವಿದ್ಯೆಯನು ॥ ೩೪ ॥

ನಾರಿಯರ ಮೊಗವೆತ್ತಿ ನೋಡದೆ
ಘೋರ ದುರ್ವಾರ್ತಾ ಸಮೀಪಕೆ
ಸೇರದತಿ ನಿಷ್ಠುರದ ಚತುರ ಚಕೋರ ಮೂರುಖರ ॥

ಊರ ಹೊದ್ದದೆ ಸತ್ಯ ಶುದ್ಧಾ
ಚಾರ ಬಾಹ್ಯಾಭ್ಯಂತರದ ಶುಚಿ
ತಾರತಮ್ಯವ ಮರೆಯದಿರಬೇಕೆಂದನಾ ರಾಮ || ೩೫ ||

ಪುಣ್ಯ ದೇಹದಿ ಪುಣ್ಯ ವನದಲಿ
ಪುಣ್ಯ ತೀರ್ಥಕ್ಷೇತ್ರದಲಿ ಪರ
ಪುಣ್ಯ ಪೂರುಷರಿದ್ದ ಸುಸ್ಥಳ ಪುಣ್ಯ ಭೂಮಿಯಲಿ ||
ತಣ್ಣನಾಗಿಯೆ ದುರ್ವಿಷಯಗಳ
ನಣ್ಣನಾತ್ಮಜ್ಞಾನ ಶಾಸ್ತ್ರವ
ಬಣ್ಣಿಸುತ ಕೇಳುತ್ತಿಹುದು ತನ್ನಮಳ ನಿಜ ಪಥವ || ೩೬ ||

ರಾಮನೇ ತನಗೊಡೆಯನಾತ್ಮಾ
ರಾಮನಾಗಿಹನೊಳ[1]ಗು[1] ಹೊರಗೆಯು
ಭೂಮಿ ಮೊದಲಹ ಪಂಚಭೂತಾತ್ಮಕನು ತಾನೆಂದ ||
ಪ್ರೇಮದಿಂದೆನ್ನನವನೆ ಭಜಿಸುತ
ನಾಮ ರೂಪದ ಬಲೆಗೆ ಬೀಳದ
ಸೀಮೆಯೇ ತಾ ಜ್ಞಾನ ಮಿಕ್ಕನದೆಲ್ಲವಜ್ಞಾನ || ೩೭ ||

ದೇಹವಿಂದ್ರಿಯ ವಿಷಯ ಪ್ರಾಣ ಸ
ಮೂಹದಂತಃಕರಣ ಜೀವನು
ಮೋಹ ಬುದ್ಧಿಗಳೆಂದ ಮೀರಿದ ಸಪ್ತವಿಂಶಕನು ||
ಕಾಹುರದ ಕಲ್ಪನೆಗೆ ಬೆರಸದೆ
ಗಾಹದದಿ ನಿಜ ನಿತ್ಯ ನಿತ್ಯ ನಿ
ರೀಹ ಚಿನ್ಮಯ ವಸ್ತು ತಾನೆಂದರಿವುದೇ ಜ್ಞಾನ || ೩೮ ||

ಇಂತರಿವುದೇ ನನ್ನ ಮತ ನಿ
ಶ್ಚಿಂತ ನಿರ್ಮಲನೇಕನದ್ವಯ
ಶಾಂತ ಸರ್ವೋಪಾಧಿ ಹೀನಾಂತಃಕರಣ ಹೀನ ||

---

1 ಗೆ (ಖ)

ಅಂತರಹಿತನವದಾದಿ ರಹಿತ ನಿ
ರಂತ ನಿರ್ವ್ಯಾಪಾರ ನಿರ್ಗುಣ
ವಂತುವಿಂತೆಂತೆನಲು ಬಾರದ ನಿಜವೆ ವಿಜ್ಞಾನ || ೩೯ ||

ಸತ್ತದಲ್ಲದಸತ್ತದಲ್ಲದ
ಚಿತ್ತದಲ್ಲದ ಮರವೆಯಲ್ಲದ
ಯೆತ್ತಲೂ ಪದ ಪಾಣಿ ಶಿರ ದೃಗು ಕರ್ಣ ನಾಸಿಕವು ||
ಸುತ್ತಿಹುದು ಬ್ರಹ್ಮಾಂಡ ಕೋಟಿಯ
ನೊತ್ತಿ ನೋಡಲು ಕಾಣದಾರಿಗು
ಹತ್ತಿರಿಹುದಾವಾಗಲದುವೇ ಜ್ಞೇಯ ಕೇಳೆಂದ || ೪೦ ||

ಸರ್ವವೂ ತಾನಾಗಿರುತ್ತಿರೆ
ಸರ್ವ ಲೋಪವು ಹೊರದು ತೋರ್ಪುದು
ಸರ್ವ ಕಾಲದಲರಿಯಬಾರದು ಸಕಲದೊಳಗಿದ್ದು ||
ಖರ್ವಿಸುವಿದೀ ಸಕಲ ವಿಷಯವ
ನಿರ್ವಿಕಾರದ ವಿಷಯವಿಲ್ಲದೆ
ಸರ್ವತಪ್ರತಿಮಾನವಾಗಿಯೆ ಚಲಿಸದಾ ಜ್ಞೇಯ || ೪೧ ||

ಸಕಲವನು ತಾ ಬೆಳಕುತಿಪ್ಪುದು
ಸಕಲ ತೇಜವು ತನ್ನ ಬೆಳಗಲು
ಸ್ವಕೃತ ನೆರೆಯದು ಸ್ವಪ್ರಕಾಶಾಖಂಡವಾಗಿಹುದು ||
ವಿಕಸವದು ನಿಜವೇಕವದ್ವಯ
ಸುಕೃತಿಗಳಿಗದು ಸಚ್ಚಿದಾನಂ
ದಕುಟಲಜ್ಞಾನ ಸ್ವರೂಪವು ತಮ್ಮ ಕೇಳೆಂದ || ೪೨ ||

ಸಂಗರಹಿತವನಾಮಯವದಾ
ರಿಂಗರಿಯದ ಸ್ವಪ್ರಕಾಶವು
ಲಿಂಗಭೇದ ವಿಹೀನ ಬುದ್ಧಿಯ ವೃತ್ತಿಗೊಳಗಲ್ಲ ||

ಭಂಗವಿಲ್ಲಾನಂದ ರೂಪ ನಿ
ರಂಗ ವಸ್ತುವನರಿವುದೆಂತೆನೆ
ಹಿಂಗದಾತ್ಮಜ್ಞಾನದಿಂದಜ್ಞೀಯುವದು ಸಾಧ್ಯ ॥ ೪೩ ॥

ಉತ್ತಮಾಚಾರ್ಯೋಪದೇಶದ
ಯುಕ್ತಿಯಿಂದುಪನಿಷದ ವಾಕ್ಯದ
ತತ್ವಮಸಿಯರ್ಥ ಪ್ರಮಾಣದಿ ಜೀವ ಪರಮರಲಿ ॥
ವ್ಯರ್ಥದಾರೋಪಿತದ ವಾಚ್ಯವ
ಮಿಥ್ಯೆಯೆಂದದ ಕಳೆದು ಲಕ್ಷ್ಯವ
ಜೊತ್ತಿಸುತ್ತೈಕ್ಯವನು ಮಾಳ್ಪುದು ವಿರತಿ ಬಲದಿಂದ ॥ ೪೪ ॥

ಜೀವನಲ್ಲಜ್ಞತೆಯು ದುಃಖಿತ
ವಾವಗಂ ಭಯ ಚಿಂತೆ ಮೊದಲಾ
ದಾ ವಿಧದ ವಾಚ್ಯವನು ಬಿಟ್ಟೀಶ್ವರನೆಲುನ್ನತದ ॥
ಭಾವ ಸರ್ವಜ್ಞತ್ವ ಮೊದಲಾ
ದಾವ ಗುಣವೂ ನಿಜವದಲ್ಲೆಂ
ದೇ ವಿವೇಕಿಸೆ ಶುದ್ಧ ಚೈತನ್ಯವನೆ ಲಕ್ಷಿಪುದು ॥ ೪೫ ॥

ಕನಸು ಕಂಡದರೊಳಗೆ ಬೆವರುವ
ಮನುಜಗೆಚ್ಚರಿಸುವವೊಲೀತಗೆ
ನಿನಗೆ ಹಂಬಲೆನಿಪ್ಪವೋಲೀ ಜೀವವಜ್ಞತೆಯ ॥
ಹೊನಲ ಹುಸಿಗಳೆದಾತ್ಮ ನಿರ್ಗುಣ
ಚಿನುಮಯಾವ್ಯಯನೆಂದು ಶ್ರುತಿಯಾ
ತ್ಮನಲಿ ಬಿಡದೈಕ್ಯವನು ಮಾಡುವವೌಪಚಾರದಲಿ ॥ ೪೬ ॥

ತತ್ವಮಸಿಯರ್ಥವನು ಜೀವನೆ
ನಿತ್ಯವಾದಾತುಮನೆ ನೀನೆಂ
ದುತ್ತಮಾರ್ಥವ ಪೇಳಿತದನರಿವುದೆ ಸಕಲ ಸಾರ ॥

ಚಿತ್ತ ಸಂಶಯವಳಿದು ತಾನೇ
ನಿತ್ಯ ನಿರುಪಮನಾಗಿ ನಿಜ ನಿ
ರ್ಮುಕ್ತ ಪರಮಾನಂದ ನಿಜಸುಖ ಪೂರ್ಣನಹುದೆಂದ ॥ ೪೭ ॥

ಇದುವೆ ಮೋಕ್ಷದ ರೂಪವೆಂದೆನು
ಸದಮಲನೆ ಸೌಮಿತ್ರಿ ನಿನಗ
ಭ್ಯುದಯ ವಿರತಿ ಜ್ಞಾನ ವಿಜ್ಞಾನವು ಸಹಿತವಾದ ॥
ವಿದಿತವೆನ್ನಯ ನಿಜವನಿದು ದೊರ
ಕದು ಕಣಾ ಮದ್ಭಕ್ತಿ ಶೂನ್ಯಗೆ
ಯಿದಕೆ ದೃಷ್ಟಾಂತವನು ನೀ ಕೇಳೆಂದನಾ ರಾಮ ॥ ೪೮ ॥

ರಾತ್ರಿಯಲಿ ಬೇಕೆಂಬ ವೊಡವೆಯು
ನೇತ್ರವಿದ್ದರು ದೀಪವಿಲ್ಲದೆ
ನೇತ್ರಗೋಚರವಾಗದಂದದನಾತ್ಮನರಿಯಲಿಕೆ ॥
ಶಾಸ್ತ್ರವಿದ್ದರು ನನ್ನ ಭಕುತಿಯು
ಸೂತ್ರವಿಲ್ಲದೆ ಕಾಣದಾತ್ಮನ
ನಾತ್ರ ಸಂಶಯ ಭಕ್ತಿ ಮೂಲವದೆಲ್ಲವಕ್ಕೆಂದ ॥ ೪೯ ॥

ನನ್ನ ಪದಯುಗ ಭಕ್ತಿ ಜನಿಸುವ
ಡಿನ್ನು ಕಾರಣವನ್ನು ಕೇಳ್ಳೆ
ನನ್ನ ಭಕುತರ ಸಂಗ ತತ್ಸೇವಾ ನಿರಂತರದಿ ॥
ನನ್ನ ಮಹದೇಕಾದಶೀ ವ್ರತ
ದುನ್ನದುಪವಾಸಾದಿ ಜಾಗರ
ತಿನ್ನ ಪೂರ್ವಾಲೋಕನದಿ ಮದ್ಭಕ್ತಿ ಜನಿಸುವುದು ॥ ೫೦ ॥

ನನ್ನ ರಾಮಾಯಣ ಕಥೆಯನಾ
ಕರ್ಣನವ ಮಾಡುತ್ತವನುದಿನ
ವರ್ಣಿಸುತ್ತೆನ್ನಮಳ ಮಹಿಮೆಯ ಪಠಿಸಿಯನ್ಯರಿಗೆ ॥

ಜೆನ್ನ ವ್ಯಾಖ್ಯಾನವನು ಮಾಡು
ತ್ತಿನ್ನನೇ ಪೂಜಿಸುತ ನಿಷ್ಠೆಯು
ಲೆನ್ನ ನಾಮಾವಳಿಯ ಸಂಕೀರ್ತನವ ಮಾಡುವದು || ೫೧ ||

ಎನ್ನ ಭಕ್ತರ ಸಂಗದೊಳಗಿ
ದ್ದನ್ಯ ವಿಷಯವನುಳಿದು ನೆನೆವು
ತ್ತಿನ್ನನೇ ನಮಿಸುತ್ತ ಬಲಬರುತೆನ್ನ ಮಂದಿರವ ||
ಎನ್ನ ಚರಣಾರ್ಪಣವೆನುತೊತ್ತಿ
ದುನ್ನತದ ಕರ್ಮಗಳ ಮಾಡು
ತ್ತಿನ್ನನೇ ಸಕಲದಲಿ ಕಾಂಬುದು ತನ್ನ ನಿಜ ಭಕುತಿ || ೫೨ ||

ಸಾಧು ಸಂಗವೆ ತನ್ನ ಭಕುತಿಯ
ನಾದರದಲನ್ಯರನು ಹೊದ್ದದೆ
ಸಾಧಿಸುವುದೆನ್ನಲ್ಲಿ ಭಕುತಿಯು ಜನಿಸಲನವರತ ||
ಸಾಧಿಸವುದೆನ್ನಲ್ಲಿ ಬಳಿಕವ
ಗೀ ಧರೆಯಲೀ ಜ್ಞಾನ ವಿಜ್ಞಾ
ನಾದಿ ವಿರತಿಯಲವನು ಜೀಗದಿ ಮುಕುತನಹನೆಂದ || ೫೩ ||

ಉತ್ತಮರ ಸಂಗದಲಿ ಪಾತಕ
ಹೊತ್ತುವುದು ಪಾತಕವಳಿಯೆ ಸ
ದ್ವೃತ್ತನಪ್ಪನು ತೊಲಗುವುದು ದುರ್ವಿಷಯ ಬಳಿಕವಗೆ ||
ಉತ್ತಮದ ಮದ್ಭಕ್ತಿ ಬಂದು ವಿ
ರಕ್ತಿ ವಿಜ್ಞಾನವನು ವಡೆದು ವಿ
ಮುಕ್ತನಹೆಯಲ್ಲವಕೆ ಮಿಗಿಲೆನಿ ಸಾಧುಜನ ಸಂಗ || ೫೪ ||

ಹೇಳಿದೆನಲ್ಲೈ ತೆ ೨ ತನ್ನನು
ಕೇಳಿದಪ್ರಶ್ನಾನುಸಾರವ
ಹೇಳಲೇಲೆನ್ನವಕೆ ಕಲಶವು ತನ್ನ ಪದ ಭಕುತಿ ||

ಹೇಳದಿರು ಮದ್ಭಕ್ತಿಯಿಲ್ಲದ
ಖೂಳರಿಂಗದನಾವ ಕಾಲಕು
ಹೇಳುವುದು ಕರೆಕರೆದಿದನು ಮದ್ಭಕ್ತರಿಂಗೆಂದ || ೫೫ ||

ಎನ್ನೊಳೈಕ್ಯದ ಭಕ್ತಿಯುಳ್ಳಾ
ನನ್ನ ಚೇತನ ಶಾಂತರಾಗಿ
ದ್ದೆನ್ನ ಸೇವಾತತ್ಪರರನೆನ್ನ ಜ್ಞಾನ ತತ್ಪರರ ||
ಅನ್ನುದಿನ ಸೇವಿಸುತ ಪೊಡಸಿರ
ಲೆನ್ನನೇ ಸೇವಿಸದವರು ಸಂ
ಪನ್ನ ಮೋಕ್ಷವಪರ್ಗೇ ಕರಗತವಾಗಿ ಕಾಂಗೆಂದ || ೫೬ ||

ಅರಿದನು ಪಠಿಸುವರು ಶ್ರದ್ಧಾ
ಸಾರ ಹೃದಯದಲನವರತ ಬಿಡ
ದೀ ರಹಸ್ಯವನವರು ಸಾಕ್ಷಾತ್ತೆನ್ನ ಕರುಣದಲಿ ||
ಘೋರದಜ್ಞಾನಾಂಧ ಪಟಲ ವಿ
ಕಾರ ಮಲವನು ತೊಳೆದು ಪಡೆವರು
ದಾರ ಮೋಕ್ಷಾನಂದ ಸಾಮ್ರಾಜ್ಯವನು ಕೇಳೆಂದ || ೫೭ ||

ಸಂದವಿಲ್ಲಿಪ್ಪತ್ತುಮೂರೆನೆ
ಸಂಧಿ ಪದವೇಳೆಂಟು ಲಕ್ಷ್ಮಣ
ಗೆಂದ ತತ್ವ ರಹಸ್ಯವಿದನೋದಿದಡೆ ಭಕುತಿಯಲಿ ||
ಪೊಂದೆ ಮನದಿಂ ಕೇಳಿಲತಿ ಮುದ
ದಿಂದ ದೇವರು ಕಾವ ರಾಮು ಮು
ಕುಂದ ಗುರು ನಿತ್ಯಾತ್ಮ ಲಕ್ಷ್ಮಿನೃಸಿಂಹ ಸಲಹುವನು || ೫೮ ||

ಅಂತು ಸಂಧಿ ೨೩ ಕ್ಕೆ ಪಂ ೧೦೧೨ ಕ್ಕೆ
ಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ



§ ಶ್ರೀ ರಾಮಚಂದ್ರಾಯ ನಮಃ §



# ಇಪ್ಪತ್ನಾಲ್ಕನೆಯ ಸಂಧಿ

**ಶೂರ್ಪನಖಿಯ ಮೂಗ್ಕೊರಸಿದ್ದು ಖರದೂಷಣರ ಸಾವು**
**ಲಂಕೆಯು ರಾವಣನಲ್ಲಿ ದೂರಿದ್ದು**

ಸೂಚನೆ ॥ ಮೂಗೊರಸಿ ಖರದೂಷಣರ ನೆಕೆ
ನೀಗಿ ರಾಮಾಸ್ತ್ರದಲಿ ಲಂಕೆಗೆ
ಹೊಗಿ ದೂರಿದಳೂರಿದಳು ಕಾಮಾಸ್ತ್ರದಲಿ ಖಳನೆ ॥

ಪದ ॥ ಬಾಲೆ ಕೇಳಾ ಪಂಚವಟಿಯಲಿ
ಲೋಲಲೋಚನೆ ಲಕ್ಷ್ಮಣನು ಸಹ
ಲೀಲೆಯಿಂದಿರೆ ರಾಮನಾ ಕಾಲದಿ ಮಹಾಟವಿಯ ॥
ಕಾಳ ರಾಕ್ಷಸಿ ಕಾಮರೂಪಿಣಿ
ಪಾಲಿಸುತ ವನದಲಿ ನಿವಾಸದಿ
ಖೂಳೆಯತಿ ಬಲವಂತೆ ಯಿದ್ದಳು ಜನದ ಮಧ್ಯದಲಿ ॥೧॥

ಒಂದು ದಿನ ಗೌತಮಿಯ ತೀರಕೆ
ಬಂದು ಕಂಡಳು ಪಂಚವಟಿಯ
ಲ್ಲಿಂದು ಹತ್ತಿರೆ ರಾಮ ಶ್ರೀಚರಣಾಬ್ಜ ಹೆಜ್ಜೆಗಳ ॥
ಚಂದವಾಗಿರೆ ವಜ್ರಯವಲತೆ
ಯಿಂದ ಪದ್ಮಾಂಕುಶ ಸುರೇಖಾ
ಸೌಂದರವ ಕಾಣುತ್ತ ಕೆಡೆದಳು ಕಾಮ ಮೂರ್ಛೆಯಲಿ ॥೨॥

ರಾಮಗೆಂದಳು ಬಂದು ರಕ್ಕಸಿ
ಸೋಮಸನ್ನಿಭ ವದನ ನೀನಾ
ರೀ ಮಹಾಶ್ರಮವೇಕೆ ಜಟೆ ವಲ್ಕಲವ ಹೊತ್ತಿಲ್ಲಿ ||
ನೇಮದಿಂದಿರಲೇಕೆ ನನ್ನಯ
ನಾಮ ಬಲ್ಲೈ ಶೂರ್ಪಣಖಿಯತಿ
ಕಾಮರೂಪಿಣಿ ರಾವಣಾಖ್ಯ ಮಹಾ ದನುಜನನುಜೆ || ೩ ||

ಖರನೆನಿಪ ಮದ್ಭ್ರಾತೃ ಸಹಿತವೆ
ಚರಿಸುತಿಹೆನೀ ವನದಿ ದೈತ್ಯೇ
ಶ್ವರನ ನೇಮದಲಿಲ್ಲಿ ಮುನಿಗಳ ನಾನು ಭಕ್ಷಿಸುತ ||
ನರರನೊಬ್ಬರನುಳುಹಿಸದಹೊಳ
ಗಿರವ ಮಾಡಿದಿರಾಗ ನೀನತಿ
ಗುರುವನಾಗಿಹೆ ರೂಪದಿಂ ನುಡಿ ಜಾಣ ನೀನೆನಲು || ೪ ||

ಎನಲು ನುಡಿದನಯೋಧ್ಯ ರಾಯನ
ತನಯ ರಾಮಾಂಹಯನು ತನ್ನಯ
ವನಿತೆ ಯಿವಳತಿ ಚೆಲುವೆ ಸೀತಾನಾಮ ಜನಕಸುತೆ ||
ಅನುಜನೀತನು ಲಕ್ಷ್ಮಣಾಂಕನು
ಮನುಮಥೋಪಮನೀತ ನವ್ಮ
ನ್ನಿನಗೆ ಕೃತ್ಯಯನುಕ್ಕಡುಸುರೆಂದನು ರಘೂತ್ತಂಸ || ೫ ||

ಇಂತೆನಲು ಕೇಳುತ್ತ ಕಾಮನ
ಕೊಂತ ಮರುವೊನೆಗೊಂಡು ನಡೆದಳು
ಕಾಂತನಾರೈ ರಾಮ ರಮಿಸೆನ್ನುವನು ಗಿರಿವನದಿ ||
ಕಂತು ನನ್ನನು ಕಾಡುತೈದನೆ
ಮುಂತೆ ನಿನ್ನನು ಕಂಡೆನಲು ಸಿರಿ
ಕಾಂತ ಸೀತೆಯ ನೋಡಿ ನಗುತಿಂತೆಂದನಾ ಖಳೆಗೆ || ೬ ||

ಏನ ಹೇಳಲಿ ಕಾಂತೆ ತನ್ನೀ
ಮಾನಿನಿಯು ಹತ್ತಿರೆ ಯಿಹಳು ತಾ
ನೇನುವಗಲುವಳಲ್ಲ ಯಿವಳಿಗೆ ಸವತಿ ನೀನಾಗಿ ||
ಏನನೆಂಬಳು ದುಃಖಿಸುವಳೋ
ದೀನೆ ಬಳಿಕದು ಗುಣವಿ ಹೊರಗಿಹ
ದಾನವಾಂತಕ ತನ್ನ ತಮ್ಮನ ವರಿಸು ಹೋಗೆಂದ ||೭||

ನಿನ್ನ ರೂಪವ ಕಂಡು ಬರಿದೇ
ಚಿನ್ನೆ ಬಿಡುವೆನೆ ನಾವು ಹೋಗಾ
ತನ್ನಸುಜನೆಡೆಗೆನಲು ಪೋದಾ ದುರುಳೆ ಲಕ್ಷ್ಮಣಗೆ ||
ತನ್ನೊಡನೆ ರಮಿಸೇಳು ಬಾರೈ
ನಿನ್ನ [1]ಹಿ[1]ರಿಯನ ಮಾತು ಸಲಿಸೆನೆ
ಖಿನ್ನನಾಗುತ ನೋಡಿ ಲಕ್ಷ್ಮಣನೆಂದಳವಳೊಡನೆ ||೮||

ಹೇಳಿಕೆಗೆ ಹೊರೆಯಲ್ಲ ರಾಘವ
ನಾಳಲಾ ತಾ ತನಗೆ ಸೋತ್ಸೈ
ಬೋಳು ಮಂಡೆಯ ವೋಲು ರಾಮಗೆ ತೊತ್ತು [2]ನಾನೆನಲು[2] ||
ನಾಳ್ಗೈತಹಬೇಕು ಅದರಿಂ
ಹೇಳಿದವನನೆ ವರಿಸು ನಿನಗಾ
ಮೇಲೆ ರಾಮಾಜ್ಞೆಯಲಿ ಕೃತ್ಯವ ಮಾಳ್ಪೆ ನಾನೆಂದ ||೯||

ಎನಲು ಕೇಳುತ ರಾಮನಲ್ಲಿಗೆ
ದನುಜೆ ಬಂದಾ ದುಃಷ್ಟೆ ನುಡಿದಳು
ಮನದ ಕೋಪದಿ ರಾಮ ತನ್ನುವನೇಕೆ ಭ್ರಮೆಗೊಳಿಸಿ ||
ಮನವ ನೋಡುವೆ ನಿನ್ನ ಸೀತೆಯ
ಮನಕತಕೆ ಬೆದರದಿರವಳ ನಾ
ದನುಜೆಯಲ್ಲವೆ ಕ್ಷಣಕೆ ನುಂಗುವೆನೆನುತಲಟ್ಟಿದಳು ||೧೦||

---

1 ಪಿ (ಕ) 2 ನೀನಾಗಿ (ಖ)

ಘೋರ ವಿಕಟಾಕಾರೆಯುಟ್ಟಲು
ದಾರಿಯನು ಕಾಣುತ್ತ ರಾಮ
ಪ್ರೇರಿತದಲಾಕ್ಷಣವೆ ಖಡ್ಗದಲವಳ ಕಿವಿಮೂಗ ||
ಕ್ರೂರಲಗಿನಲಿ ಕತ್ತರಿಬಿಟ್ಟನು
ವೀರ ಲಕ್ಷ್ಮಣ ಸುರಿವ ನೆತ್ತರ
ಧಾರೆಯಲಿ ಮರಲುತ್ತ ಹೋದಳು ಖರನೆಡೆಗೆ ದನುಜೆ ||೧೧||

ನೆತ್ತರಿನ ಮುಸುಡಿನಲೊರಳಿ ಹೊರ
ಳುತ್ತಿರಲು ನೆಲದಲ್ಲಿ ಖರ ಕಾ
ಣುತ್ತ ನುಡಿದನು ಖರತರಾಕ್ಷರದಿಂದ ಗರ್ಜಿಸುತ ||
ಮತ್ತಿದೇನಾಯ್ತಾರು ಮೂಗನು
ಕತ್ತರಿಸಿದರು ಕಿವಿ ಸಹಿತ ನೆರೆ
ಮೃತ್ಯುವಿನ ಬಾಯೊಳಗೆ ಹೊಗಲುದ್ಯೋಗವಾಯ್ತೆಂದ ||೧೨||

ಹೇಳವರನೀಕ್ಷಣದಿ ನೋಡಾ
ಕಾಲನನು ಕಾಣಿಸುವೆನೆಂದೆನೆ
ಖೂಳೆ ನುಡಿದಳು ರಾಮ ಲಕ್ಷ್ಮಣ ಸೀತೆಯೆಂಬವರು ||
ಹೋಳುಮಾಡಿದರಿಂದು ವನದಲಿ
ಪಾಳಯವ ಗೌತಮಿಯ ತಟದಲಿ
ಲೀಲೆಯಿಂದಿಹರೀಗ ಹೇಳುವೆನೆಂದಳಾ ದನುಜೆ ||೧೩||

ವೀರನಾದಡೆ ನೀನು ದೈತ್ಯಕು
ಮಾರನಾದಡೆಯವರ ಕೊಲ್ಲು ತಾ
ನೋರುವನು ತನ್ಮಾಂಸ ರುಧಿರವ ಕುಡಿವೆನಲ್ಲದಡೆ ||
ಸೇರುವೆನು ಯಮಸದನಕೀಗಳೆ
ಗೋರೆಯನು ಬಿಗಿದನಲು ಖರ ಕಾ
ಹೇರಿದತಿ ರೋಷಗಳಲೆದ್ದನು ಗದ್ದುಗೆಯನೊದೆದು ||೧೪||

ಖಳ ಕೆರಳಿ ಹದಿನಾಲ್ಕು ಸಾವಿರ
ಬಳಗ ದೈತ್ಯರ ನೆರಹಿಕೊಂಡ
ಗ್ಗಳೆಯ ಭೀಮ ಪರಾಕ್ರಮರನೆತ್ರಿಶಿರ ದೂಷಣರ ||
ಕೆಳೆಯಲೈತಂದಾ ಖಳನು ನೆರೆ
ಬಳಸಿ ರಾಮಾಶ್ರಮವ ಮುತ್ತಿದ
ನೊಳಗುಮಾಡಿದನೇಕ ಶಸ್ತ್ರಾಸ್ತ್ರವನು ನೆರೆ ಮುಸುಕಿ || ೧೫ ||

ಕೇಳಿ ಕೋಳಾಹಳದ ರವವನು
ಹೇಳಿದನು ಲಕ್ಷ್ಮಣಗೆ ರಾಮನು
ಕಾಳ ರಕ್ಕಸ ಪಡೆಯ ಶಬ್ದವ ತಿಳಿದೆಯೈ ನೀನು ||
ಕಾಳಗವು ತನಗೀಗ ದೈತ್ಯರ
ಮೇಲೆ ಬಿದ್ದುದು ನೀನು ಸೀತಾ
ಲೋಲನೇತ್ರೆಯನಿಂತಿರಿಸು ಕರೆದೊಯ್ದು ಗುಹೆಯೊಳಗೆ || ೧೬ ||

ಘೋರ ರಾಕ್ಷಸರೆಲ್ಲರನು ಸಂ
ಹಾರವನು ಮಾಡುವೆನು ನಿಮಿಷಕೆ
ನಾರಿಯನು ರಕ್ಷಿಸು ಗಿರಿಯಲೆನ್ನಾಣೆ ಹೋಗೆನಲು ||
ಶ್ರೀರಮಣನಾಜ್ಞೆಯಲಿ ಸೀತಾ
ನಾರಿಯನು ಗಂಹರದಿ ಯತ್ನದಿ
ಸೇರಿಸುತ ಕಾಯ್ದಿದ್ದನತಿ ದೂರದಲಿ ಜಾನಕಿಯ || ೧೭ ||

ಬದ್ಧಿಸುತ ಪರಿಕರದ ಚಾಪವ
ತಿದ್ದಿ ನಿಷ್ಠುರನಾದ ಜಯವಡೆ
ದದ್ವಯನು ತೂಣೀರವಕ್ಷಯ ಬಾಣವನು ಕೊಂಡು ||
ಭದ್ರಬಲ ಪರಮಾತ್ಮನೈತರ
ಲದ್ರಿಸನ್ನಿಭರಾದರ್ ಮುಸುಕಿದ
ರದ್ಭುತದ ತರುಶಿಲೆ ಮಹಾಸ್ತ್ರವ ಕರೆವುತುರವಣಿಸಿ || ೧೮ ||

ಕೊಚ್ಚಿದನು ತಿಲಶದವೊಲನಿತವ
ನೆಚ್ಚನೇಕ ಸಹಸ್ರ ಶರದಲಿ
ಬಿಚ್ಚಿದನು ದಾನವರನೆಲ್ಲರನೊಂದು ನಿಮಿಷದಲಿ ||
ಕೆಚ್ಚೆದೆಯ ಖರ ತ್ರಿಶಿರ ದೂಷಣ
ದುಶ್ಚರಿತ್ರರ ಕಾಲನೂರಿಂ
ಗಚ್ಯುತನು ನೆರೆ ಕಳುಹಿದನು ಪ್ರಹರಾರ್ಧ ಮಾತ್ರದಲಿ || ೧೯ ||

ಸೀತೆ ಲಕ್ಷ್ಮಣರೈದಿದರು ರಘು
ನಾಥನೆಡೆಗೈತಂದು ದನುಜ
ವ್ರಾತ ದಳವನು ಕಂಡು ವಿಸ್ಮಯದಿಂದ ಹರುಷದಲಿ ||
ಭೂತಳಾತ್ಮಜೆಯಪ್ಪಿ ರಾಮನ
ನೋತು ಯುದ್ಧಪ್ರಣವ ಮಜ್ಜನ
ಜಾತೆ ಮಜ್ಜನದಿಂದ ಪರಿಹರಿಸಿದಳು ನಿಜ ಕರದಿ || ೨೦ ||

ಸಲ್ಲಲಿತ ಸಪ್ರೇಮ ಸೇವೆಯ
ಲುಳ್ಳದನು ಮಾಡುತ್ತೆ ತನ್ನಯ
ವಲ್ಲಭನು ಸಹವಾಗಿ ಸುಖದಿಂದಿರಲಿಕಭ್ರದಲಿ ||
ಮಲ್ಲಿಗೆಯ ಮೊಗ್ಗೆಗಳ ಮಳೆಯನು
ಚೆಲ್ಲುತಿದ್ದರು ಸುರರು ಸುರಕುಲ
ವಲ್ಲಭ ಶ್ರೀರಾಮನಿದ್ದನು ಸುಖದಲಾಶ್ರಮದಿ || ೨೧ ||

ನೀಗಿದಳು ಕಿವಿ ಮೂಗನನುಜರ
ನೀಗಿದಳು ಖರದೂಷಣಾದ್ಯರ
ನೀಗಿ ಲಂಕೆಯ ರಾವಣಾದ್ಯರ ಶೂರ್ಪಣಖಿ ಬಳಿಕ ||
ಹೋಗಿ ಹೊರಳುತ ತಳೆದ ತಾಡಣ
ಬೇಗೆಯಲಿ ಕಿವಿಮೂಗನುದ್ಧತ
ರಾಗವಿಲ್ಲದೆ ಹಾಡಿದಳು ರಾವಣನ ಸಭೆಯಲ್ಲಿ || ೨೨ ||

ರಾಕ್ಷಸರೊಡನೆ ಶ್ರೀರಾಮನ ಯುದ್ಧ



ರಾಮನಿಂದ ಖರರಾಕ್ಷಸನ ಸಂಹಾರ



ತಂಗಿ ರಾವಣನಂಘ್ರಿಯಲಿ [1]ಬಿ
ಟ್ಟಂಗದಲಿ ಬಂದಳುತ[1] ಬಿದ್ದಳು
ಸಿಂಗಿಯೋ ಬಿದ್ದಂತೆ ದಾನವಕುಲ ವಿನಾಶನದ ॥
ಸಿಂಗರದ ಮೊಗ ನೋಡಿ ರಾವಣ
ಕಂಗೆಡುವಳಿಗೆ ನುಡಿದನೇಳೇ
ಳಂಗ ಭಂಗವನಾರಕಟ ಮಾಡಿದರು ನಿನಗೆನುತ ॥ ೨೩ ॥

ಆರು ಭಂಗಕೆ ತಂದವರು ಜಂ
ಭಾರಿಯೋ ಯಮ ವರುಣ ವಾಯು ಕು
ಬೇರರಾಗಲಿ ಕೊಲುವೆನವರನುಸುರ್ದರಾಕ್ಷಣದಿ ॥
ಘೋರೆ ನುಡಿದಳು ರಾವಣಗೆ ಬಿ
ಟ್ಟೋರ ಹೊರವಡು ರಾಜ್ಯವಾಳುವ
ದಾರಿ ತಪ್ಪಿತು ಮೂಢ ಸ್ತ್ರೀಜಿತ ಪಾನ ತಲೆಗೇರಿ ॥ ೨೪ ॥

ಚಾರು ದೃಷ್ಟಿ ಸ್ವಪಾಲಗಾತ್ರ ವಿ
ಚಾರ ದೃಷ್ಟಿ ಕಣಾತ್ಮನಿಷ್ಠಗೆ
ಸಾರ ಶ್ರುತಿ ವಿಪ್ರರಿಗೆ ಘ್ರಾಣವೆ ದೃಷ್ಟಿ ಗೋವ್ಗಳಿಗೆ ॥
ವೀರ ಮಾಂಸಾಕ್ಷಿಗಳು ಮಿಕ್ಕರಿ
ಗೂರು ದೇಶದ ಶುದ್ಧಿಯರಿಯ[2]ಲ
ಮೂರುಖಾ ಸುಡು ಸಿನ್ನೆ ಸತ್ತರು ರಾಯ ರಕ್ಕಸರು ॥ ೨೫ ॥

ವರ ಚತುರ್ದಶ ದನುಜ ಸಾಸಿರ
ಖರನ ದೂಷಣ ತ್ರಿಶಿರ ಮುಖ್ಯರ
ಹರಣವನು ತೃಣದಂತೆ ಕೊಂಡನು ರಾಮನೆಂಬವನು ॥
ನರನು ದೈತ್ಯರ ವನಕೆ ಸುಳಿಯದ
ಪರಿಯಲಿದ್ದನು ತನ್ನ ಸತಿ ಸಹ
ವರ ಮುನೀಂದ್ರರಿಗಾಯ್ತು ನಿರ್ಭಯನೆಂದಳಾ ದನುಜೆ ॥ ೨೬ ॥

1 ಬಿ | ದ್ದಂಗುಟವ ಹಿಡಿದಳುತ (ಖ) 2 ದ (ಖ)

ಅರಿಯಲಾ ಕಡು ಮೂಢನಾಗಿ
ಸ್ಮರಗೆ ಬಿಡ್ಡಿಹೆಯೆನಲದಾರ್ಕೈ
ನೆನಸು ರಾಮನೆನಿಪ್ಪವನು ಹೇಳೇನು ಕಾಣದಿ ||
ಕೆರಳಿ ಖರ ಮುಖ್ಯರನು ಕೊಂದನು
ಪರಪರಾ ಯಿನ್ನೇನು ಕೇಳದು
ಸ್ಫುರಿಪುದೆನಗಾ ಮೂಲ ನಾಶವ ಮಾಳ್ಪೆ ನೀನೆಂದ || ೨೭ ||

ಎನಲು ಕೇಳಾ ನಾನು ಹೋದೆನು
ವನಕೆ ಗೌತಮಿ ತೀರಕದರೊಳು
ಮುನಿಗಳಾಶ್ರಮ [1]ಮುನ್ನ ನಾಮವು ಪಂಚವಟಿಯೆಂದು[1] ||
ಮನುಜರಿಬ್ಬರು ವನದಲಲ್ಲಿರೆ
ವನಜನೇತ್ರದ ನೀಲಗಾತ್ರದ
ಘನ ಜಟಾಮಂಡಲದ ಚೀರಾಜಿನದಲೆಸೆದಿರಲು || ೨೮ ||

ಹಿರಿಯ ರಾಮನು ತಮ್ಮ ಲಕ್ಷ್ಮಣ
ನಿರಿಸಿರಲು ಕೇಳಣ್ಣ ರಾಮನ
ತರುಣಿಯತಿ ಸೌಂದರಿಯೆ ಸಾಕ್ಷಾಲ್ಲಕುಮಿಯಂತಿಹಳು ||
ಅರಳುಗಂಗಳ ಬಟ್ಟಕುಚ ಸುಂ
ಗುರುಳ ಕೆಂಪೆಸೆವಧರ ದಂತ
ದ್ಯುತಿಯು ತಾರಾಳಿಗಳು ಮುಖ ಪೂರ್ಣೇಂದುಮಂಡಲದಿ || ೨೯ ||

ದೇವ ನರ ಗಂಧರ್ವ ಕಿನ್ನರ
ದೇವಿಯರಿಗತಿ ಚೆಲುವೆ ಪಾತಾ
ಳಾವ ಲೋಕದ ನಾಗಕನ್ನಿಕೆಯರಿಗೆ ಮಿಗಿಲವಳು ||
ನಾನು ಕೇಳಿಯು ಕಂಡುದಿಲ್ಲವ
ಳಾ ವಿಧದ ನಾರೀ ಪುರುಷನಾ
ತಾವಳಿಯವನು ಬೆಳಗುವಳು ನಿಜ ಕಾಯ ಕಾಂತಿಯಲಿ || ೩೦ ||

---

1 ಪಂಚವಟಿಯೆಂದೆನುತ ನಾಮವಿರೆ (ಖ)

ಸಿನೆಗವಳ ತಂದೀವೆನೆಂದಾ
ವನಕೆ ಹೋದಡೆ ರಾಮನಾಜ್ಞೆಗೆ
ಕನೆಲಿ ಕಿವಿಮೂಗರಿದುಬಿಟ್ಟನು ಲಕ್ಷ್ಮಣಾಂಹೆಯನು ||
ಎನಲದೇನನು ದುಃಖದಲಿ ಬಂ
ದನುಜ ಖರ ದೂಷಣರಿಗೆಂದೆನು
ಮನುಜರ್ಕೈ ಸಲೆ ಯೆನುತ ಹೋದರು ದೈತ್ಯ ಪಡೆ ಸಹಿತ || ೩೧ ||

ಸುತ್ತ ಮುತ್ತಿದ ದೈತ್ಯ ಪಡೆಯನು
ಮೃತ್ಯುವಿಗೆ ಶರನಿಕರದಲಿ ಕೈ
ವರ್ತಿಸಿದ ವೊಂದೇ ಕ್ಷಣದಿ ಬಲವಂತರೆಲ್ಲರನು ||
ಮತ್ತೆ ಬಡವನೆ ರಾಮನೆಂಬವ
ಯತ್ತಲಾನೂ ಮುನಿದನಾದಡೆ
ಕುತ್ತಲಾಪನು ಮೂರು ಲೋಕದ ವೀರರನು ಸಹಿತೆ || ೩೨ ||

ಆರು ನಿಲ್ಲರು ರಾಮನಿದಿರಲಿ
ವೀರರಾದವರೇಕೆ ಸಂಶಯ
ನಾರಿ ಸೀತೆಯ ಸತ್ತ್ವ ಸಾಗಿಸಿ ನೀನು ಯತ್ನದಲಿ ||
ಧೀರ ತನೆದಲಿ ತಂದೆಯಾದಡೆ
ಸಾರವೀ ಬದುಕಿದ್ದುದಕೆ ಸಂ
ಸಾರ ಬರುದೊರೆಯಾಗ ಫಲವೇನೆಂದಳಾ ದನುಜೆ || ೩೩ ||

ಲೋಕ ಮೋಹಿಸಿ ಸೀತೆಯಿತ್ತಲು
ಸೋಕಿ ತಂದಡೆ ಬಳಿಕ ರಾಜ್ಯವಿ
ದೇಕೆ ಮೂಲೋಕಗಳ ಭೋಗದ ಸಿದ್ಧಿ ತಾನೇಕೆ ||
ಆಕೆ ಕಡೆಗಂಗಳಲಿ ನೋಡಲು
ಸಾಕಲಾ ಸುಡು ಲಂಕೆಗಿಂಕೆಯ
ಬೇಕೆನಿಪ ಭೋಗವನು ಸಹ ಗಂಡಲ್ಲವೇ ನೀನು || ೩೪ ||

ಅದು ಗುಣದಿ ಯತ್ನವನು ಮಾಡೇ
ಅದುಭುತವ ತೋರುವೆನು ಸೀತೆಯು
ಸುದತಿಯೆಂದೆನಬಹುದೆ ಮನ ಮರುಳಾಗದೇ ನಿನಗೆ ||
ಇದಿರಿನಲಿ ನಿಲಲಾರೆ ರಾಮನ
ಮುದವಳಿಯ ತರಲಾಪೆಯಾ ಬಿಡು
ಹೆದರಿದ್ಯೆ ನಿನಗಿಲ್ಲವಳ ಭೋಗಿಸುವ ಸುಖ ಲೇಶ || ३೫ ||

ಎತ್ತಲಾಸೂ ಸೀತೆಯನು ತಹ
ಚಿತ್ತವುಳ್ಳೊಡೆ ರಾಮಚಂದ್ರನ
ಯುಕ್ತಿಯಲಿ ಮೋಹಿಸಿಯೆ ತರಬೇಕೆನಲವಳ ಬಳಿಕ ||
ಚಿತ್ತದಳಲನುದಾನ ಮಾನವ
ನಿತ್ತು ಸಂತೈಸುತ್ತ ರಾವಣ
ನತ್ತ ಹೊಕ್ಕನು ರಾಜಗೃಹವನು ನೆನೆದು ಜನಕಜೆಯ || ३೬ ||

ಅಲ್ಲಿ ರಾತ್ರಿಯು ದನುಜ ನಿದ್ರೆಗ
ಳಿಲ್ಲದೇ ಚಿಂತಿಸಿದ ರಾಘವ
ನಲ್ಲವೋ ಮಾನವನು ಮಾನವನಾದಡೆಂತೊಬ್ಬ ||
ಕೊಲ್ಲಲಾಪನೆ ಖರನ ದೂಷಣ
ಮಲ್ಲ ದೈತ್ಯರ ವೀರ್ಯವಂತರ
ನೆಲ್ಲರನು ತದ್ಭಾತೃಗಳನತಿ ಸಹಸಿಯೆನುತಿರ್ದ || ३೭ ||

ಅಲ್ಲದಡೆ ಸಾಕ್ಷಾತ ಲಕುಮಿೂ
ವಲ್ಲಭನು ಪರಮಾತ್ಮನೇ ಬಂ
ದಿಲ್ಲಿಯವತರಿಸಿದನೊ ರಾಘವನಾಗಿ ಮನುಕುಲದಿ ||
ಕೊಲ್ಲಲೆಂದೆನ್ನುವನು ದೈತ್ಯರ
ನೆಲ್ಲರನು ಬಲಸಹಿತ ಪೂರ್ವದಿ
ಬಲ್ಲೆ ಕಮಲಜ ಬೇಡಿಕೊಂಡನು ಹರಿಗೆ ನೆರೆ ದೂರಿ || ३೮ ||

ಎತ್ತಲಾನು ಪರಾತ್ಮ ಚಿನ್ಮಯ
ಸತ್ಯ ಸಂವಿನ್ಮಾತ್ರನದ್ವಯ
ವಸ್ತುವಾದಾ ರಾಮನೆನ್ನನು ರಣದಿ ಮಡುಹಿದಡೆ ||
ನಿತ್ಯ ಶುದ್ಧ ವಿಬುದ್ಧ ಕೇವಲ
ವಸ್ತುವೇ ತಾನಾಗಿ ಯಾಳುವೆ
ನುತ್ತಮದ ವೈಕುಂಠ ರಾಜ್ಯವನೆಂದ ದಶಕಂಠ || ೩೯ ||

ಉಭಯ ಗುಣವನು ಜರೆದು ಸಾತ್ವಿಕ
ವಿಭವದಲಿ ರಂಜಿಸುವ ಮಾಯಾ
ಕ್ಷುಭಿತವಾದ ಷಡೂರ್ಮಿ ಶರ್ಕೌಶಿಕೆಯು ಹೊದ್ದಿದಲ ||
ಶುಭ ಸುಲಕ್ಷಣವಾದ ಮಾಯಾ
ರಭಸವಿಲ್ಲದ ನಿತ್ಯ ನಿರ್ಮಲ
ನಿಭದ ವರ ವೈಕುಂಠ ರಾಜ್ಯ ಪಡೆವೆ ನಾನೆಂದ || ೪೦ ||

ಒರಲಿ ಕಾಣವು ವೇದ ಮಸ್ತಕ
ವರಸಿ ಕಾಣರದಾವನಂಘ್ರಿಯ
ಸೆರಗನಖಿಳ ಮುನೀಂದ್ರರಮಳ ಸಮಾಧಿಯಿಂದೊಳಗೆ ||
ಅರಸೆ ಯಾವನು ಬಂದು ಕಣನ
ಲ್ಲಿರಿವ ಗಡ ತದ್ರೂಪ ನೋಡುತ
ತೊರೆದಡೀ ದೇಹವನು ಸುಕೃತಿಗಳಾರು ತನ್ನಂತೆ || ೪೧ ||

ಕೊಲ್ಲದಡೆ ರಾಘವನು ತನ್ನುವ
ನಿಲ್ಲಿ ದಾನವ ಭೋಗ ಸೌಖ್ಯವ
ನೆಲ್ಲವನು ಭೋಗಿಸುವೆನೆರಡಂಗದವು ಹಿತವೆನಗೆ ||
ತಲ್ಲಯದಿ ತನುವಳಿದು ರಾಘವ
ನಲ್ಲಿಗೈದುವೆನಿದಕೆ ಸಂಶಯ
ವಿಲ್ಲೆನುತ್ತನವರತ ವಿನಂದಿ ನೆನೆವುತಿರುತಿರ್ದ || ೪೨ ||

ನೆಟ್ಟನೆನ್ನನು ರಾಮ ತನ್ನೊಳ
ಗಿಟ್ಟುಕೊಳ್ಳನು ಭಕುತಿಯಿಂ ಬೇ
ಗೆಷ್ಟು ಕಾಲಿರಬೇಕುವದರಿಂ ವೈರ ಭಾವದಲಿ ||
ಮುಟ್ಟಿಯನುದಿನ ನೆನದು ಪಡೆವೆನ
ಘೀಷ್ಟವನು ತನಗಾಗಿ ಹರಿಯೇ
ಮುಟ್ಟಿದನು ರಾಮಾಭಿಧಾನದಲೆನುತ ಭಾವಿಸಿದ || ೪೩ ||

ಇಂತು ನಿಶ್ಚೈಸುತ್ತ ರಾವಣ
ಲಂತರಂಗದಲನವರತ ತ
ಚ್ಚಿಂತೆಯಲಿ ನಡೆವಾಗ ನುಡಿವಾಗೊರಗುತೀರ್ದಾಗ
ಕಾಂತೆಯಾ ಗೋಷ್ಠಿಗಳಲೋಲಗ
ದಂತಿಕದಲನವರತ ರಾಮನ
ಪಂಥದಲಿ ನೆನೆನೆನೆದು ತನ್ಮಯನಾಗಿರಲು ಕಂಡ || ೪೪ ||

ತತ್ವ ಗಣನೆಯು ಸಂಧಿ ಪದಗಳ
ದೊತ್ತು ನವ ಪಂಚಕವಿದನು ನೆರೆ
ಭಕ್ತಿಯಿಂ ಕೇಳಿದಡೆ ಹೇಳಿದಡವರ ಕರುಣದಲಿ ||
ಸತ್ಯ ಸಂವಿನ್ಮಾತ್ರನದ್ವಯ
ಪ್ರತ್ಯಗಾತ್ಮಜ್ಯೋತಿ ನಿರ್ಗುಣ
ವಸ್ತು ಗುರು ನಿತ್ಯಾತ್ಮ ಲಕ್ಷ್ಮಿನೃಸಿಂಹ ಸಲಹುವನು || ೪೫ ||

ಅಂತು ಸಂಧಿ ೨೪ ಕ್ಕೆ ಪಂ ೧೦೫೭ ಕ್ಕೆ

ಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ



§ ಶ್ರೀ ರಾಮಚಂದ್ರಾಯ ನಮಃ §



# ಇಪ್ಪತ್ತೈದನೆಯ ಸಂಧಿ

## ಮಾರೀಚನಿಂದ ಶ್ರೀ ರಾಮನ ಮಹಿಮಾ ವರ್ಣನೆ

ಸೂಚನೆ || ಹೇಳಿದನು ಮಾರೀಚನಾ ಶ್ರೀ
ಲೋಲ ಮಹಿಮೆಯ ರಾವಣಂಗದ
ಕೇಳದಡೆ ಮೃಗವಾಗಿ ಬಂದನು ರಾಮನಿದ್ದೆಡೆಗೆ ||

ಪದ || ಕಾಂತೆ ಕೇಳಾ ರಾತ್ರೆಯಲಿ ಹರಿ
ಚಿಂತೆಯಿಂದೀ ಪರಿಯ ರಾವಣ
ನಂತಗಂಡನು ನಿಶಿಯ ತನ್ನೊಳು ತಾನೆ ಯೋಚಿಸುತ ||
ಕಂತುವುದಯದಲೆದ್ದು ಧೈರ್ಯದ
ಪಂಥದಲಿ ರಥವೇರಿ ನಡೆದನು
ಮುಂತೆ ಶರಧಿಯ ಕೂಲನಾ ಮಾರೀಚನಾಶ್ರಮಕೆ ||೧||

ಅಲ್ಲಿರಲು ಮಾರೀಚ ಮುನಿಯಂ
ತುಲ್ಲಸಿತ ಜಟೆ ವಲ್ಕಲಾಂಬರ
ದಲ್ಲಿರುತ ಹೃದಯದಿ ನಿರಂತರ ಧ್ಯಾನಿಸುತ್ತಿರಲು ||
ನಿರ್ಲಯದ ಪರಮಾತ್ಮನನು ಭವ
ದಲ್ಲಿ ನಿರ್ಗುಣ ಸಗುಣ ಭಾಸನ
ನೆಲ್ಲರಂತರ್ಯಾಮಿಯಾದಾದ್ವಯ ಚಿದಾತ್ಮಕನ ||೨||

ನಿಶ್ಚಯದಲಿಂತಿರೆ ಸಮಾಧಿಯು
ಲೆಚ್ಚರಿತು ಬಳಿಕಿದಿರು ಬಂದಾ
ಹುಚ್ಚು ರಾವಣನನ್ನು ಕಾಣುತ್ತೆದ್ದು ಬೇಗದಲಿ ||
ವಚ್ಚತಾಲಿಂಗಿಸುತ ವಿಧಿಯಿಂ
ದಚ್ಚವದ ಪೂಜೆಯನು ಮಾಡಿದ
ನಚ್ಚನಾತಿಥ್ಯವನು ವಿನಯದಲಧಿಕ ಹರುಷದಲಿ || ೩ ||

ಬಳಿಕ ಸುಖದಲಿ ಕುಳಿತು ನುಡಿದನು
ಖಳನೊಡನೆ ಮಾರೀಚ ನಿತ್ತಲು
ತಳುವದೀ ರಥದಿಂದ ಬಂದೆಯದೇನು ಕಾರಣದಿ ||
ಒಳಗೆ ಚಿಂತಾ ಕಾಮದಲಿ ಕುದಿ
ಗುಳಿಸ ಮೋಲಿಹೆ ಮುಸುಡು ಮುನ್ನಿನ
ಕಳೆಯ ಹೋಲದಿದೇಕೆ ನಿನ್ನಂತಸ್ಥ ಹೇಳೆಂದ || ೪ ||

ಹೇಳು ನಿನ್ನಂತಸ್ಥವನು ತಾ
ಕೇಳಿ ನಿನಗತಿ ಹಿತವ ಮಾಳ್ಪೆನೆ
ಖೂಳ ಮಾರ್ಗವನೆನ್ನದಿರು ಸನ್ಮಾರ್ಗ ವೃತ್ತಿಯೆನೆ ||
ಹೇಳು ತನಗಘ ಮುಟ್ಟದಂದದಿ
ಮೇಲು ಮಾರ್ಗವನರಿತೆನಲ್ಕಾ
ಖೂಳ ರಾವಣನೆಂದನಾ ಮಾರೀಚನನು ನೋಡಿ || ೫ ||

ಮೇದಿನಿಯಲೊಬ್ಬರಸು ಸಾಕೇ
ತಾಧಿಪತಿ ದಶರಥನೆನಿಪ್ಪವ
ಗಾದ ಗಡ ತಾ ಜ್ಯೇಷ್ಠ ಪುತ್ರನು ರಾಮನೆಂಬವನು ||
ಸಾಧಿಸಲು ಸತ್ಯವನು ವನಕೈ
ದೀನ ಬಂದಿಹನಖಿಳ ಮುನಿಜನ
ಕಾದಿಯಾಗಿಹ ನರ್ಥಿಯಿಂದವೆ ದಂಡಕಾನನದಿ || ೬ ||

ತಮ್ಮ ಸತಿ ಸಹ ಪಂಚವಟಿಯಿಂ
ಬೊಮ್ಮ ರಕ್ಕಸ ಘೋರ ವಿಪಿನದಿ
ರಮ್ಮ ವಾಸವ ಮಾಡಿಕೊಂಡಿಹನರ್ಥಿಯಿಂದ ಗಡ ||
ಬೊಮ್ಮ ಸೃಷ್ಟಿಗಪೂರ್ವ ಚೆಲುವಿಂ
ಕಮ್ಮಗಣೆಯನ ಸತಿಗೆ ಮಿಗಿಲಿನ
ಲೊಮ್ಮೆ ಮೂಲೋಕವನು ಮೋಹಿಪ ಭಾರ್ಯೆ ಗಂಡವಗೆ || ೭ ||

ನಿರಪರಾಧದಿ ರಾಮನೆಂಬಾ
ವರ ಪರಾಕ್ರಮಿ ಭೀಮ ದೈತ್ಯೇ
ಶ್ವರರ ಕೊಂದನು ನಮ್ಮವರ ಖರ ದೂಷಣಾದಿಗಳ ||
ತರಳೆ ಶೂರ್ಪನಖಿಯ ಕಿವಿ ಮೂ
ಗರಿದುಬಿಟ್ಟನು ನಿರ್ಭಯದಿ ನಿಜ
ತರುಣಿಯನುಜರ ಕೂಡಿ ಸುಖದಿಂದಿಹನು ಗಡ ವನದಿ || ೮ ||

ಈ ಪರಿಯಲಪರಾಧವೆಸಗಿದ
ನಾ ಪರಮ ದುಷ್ಟಾತ್ಮ ರಾಘವ
ನೋಪಳಾದಾ ಸೀತೆಯಾತಗೆ ಪ್ರಾಣ ಸಕಿಯಲ್ಲ ||
ಪ್ರೋಪೆವಳ ತಾನಿತ್ತೆಳೆದು ತರ
ಲಾಪೆ ನಿನ್ನ ಸಹಾಯದಿಂದಾ
ಸೂಪ ರಾಘವನಿಲ್ಲದಿದ್ದಾ ವೇಳೆಯದಲೆಂದ || ೯ ||

ಹೋಗಿ ನೀ ಮಾಯಕದ ಮೃಗವೇ
ಯಾಗಿ ರಾಮಾಶ್ರಮದಿ ಸುಳಿದು ವಿ
ಯೋಗವನು ನೆರೆ ಮಾಡಿ ತೊಲಗಿಸು ರಾಮಲಕ್ಷ್ಮಣರ ||
ಲಾಗಿನಿಂ ನಾನನಳೆಳೆವು ತಹೆ
ನೀಗ ಮೃಗರೂಪವನು ಮುನ್ನಿನ
ಯೋಗದಿಂದಿರಬಹುದು ನೀ ಬಳಿಕೆಂದನಮುರಾರಿ || ೧೦ ||

ಸೀತೆ ಚೆಲುವಿನ ಕಣಿಯುವಳ ತರ
ಲೀತಕುಳಿದೀ ಭೋಗ ಭಾಗ್ಯದ
ಮಾತು ಬಿಡು ಬಳಿಕಾರು ಸರಿ ನಿನ್ನಯ ಸಹಾಯದಲಿ ||
ನೂತನವ ತೋರಿಸುವೆನೆನಲಾ
ಮಾತ ಕೇಳುತ ವಿಸ್ಮಯಾಂಗದ
ಲಾತ ನೆವದಿಂ ನಿನ್ನ ಕೊಲಲವನೇ ಧಿಟಕ್ಕೆಂದ ||೧೧||

ಮರು[1]ಳ[1] ರಾವಣ ಕೇಳು ರಾಮನ
ವರ ಪರಾಕ್ರಮದಿರವ ಬಾಲ್ಯದಿ
ನೆರುತದಿಂದಾ ಕಂಡು ಯಿಂದೂ ನಾಳೆ ಭಯದಿಂದ ||
ಹಿರಿದು ನಡುಗುವೆ ಕೌಶಿಕಾಖ್ಯಾ
ಧ್ವರದ ರಕ್ಷೆಯಲೆನ್ನ ಮಾಹುತ
ಸರಳಿನಿಂ ಹೊರಬೀಸೆ ಬಿದ್ದೆನು ಬಂದು ಶರಧಿಯಲಿ ||೧೨||

ನೂರು ಯೋಜನಕತ್ತ ರಾಮನ
ಹಾರಿಸಲು ತಾ ಬಿದ್ದ ದಿನ. ಮೊದ
ಲೋರುಗುಡಿಸುತ ಭಯದಿ ರಾಮನ ನೆನೆವುತನವರತ ||
ಚಾರುಜಗುಳಿಸು ಹಗಲಿರುಳು ಭಯ
ವೇರಿ ತಗ್ರ್ಯಾಸವನೆ ಸರ್ವದಿ
ತೋರುತಿಹುದನವರತವೆಡಬಿಡದೆಂದನಮರಾರಿ ||೧೩||

ಮತ್ತೆ ತಾನಾ ಪೂರ್ವ ವೈರವ
ನುತ್ತರಿಸದೊಂದುದಿನ ಹೋದೆನು
ಹೊತ್ತು ಮೃಗರೂಪವನು ತೀಕ್ಷ್ಣ ಶೃಂಗವನು ಧರಿಸಿ ||
ಚಿತ್ತವಿಸು ದಂಡಕವನದಿ ನಿಜ
ಮತ್ತಕಾಶಿನಿ ಸೀತೆ ಲಕ್ಷ್ಮಣ
ಹೊತ್ತಿನಲ್ಲಿರೆ ಕಂಡೆನತಿ ದೂರದಿ ರಘೂತ್ತಮನ ||೧೪||

---

1 ಳಿ (ಕ)

ಬಂದನೀ ಮಾರೀಚ ಮೃಗವಾ
ಗೆಂದರಿದು ರಘುನಾಥ ಬಿಡೆ ಸರ
ಕೊಂದನಾ ತೊಟ್ಟಿದ್ದ ಶರಹತಿಯಿಂದ ಕಳವಳಿಸಿ ॥
ಬಂದು ಬಿದ್ದನು ಸಾಗರದ ನಡು
ವಂದು ಮೊದಲಿಮ್ಮಡಿಯ ಭಯದಲಿ
ಯೊಂದುವನು ತಾನೊಲ್ಲದಿಲ್ಲಿಹನೀ ಪರಿಯಲೆಂದ ॥ ೧೫ ॥

ಬಿಟ್ಟು ಸಕಲವನೀ ಸ್ಥಳದಿ ನೆಲೆ
ಗೊಟ್ಟು ಹೃದಯದಿ ರಾಮನೀ ಮರ
ವಟ್ಟು ಭಾವಿಸುತನವರತ ಭಯಭೀತನಾಗಿರ್ದು ॥
ಕೆಟ್ಟು ಭೋಗಾಪೇಕ್ಷೆಯೆಲ್ಲವ
ನೆಟ್ಟನಾ ಶ್ರೀ ರಾಜರತ್ನ ವಿ
ಶಿಷ್ಟ ರಮಣೀಯಾಂಗನನೆ ಭಾವಿಸುತ ಯಿರ್ಪನೆಂದ ॥ ೧೬ ॥

ನೀಲಮೇಘ ನಿಭಾಂಗ ಸಮುಸುಕ
ಪೋಲನಾಸಿಕ ದಂತ ಪಂಕ್ತಿಯು
ಸಾಲಶೋಭಾದೀಪ್ಯಮಾನ ಮನೋಹರಾಕೃತಿಯು ॥
ಲೋಲ ನೇತ್ರವ ಭ್ರೂಲತೆಯ ನಿಡು
ದೋಳುಗಳ ವರಕಂಬುಕಂಠ ವಿ
ಶಾಲ ವಕ್ಷದ ದಿವ್ಯರೂಪವೆ ಕಾಂಬುದನವರತ ॥ ೧೭ ॥

ಕಿರುಜಟಾ ಮಕುಟದ ಮನೋಹರ
ಪೆರೆನೊಸಲ ಗಂಭೀರ ನಾಭಿಯ
ನುರುವ ವಲ್ಕಲದುಡುಗೆಗಳ ವೀರಾಂಗ ಬಂಧುರದ ॥
ಕರ ವಿಧೃತ ಶರಚಾಪದಲಿ ಕರ
ಕಿರಣ ಕೋಟಿ ಪ್ರಭೆಯ ಭಯದಿಂ
ಹುರಿದು ತನಗನವರತ ತೋರುತ್ತಿಹುದು ಹೃದಯದಲಿ ॥ ೧೮ ॥

ಮರೆದು ಕುಳ್ಳಿರ್ದಾಗೆ ಸಬುದವ
ಹೊರಗೆ ಕೇಳಾಕ್ಷಣವೆ ಮನಕೆ
ಚ್ಚರಿಕೆಯಹುದೇನಿಲ್ಲಿ ಬಂದನೊ ರಾಮನೆಂದೆನುತ ||
ಪರಗುವಾಗಳು ಕನಸ ಕಂಡೆ
ಚ್ಚರಿನೊಳಿದ್ದಾಗಳು ನಿರಂತರ
ಮರೆದಿತರ ಭೋಗವನು ನೆನೆವುತ್ತಿಹೆನು ರಾಘವನ || ೧೯ ||

ನೋಡುವಾಗಲು ರಾಮ ಕಂಗೆಡೆ
ಯಾಡುವಾಗಲು ತದ್ವಿವೇಕವ
ಮಾಡುವಾಗಲು ಸಕಲ ಕೃತ್ಯವನೆಲ್ಲ ತನ್ಮಯನ ||
ಪಾಡುವಾಗಲು ರಾಮನೋ ಯೆಂ
ದಾಡುವುದು ನುಡಿ ಭಯದಿ ಬಯಲನು
ಮಾಡುತನ್ನವ ರಾಮ ಚಿಂತೆಯು ತನಗೆ ಕೇಳೆಂದ || ೨೦ ||

ಆಟ ಕೂಟವು ಬೇಟವೆಂಬೀ
ನೋಟ ಮುಟ್ಟಿತು ತನಗೆ ಡಿಂಬದ
ಪಾಟಿಯಾದುದು ದೇಹಧರ್ಮದ ಹದನ ಸಹಿಸಿಲ್ಲ ||
ನಾಟಿಸಿತು ಮತಿ ರಾಮನಲ್ಲಿಯೆ
ಪಾಟ ಪಡಿಗಳನೆಲ್ಲ ಮರೆಸಿತು
ಕೂಟವಾಯಿತು ರಾಮ ಚಿಂತೆಯು ಸಕಲದೊಳಗೆಂದ || ೨೧ ||

ನೀನು ಬಹು ಕಾಲದಲಿ ಬಂದಾ
ದಾನವರ ಕುಲವಿದನು ಕೆಡಿಸದೆ
ಸಾಮರಾಗದಿ ರಕ್ಷಿಸೈ ರಾಮನಲಿ ತೊಡರಿದಡೆ ||
ಹಾನಿಯಾಗದೆ ಬಿಡದು ಹಿತವನು
ನಾ ನಿನಗೆ ಹೇಳುವೆನು ಮದ್ವಚ
ನಾನುಶಾಸನ ತಪ್ಪದದನವಧರಿಸಿ ಕೇಳೆಂದ || ೨೨ ||

ಆತುಮನು ಸಾಕ್ಷಾತ ಭುವನ
ದ್ವೈತ ದೈವವು ರಾಮನೇ ಕಣ
ಯಾತನವ್ಯಯನಪ್ರತರ್ಕ್ಯನಗಮ್ಯನವಿನಾಶಿ ||
ಶ್ರೋತೃದೂರನಗಣ್ಯ ಗುಣಗಣ
ನೇತಿ ನೇತಿ ಶ್ರುತಿಯಲರಿವನ
ನೀತಕ್ಕೆ ವಿದ್ವೇಷ ಬಿಡು ನೀನೆಂದನಮರಾರಿ || ೨೩ ||

ಮಾಡದಿರು ವಿದ್ವೇಷವನು ನೀ
ಮಾಡು ನವವಿಧ ಭಕ್ತಿಯನು ಕೊಂ
ಡಾಡು ತನ್ನಾಮವನು ಕೇಳನವರತ ತದ್ಗುಣವ ||
ನೋಡು ತನ್ಮೂರ್ತಿಯನು ಪೂಜೆಯ
ಮಾಡು ನೆನೆ ನಮಿಸೆಲ್ಲವರ್ಪಿಸು
ಖೋಡಿವೋಗದೆ ಕರುಣ ಕಾಣಾ ರಾಮ ಭಕುತರಲಿ || ೨೪ ||

ಮತ್ತೆ ಕೇಳಿಹೆ ಮುನಿಗಳೆಂಬುದ
ನುತ್ತಮಿಶ್ವರನಾದಿ ಯುಗದಲಿ
ಪ್ರಾರ್ಥಿಸಿದನಜನಧಿಕ ಭಕುತಿಯಲಚ್ಯುತನನವಗೆ ||
ಸತ್ಯನಿಧಿ ಹರಿ ಬಂದು ನುಡಿದನು
ಮತ್ತೆ ನಿನಗಿಷ್ಟಾರ್ಥವಾವುದ
ನಿತ್ತಪೆನು ಹೇಳೆನಲು ಮುಗುಳಿಂತೆಂದನಬುಜಭವ || ೨೫ ||

ಪದುಮದಳನಿಭನೇತ್ರ ನೀ ಬಂ
ದುದಿ[1]ಸು[1] ಧರೆಯಲಿ ಮನುಜ ಲೀಲೆಯ
ಲೊದವಿ ದಶರಥ ನೃಪಗೆ ನೆರೆ ಮಗನಾಗಿ ದಿವಿಜರಿಗೆ ||
ಕದನದಲಿ ದಶಕಯ್ಯನನು ನೀ
ಸದೆಯ ನಮಗಿಷ್ಟಾರ್ಥವನೆ ಬೇ
ಡಿದುದ ಸಲಿಸಲು ಜನಿಸಿದನು ರಾಮಾವತಾರದಲಿ || ೨೬ ||

---

1 ಸಿ (ಖ)

ರಾಮ ಮಾನವನಲ್ಲ ಸಾಕ್ಷಾ
ದಾ ಮುಕುಂದಾನಂತನದ್ವಯ
ನಾಮಯ ಶ್ರೀರಮಣ ನಾರಾಯಣನು ಮಾಯೆಯಲಿ ||
ಭೂಮಿ ಭಾರವ ಕಳೆಯಬಂದಿಹ
ನೀ ಮನುಷ್ಯಾಕೃತಿಯುಲಡವಿಗೆ
ನೇಮದಿಂ ನಿರ್ಭಯದಿ ರಾವಣ ಮನೆಗೆ ನಡೆಯೆಂದ || ೨೭ ||

ಪರಸತಿಯರನು ತಹುದು ಮತವೇ
ನರಕಭಾಜನವಾಯ್ತು ಬಲು ಯಶ
ಸಿರಿಸು ಲಕ್ಷಣವೆಲ್ಲ ಕೆಡುವುದು ನೀತಿಶಾಸ್ತ್ರವನು ||
ಹಿರಿದ ಸೀನರಿತವನು ಲೋಕದಿ
ನೆರೆವುದಪದೆಸೆ ಬೇಡ ಮನೆಯ
ಲ್ಲಿರು ಸುಖದಿ ಮದ್ವಚನದಿಂ ನೀನೆಂದ ಮಾರೀಚ || ೨೮ ||

ಎಂದ ಮಾರೀಚೋಕ್ತಿಗಳನೊಲಿ
ದೆಂದದೆಲ್ಲವ ಕೇಳಿ ನುಡಿದನು
ಯೆಂದೆಯೆಲ್ಲಾ ನೀನು ರಾಮ ಪರಾತ್ಮ ಹರಿಯೆಂದು ||
ಸಂದೆಹವೆ ಕಮಲಜನು ಬೇಡೆ ಮು
ಕುಂದ ತನ್ನನು ಕೊಲಲು ಜನಿಸಿದ
ನೆಂದೆಯದು ತಪ್ಪುವುದೆ ಯೀಶ್ವರನುಚಿತ ಸಂಕಲ್ಪ || ೨೯ ||

ಆದಡೀಗಳೆ ಯತ್ನದಿಂದವೆ
ಸಾಧಿಸಿಯೆ ತರಬೇಕು ಸೀತೆಯ
ನಾದುರಾಗ್ರಹವಿಡಿದು ರಾಘವ ಬಂದು ತನ್ನೊಡನೆ ||
ಕಾದಿ ರಣದಲಿ ಕೊಂದಡಾರಿಗು
ಸಾಧಿಸದ ಪರಮಾತ್ಮ ಪದವಿಯ
ನೈದಬಹುದೆಲೆ ತನಗೆ ಶಿವಶಿವ ರಾಮ ಬಾಣದಲಿ || ೩೦ ||

ಎತ್ತಲಾನೂ ನಾನು ರಾಮನ
ಕೀರ್ತಿ ಕೆಡಹಿದಡೆನಗೆ ಸೀತಾ
ಮತ್ತಕಾಶಿನಿಯರಸಿಯಾಗಳೆ ಬಳಿಕ ನಿರ್ಭಯದಿ ||
ಉತ್ತಮನೆ ಬೇಗೇಳು ಹೋಗು ವಿ
ಚಿತ್ರ ಮೃಗರೂಪವ ಧರಿಸಿ ರಾ
ಮೋತ್ತಮಾಶ್ರಮದಿದಿರಿನಲಿ ಸುಳಿದಾಡಿ ಚರಿಸೆಂದ || ೩೧ ||

ಬೇಗ ಹೋಗಾ ರಾಮ ಲಕ್ಷ್ಮಣ
ರೀಗಳಾಶ್ರಮದಿಂದ ದೂರವೆ
ಯೋಗವನು ನೆರೆ ಮಾಡಿಕೊಡು ನಾನಾ ಪ್ರಯತ್ನದಲಿ ||
ಯೋಗದಲಿ ಬಳಿಕಿರು ಮನೆಯಲಿದ
ಕಾಗದೆಂದಡೆ ತಲೆಯ ಖಡುಗದಿ
ನೀಗಿ ಬಿಸುಡುವೆ ನಿನ್ನನಾಕ್ಷಣಕೆಂದನಮರಾರಿ || ೩೨ ||

ಕೊಂದೆನೆಂದರೆ ನಿಮಿಷಮಾತ್ರದಿ
ಮಂದತನದಲಿ ತನ್ನೊಡನೆ ಪ್ರತಿ
ಯೊಂದ ನುಡಿದಡೆನಲ್ಕೆ ರಾವಣ ವಚನವನು ಕೇಳಿ ||
ನಿಂದು ತನ್ನೊಳು ಯೋಚಿಸಿದ ನರ
ವಿಂದ ಲೋಚನ ರಾಮ ಶರವಲಿ
ಹೊಂದಿದಡೆ ತನಗುತ್ತಮದ ಪದವಹುದಲಾ ಯೆನುತ || ೩೩ ||

ಎತ್ತಲಾನೂ ನಾನು ರಾಮನ
ಹಸ್ತಧೃತ ಶರದಿಂದ ಮಡಿದಡೆ
ಉತ್ತರಿಸಿ ಸಂಸಾರಶರಧಿಯನೈದುವೆನು ನಿಜವ ||
ಮತ್ತದಲ್ಲದಡೀ ದುರುಳ ದು
ರ್ವೃತ್ತನಾಯುಧದಿಂದ ಮಡಿದಡೆ
ಮುಕ್ತಿಯಿಲ್ಲೆಂದೆಂದು ನಿರಯದಿ ಪತನವಹುದೆಂದ || ೩೪ ||

ಎರಡು ಕಡೆಯಲು ಮರಣ ತಪ್ಪದು
ಶರೀರವೆಂದೂ ನಿತ್ಯವಾಗದು
ಹರಿಯ ಕಯ್ಯಲಿ ಮಡಿದಡೆನ್ನಂತಾರು ಸುಕೃತಿಗಳು ||
ಪರಿಪರಿಯ ಬಹುಕರ್ಮ ಮಾರ್ಗದ
ಭರದಿ ಭಕ್ತಿಜ್ಞಾನ ವಿರತಿಯು
ಉಲರೆ ಕೂಡದ ಪದವ ಪಡೆವೆನಲಾ ಶಿವಾಯೆಂದ || ೩೫ ||

ಎನುತ ನಿಶ್ಚಯದಿಂದಲೆದ್ದಾ
ನೆನೆದಶಂಗಿಂತೆಂದನಾಗಲಿ
ಮನಕತವ ಬಿಡು ನೀನೊಡೆಯನಾಗಿರಲು ನಿನಗಾಗಿ ||
ತನುವನಾದರು ತೆತ್ತು ಮಾಡೆನೆ
ಘನತರಾಜ್ಞೆಯಮೀರುವೆನೆ ನೋ
ಡೆನುತ ರಥದಿಂದೈದಿ ನಡೆದನು ರಾಮನಾಶ್ರಮಕೆ || ೩೬ ||

ಶುದ್ಧ ಜಾಂಬೂನದ ಸುವರ್ಣ
ಕ್ಷುದ್ರ ಮೃಗವಾದನು ರಜತ ಬಿಂ
ದುದ್ರಿತಾಂಗದ ರತ್ನ ಶೃಂಗದ ಮಣಿಮಯದ ಕರದ ||
ಭದ್ರನೀಲ ಸುರತ್ನಮಯ ನಯ
ನದ್ವಯದ ವಿದ್ಯುತ್ಪ್ರಭಾನಿಭ
ಮುಗ್ಧ ವದನದ ಚೆಲುವಿನಿಂ ಚರಿಸಿದನು ವನದೊಳಗೆ || ೩೭ ||

ಕಚ್ಚಿ ಕಚ್ಚಿಳೆಹುಲ್ಲ ನೆಳಲಿಗೆ
ಬೆಚ್ಚಿ ಸಿಡಿವುತ ಮುರಿದು ನೋಡುತ
ಕಿಚ್ಚಿದೆಯುಲಿದಿರಿದಿರು ಸುಳಿವುತ ರಾಮನಾಶ್ರಮದ ||
ಪಚ್ಚೆ ವನದ ಸಮೀಪ ಕೈಗಂ
ದಚ್ಚುತಂಗನೆ ಸೀತೆಗತಿಮತಿ
ಮೆಚ್ಚನಿಸಿ ಕುಣಿದಾಡುತಿದ್ದುದು ಸುತ್ತ ವಳೆಯದಲಿ || ೩೮ ||

ಕ್ಷಣಕೆ ಸಿಡಿದೋಡುತ್ತ ಮತ್ತರಿ
ಕ್ಷಣಾದಿ[1] ಮಗುಳಿದಿರಾಗಿ ಬಪ್ಪದು
ಹೆಣಗುವುದು ಹಾರುವುದು ನಿಲುವುದು ವುಲುಹನಾಲಿಸುತ ||
ಭಣಿತೆಯಲಿ ಭಾವದಲಿ ಮೋಹನ
ದಣಿಕೆಯಲಿ ಕಂಗೊಳಿಸುತಿರಲಂ
ಗಣ ಸಮೀಪದಿ ಬಂದು ಮೋಹಿಸುತಿದ್ದನಮರಾರಿ || ೩೯ ||

ಮಾಯೆ ಮಾಯೆಯ ಮರುಳು ಮಾಡಿ ವೃ
ಥಾಯ ಮೋಹಿಸುಗಲ್ಲದಾತ್ಮನ
ಮಾಯನದ್ವಯ ವಿಷಯದೂರನ ಮಾಯನಕ್ರಿಯಗೆ ||
ಮಾಯೆ ಮೋಹಿಸಬಲ್ಲದೇ ನಿರ
ಮಾಯನಚಲ ಸಿರೀಶ ನಿತ್ಯನ
ಜೇಯ ಬಾಧಾರಹಿತನಾದಾ ರಾಮಚಂದ್ರಂಗೆ || ೪೦ ||

ಸಂದವಿಲ್ಲಿಗೆ ಸಂಧಿ ತತ್ವದ
ಲೊಂದಧಿಕ ಪದನಿಕರ ನಾಲ್ವ
ತ್ತೊಂದಿದನು ಕೇಳಿದಡೆ ಭಕುತಿಯಲಿದನು ಮನವೊಲಿದು ||
ದಂದುಗವ ಪರಿಹರಿಸಿ ಪರಮಾ
ನಂದ ಸಿದ್ಧಿಯನಿತ್ತು ದೇವ ಮು
ಕುಂದ ಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹ ಸಲಹುವನು || ೪೧ ||

ಅಂತು ಸಂಧಿ ೨೫ ಕ್ಕೆ ಪದ ೧೦೯೮ ಕ್ಕೆ
ಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ



1 ಕೆ (ಖ)

§ ಶ್ರೀ ರಾಮಚಂದ್ರಾಯ ನಮಃ §



# ಇಪ್ಪತ್ತಾರನೆಯ ಸಂಧಿ

## ರಾವಣನಿಂದ ಮಾಯಾ ಸೀತಾಪಹರಣ

ಸೂಚನೆ || ಮುಕ್ಕುವಂದದಿ ಕಲ್ಲ ಬೆಣ್ಣೆಯ
ತಕ್ಕ ಮಾಯಾ ಸೀತೆಯನು ಖಳ
ಭಿಕ್ಷುವೇಷದಿ ಲಂಕೆಗೊಯ್ದನು ವಿಹಗನನು ಗೆಲಿದು ||

ಪದ || ಕಾಂತೆ ಪಾರ್ವತಿ ಕೇಳು ರಾವಣ
ನಿಂತು ಮಾಡುವ ಚೇಷ್ಟೆಯೆಲ್ಲವ
ನಂತರಾತುಮಸರಿತು ರಾಮನು ಕರೆದು ಜಾನಕಿಗೆ ||
ಸಂತಸದಲಿಂತೆಂದನಾಲಿಸು
ಮುಂತಲಾಗಾಮಿಯನು ಜಾನಕಿ
ಭ್ರಾಂತ ರಾವಣ ಭಿಕ್ಷುವೇಷದಿ ಬಹನು ನಿನ್ನೆಡೆಗೆ ||೧||

ನಿನ್ನ ಸುಚ್ಛಾಯಾಕೃತಿಯನೀ
ಪರ್ಣಶಾಲೆಯಲಿರಿಸು ಮಾಯಾ
ಚಿನ್ಹ ಸೀತೆಯು ವರುಷತನಕಡಗಿರುವ ದೃಶ್ಯದಲಿ ||
ವಹ್ನಿಯೊಳಗೆನ್ನಾಜ್ಞೆಯಿಂದವೆ
ಮುನ್ನಿನಂತೆನ್ನೆಡಗೆ ಬಾ ಬಳಿ
ಕಾರ್ನವದ ಮಷ್ಯದ ದುರಾತ್ಮನ ಕೊಂದಮೇಲೆಂದ ||೨||

ಈ ಪರಿಯಲೇಕಾಂತದಲಿ ನಗು
ತೋಪಳಿಂಗೆನೆ ಕೇಳಿ ಜಾನಕಿ
ಆ ಪರಮ ಪೂರುಷಭನ ನುಡಿಗಂತಾಗಲೆಂದೆನುತ ||
ತಾಪವಿಲ್ಲದೆ ವಹ್ನಿಮಧ್ಯದಿ
ಗೌಪಿತದಲಡಗಿದಳು ಮಾಯಾ
ರೂಪ ಸೀತೆಯ ಮಾಡಿ ಹೊರಗಿರಿಸಿದಳು ಜಗದಲ್ಲಿ || ೩ ||

ಬಳಿಕ ಮಾಯಾ ಸೀತೆ [1]ಕಾಣುತ[1]
ಹೊಳೆವ ಹೊನುಮೃಗದಂಗವಟ್ಟದ
ಚೆಲುವ ಮಾಯಾ ಮೃಗವ ರಾಮನ ಹೊರೆಗೆ ನಸುನಗುತ ||
ನಳಿನಮುಖಿ ವಿನಯದಲಿ ನುಡಿದಳು
ಬಳುಕುತ್ತೈತಂದಿತ್ತ ನೋಡೆಲೆ
ನಳಿನದೃಶ ವೈಚಿತ್ರ ಹೇಮವಿಭೂಷಿತದ ಮೃಗವ || ೪ ||

ಚಿತ್ರತರ ಬಿಂದುವಿನೆ ಮೃಗವಿದೆ
ಹತ್ತಿರಿಗೆ ನಿರ್ಭಯದಿ ಬರುತಿದೆ
ಯರ್ಥಿಯಾಗಿದೆ ಕಟ್ಟಿ ತಂದೆನಗಿತ್ತಡಾಡಿಸುತ ||
ವತ್ತಿನಿಹೆನೆನಲಾನೆನುತ್ತಮ
ಶೋತ್ತಮಾರ್ಚಿತ ಕೊಂಡ ಧನುವನು
ಮತ್ತೆ ಕರೆದಾ ಲಕ್ಷ್ಮಣಂಗಿಂತೆಂದನಾ ರಾಮ || ೫ ||

ತಮ್ಮ ನನ್ನರ್ಧಾಂಗಿಯೆನಿಸುವ
ಧರ್ಮಪತ್ನಿಯನಿಂದಿತೆಯನತಿ
ಬೊಮ್ಮ ರಕ್ಕಸ ಘೋರದ ಋಷಿಗಳೊಯ್ಯದಂದದಲಿ ||
ಷಮ್ಮತದಿ ನೀ ರಕ್ಷಿಸೆನಲ
ತ್ಯಮ್ಮಹದಿ ಸೌಮಿತ್ರನೆಂದನು
ರಮ್ಮ ಚಿತ್ತವಿಸೀ ಪರಿಯ ಮೃಗವುಂಟೆ ಧಿಟಕೆಂದ || ೬ ||

---

1 ಯಾಡುತ (ಖ)

ಎಲ್ಲಿ ಯೊಪರಿ ಮೃಗವದುಂಟೇ
ಕಳ್ಳ ಮಾರೀಚಾಂಕನಿವನೇ
ಕಿಲ್ಲ ಸಂಶಯವೆನಲು ನುಡಿದನು ರಾಮನನುಜಂಗೆ ||
ಖುಲ್ಲನಾದಡೆ ಕೊಂದು ಬಿಸುಡುವೆ
ನಲ್ಲವೇ ಮೃಗವಾದಡೀ ನಿಜ
ವಲ್ಲಭೆಗೆ ತಂದೀವೆನರ್ಥಿಯ ಲಾಲನಾರ್ಥದಲಿ || ೭ ||

ತಾನು ಮೃಗವನು ಕಟ್ಟಿ ತಪ್ಪ
ನ್ನೀ ನಿತಂಬಿನಿಯನ್ನು ರಕ್ಷಿಸು
ನೀನು ಯತ್ನದಲೆಚ್ಚರಿತಿರೆಂದಾಗ ರಾಘವನು ||
ತಾನೆ ಮಾಯಾ ಮೃಗದ ಬಳಿವಿಡಿ
ದಾನತಪ್ರಿಯ ನಡೆದ ಮಾಯಾ
ಮಾನಿನಿಯದಾರಾಜ್ಞೆಯಲಿ ಮೋಹಿಪಳು ಮೂಜಗವ || ೮ ||

ನಿರ್ವಿಕಾರ ನಿರೀಹನೆತ್ತಲು
ಸರ್ವದೊಳು ಪರಿಪೂರ್ಣನೆತ್ತಲು
ಖರ್ವ ವಂದ್ಯ ಚಿದಾತ್ಮನೆತ್ತಲು ಮೃಗದ ಬಳಿವಿಡಿದು ||
ಉರ್ವಿಯಲಿ ತೊಳಲುವುದಿದೆತ್ತಲ
ಪೂರ್ವವೇ ಭಕ್ತಾನುಕಂಪೆಯು
ಉರ್ವಿಸುತೆಯರ್ಥಿಯನು ಸಲಿಸಲು ಸತ್ಯವಚನದಲಿ || ೯ ||

ಅಲ್ಲದಿದ್ದಡೆ ಪೂರ್ವ ಕಾಮಂ
ಗುಳ್ಳ ನಿತ್ಯಾನಂದ ವಿಗ್ರಹ
ಗೆಲ್ಲಿಯದು ಮೃಗದಾಸ್ತೆ ಮೋಣಬಳೆಯ ವಿನೋದದಲಿ ||
ಇಲ್ಲ ಪರಮಾತ್ಮಂಗೆ ಸಂಪ್ರಿಯ
ವೆಲ್ಲ ಭಕ್ತಾನುಗ್ರಹಾರ್ಥದ
ಲುಳ್ಳ ಲೀಲೆ ಕಣಾ ವಿಚಾರಿಸೆ ಗಿರಿಜೆ ಕೇಳೆಂದ || ೧೦ ||

ಒಮ್ಮೆ ಹಾರುವುದೊಮ್ಮೆಯೋಡುಗು
ದೊಮ್ಮೆಯಡಗುವುದೊಮ್ಮೆ ತೋರುತ
ರಮ್ಮನನು ಕೊಂಡೊಯ್ದುದತಿ ದೂರಕ್ಕಡವಿಯೊಳಗೆ ॥
ನಿರ್ಮಲಾತ್ಮನು ರಾಮಸೀತನು
ಕರ್ಮಿ ರಾಕ್ಷಸನೆಂಬುದರಿವತಿ
ಘಮ್ಮನೆಚ್ಚನು ದಿವ್ಯ ಶರದಿಂದಾ ನಿಶಾಚರನ ॥೧೧॥

ಎಚ್ಚಡಾ ಮೃಗರೂಪಿ ದಾನವ
ನುಚ್ಚಿ ಬಿದ್ದನು ನಿಜದ ಕಾಯದ
ಲಚ್ಚರಕುತವ ಬಾಯೊಳಗೆ ಕಾರುತ್ತವನಿತಳಕೆ ॥
ಮುಚ್ಚಿ ವನವನು ಹಾಹ ಕೆಟ್ಟೆನೊ
ನಚ್ಚಿ ಲಕ್ಷ್ಮಣ ಸಲಹೆನುತ್ತ ಮು
ಹೋಚ್ಚವದಲೊದರಿದನು ರಾಮನ ಮಾತಿಸಂದದಲಿ ॥೧೨॥

ನರಕಿಯಾದಡು ಮರಣವಲಿ ತನು
ಸ್ಮರಣೆ ನಾಮಾಕ್ಷರದ ನಾಮವು
ಬರಲನಿಶ್ಚಯನಾದಡಂ ತದ್ರೂಪವಡೆವರೆನೆ ॥
ಸುರ ವಿರೋಧಿಗೆ ಮುಂದೆ ರಾಮನ
ಚರಣವನು ನೋಡುತ್ತ ತನುವದ
ಪರಿಹರಿಸಿ ತನು ಶರಧಿಯಾಗದೆ ಮೋಕ್ಷವಾತಂಗೆ ॥೧೩॥

ಹೊಳೆಹೊಳೆದು ಖಳನೊಡಲದೆಸೆಯಿಂ
ಬೆಳಗು ಹೊರವಂಟುದು ತತ್ಕ್ಷಣ
ದೊಳಗೆ ಕಾಂಬಂತಖಿಳ ಲೋಕಕೆ ಬಂದು ರಾಘವನ ॥
ಕಳೆವರವ ಬೆರಸಿತ್ತು ದಿವಿಜಾ
ವಳಿಗಳಭ್ರದಿ ಕಂಡು ವಿಸ್ಮಯ
ದೊಳಗೆ ಮುಳುಗುತ್ತಿದ್ದುದೇನೆಂಬೆನು ಮಹಾಚ್ಚರಿಯ ॥೧೪॥

ಆವ ಕರ್ಮವ ಮಾಡದೇ ಸ
ದ್ವ್ಯಾವಹಾರಿಕವಿಲ್ಲದೆಂತೀ
ಜೀವ ಹಿಂಸಕ ಮುಕುತಿವಡೆದನೊ ಶಿವ ಮಹಾದೇವ ||
ದೇವ ರಾಮನ ಮಹಿಮೆ ಸಂಶಯ
ವಾವು ದಿನಕೆನುತಭ್ರದಲಿ ದಿವಿ
ಜಾವಳಿಗಳೋರಂತೆ ಹೊಗಳುತ್ತಿದ್ದುದಚ್ಚುತನ || ೧೫ ||

ಹಿಂದೆ ಖಳ ರಾಮಾಸ್ತ್ರ ಹತಿಯಲಿ
ನೊಂದು ಭಯದಲಿ ಗೃಹ ಧನಾದಿಯ
ನೊಂದದೇ ವಿರತಿಯಲಿ ವೈರದಿ ರಾಮಚಂದ್ರನನು ||
ಸಂದ ಹೃದಯದಿ ನೆನೆದು ಕಲ್ಮಷ
ಬೆಂದು ಕಡೆಯಲಿ ರಾಮ ಶರದಲಿ
ಹೊಂದಿದನು ನೋಡುತ್ತಿದಿರಲಾ ರಾಮ ಮೂರುತಿಯ || ೧೬ ||

ಶೂರನಾಗಲಿ ಪಾಪ ನಿರತ ವಿ
ಕಾರಿಯಾಗಲಿ ವಿಪ್ರನಾಗಲಿ
ಘೋರ ರಾಕ್ಷಸನಾಗಲಂತ್ಯದಿ ರಾಮನನು ನೆನೆಯೆ ||
ಸೇರುವರು ನಿಜ ಗತಿಗೆನುತ್ತ ವಿ
ಚಾರದಲಿ ನಿಶ್ಚಯವ ಮಾಡುತ
ಸಾರ ಸೂಕ್ತಿಯಲಮರಚಯ ನಡೆದುದು ನಿಜಾಲಯಕೆ || ೧೭ ||

ಬಳಿಕ ರಾಮನು ಚಿಂತಿಸಿದನೀ
ಖಳನು ಹಾ ಲಕ್ಷ್ಮಣ ಯೆನುತ್ತವೆ
ಕಳೆವಸುವ ಬಿಡುವಾಗಲೊದರಿದನೆನ್ನ ನುಡಿಯಂತೆ ||
ಕಳವಳಿಸುವಳು ಸೀತೆಯೆನುತಾ
ಗಳನೆ ಶಂಕೆಯ ಮಾಡಿ ದೂರದ
ವಳೆಯದಿಂ ರಘುನಾಥ ಮರಳಿದನಾಶ್ರಮಕ್ಕಾಗಿ || ೧೮ ||

ಸೀತೆ ಮಾರೀಚೋಕ್ತಿಯನು ನೆರೆ
ಭೀತಿಸುವ ಕೇಳುತ್ತಲೇ ದುಃ
ಖಾತಿರೇಕದಿ ಮುಳುಗಿ ನುಡಿದಳು ಲಕ್ಷ್ಮಣನ ಕರೆದು ||
ತಾತ ಹೋಗೈ ರಾಮ ದಾನವ
ಘಾತಕಿಯ ಹಾ ಲಕ್ಷ್ಮಣಾ ಯಂ
ದೇತಕೆಂದನು ಕೇಳಿಯಾ ನೀನೆಂದಳಬುಜಾಕ್ಷಿ || ೧೯ ||

ಎನಲು ಲಕ್ಷ್ಮಣನೆಂದನೀ ನುಡಿ
ದನುಜನೊಬ್ಬನು ಸಾವುತೇನೋ
ಬಿನುಗು ನುಡಿದನು ರಾಮನಾಡಿದುದಲ್ಲ ಬೆದರದಿರು ||
ಇನಿತು ದೈನ್ಯದಿ ರಾಮ ನುಡಿವನೆ
ಘನ ಪರಾತ್ಮನು ಮುಳಿದು ಲೋಕವ
ನನಿತನಾದರು ಕ್ಷಣದಿ ಜೈಸುವ ಸಕಲ ಸುರನುತನು || ೨೦ ||

ಎನಲು ಕೋಪದಿ ಲಕ್ಷ್ಮಣನೆನಾ
ನನಜಲವ ಸೂಸುತ್ತ ನೋಡಿದ
ಳನುಜನೇ ನೀ ರಾಮ ವಧೆಯನು ಹಾರಿ ಬಂದೆಯಲಾ ||
ವನಕೆ ಭರತನು ನಿನ್ನ ಕಳುಹಿದ
ನನುಪಮ ಶ್ರೀರಾಮನಳಿದಡೆ
ವನಿತೆಯಾಗಿರೆ ತನ್ನ ಕರತಲವಲ್ಲವೇ ನಿನ್ನ || ೨೧ ||

ದುರುಳ ತನ್ನನು ಮುಟ್ಟಲಾಪೈ
ತೊರೆವೆನೀಗಳೆ ತನುವನರಿಯೆನು
ಕರುಣಿ ರಾಘವ ನೀನು ಭಾರ್ಯಾಪಹಾರನೆಂಬುದನು ||
ಕರದಿ ಮುಟ್ಟಿನು ನಿನ್ನನಾಗಲಿ
ಭರತನಾಗಲಿ ಯೆನುತ ಬಸುರನು
ಭರದಿ ಹೊಡೆದಳುತಿರಲು ಲಕ್ಷ್ಮಣ ಕೇಳಿ ನಡುಗಿದನು || ೨೨ ||

ಕರ್ಣ ಶೂಲೆಯು ಪೋಲು ಸೀತೆಯ
ಮರ್ಸ್ಗಯುದ ನುಡಿಕೇಳಿ ದುಃಖಿಸಿ
ನಿರ್ಣಧರ್ಮವ[1]ನಳಿವ[1] ಮಾತೇಕಕಟ ನುಡು ನಿನ್ನ ||
ನಿನ್ನಿಯಾಕ್ಷಿ ಸಾವ ಬಯಸಿದ
ಕ್ಷನ್ನದುದ ನಿಲೆ ಚಂಡಿ ನುಡಿದೈ
ನಿನ್ನೊಡನೆ ನಾನೇನ ಹೇಳುವೆನೆಂದು ಚಿಂತಿಸಿದ || ೨೩ ||

ಇಂತೆನುತ ಜನಕಜೆಯನಾ ವನ
ದಂತರವ ದೇವಿಯರಿಗರ್ಪಿಸಿ
ಮುಂತೆ ದುಃಖಾಕುಲಿತ ಲಕ್ಷ್ಮಣ ರಾಮನೆಡೆಗಾಗ ||
ಚಿಂತೆಯಿಂದವೆ ಪೊಲ್ಲನೈದಲಿ
ಕಂತರವ ಕಾಣುತ್ತ ರಾವಣ
ನಾಂತು ಬಂದನು ಭಿಕ್ಷುವೇಷದಿ ಸೀತೆಯಿದ್ದೆಡೆಗೆ || ೨೪ ||

ದಂಡಕಾಷಾಯಾಂಬರಾಜಿನ
ಗುಂಡಿಕೆಯನಾಂತ್ಯೆತರುತ್ತಿಹ
ಲಂಡ ಯತಿಯೆಂದರಿಯದೇ ಬೇಗೆದ್ದು ಭಕುತಿಯಲಿ ||
ಪಂಡಿತನೆ ಬಿಜಮಾಡಿ ಯೆನುತು
ದ್ದಂಡನನು ಪೂಜಿಸುತವಳು ಫಲ
ಗೆಂಡೆ ಪಕ್ವಾದಿಗಳನಿತ್ತಳು ಹಿರಿಯರವರೆನುತ || ೨೫ ||

ವಿಶ್ರಮಿಸಿಕೋ ಮುನಿಪ ನೀ ಹೊರ
ಗಾಶ್ರಮದಿ ಫಲಭೋಜನಾದಿಯ
ವಶ್ಯ ಭುಂಜಿಸು ಬಪ್ಪರೆನ್ನಯ ಭರ್ತರೀಕ್ಷಣಕೆ ||
ಶಿವಶ್ಯದಿಂಗತಿ ಪ್ರೀತಿಯೆಸಗುವ
ನೀಶ್ವರ ಧ್ಯಾನದಲಿ ಯೆನ್ನಗ
ನಿಶ್ಚ ಪುಸಿಯೆಲೆ ನಿವಗೆ ಕುಳಿತಿರು ಮನಕೆ ಬಹಡೆನಲು || ೨೬ ||

1 ನುಡಿವ (ಖ)

ರಾವಣನಿಗೆ ಮಾರೀಚನ ಹಿತೋಪದೇಶ



ಸೀತೆ ಲಕ್ಷ್ಮಣನನ್ನು ರಾಮನ ಬಳಿಗೆ ಕಳುಹಿದ್ದು



ಎಂದೆಡೆಂದನು ಭಿಕ್ಷು ನೀನಾ
ರಿಂದುಮುಖಿ ಕಮಲಾಕ್ಷಿ ಪತಿಯಾ
ರಿಂದು ನೀವೇಕಿದ್ದಿರೀ ದಾನವರ ವನದೊಳಗೆ ||
ಮುಂದೆ ನೀ ಹೇಳಿನ್ನು ನಿಜಗತಿ
ಯಂದವನು ಬಳಿಕೆಂಬೆನಾ ನಿಂ
ತೆಂದಳಾ ಭಿಕ್ಷುವಿಗೆ ಮಾಯಾ ಸೀತೆ ಸಂಗತಿಯ || ೨೭ ||

ದೊರೆಯಯೋಧ್ಯಾ ರಾಜ ದಶರಥ
ವರತನಯ ಹಿರಿಯವನು ರಾಮನು
ಪರಮ ಲಕ್ಷಣವಂತನಾತನ ಧರ್ಮಸತಿ ನಾನು ||
ತರುಣಿ ಜಾನಕಿ ಲಕ್ಷ್ಮಣಾನ್ವಯ
ಕಿರಿಯ ರಾಮಗೆ ತಂದೆಯಾಜ್ಞೆಯ
ಲಿರೆ ಚತುರ್ದಶ ವರುಷ ಬಂದೆವು ವನಕೆ ಸತ್ಯದಲಿ || ೨೮ ||

ನೀವದಾರೆನೆ ಭಿಕ್ಷು ನುಡಿದನು
ನಾವು ರಾಕ್ಷಸರೊಡೆಯ ರಾವಣ
ಭಾವಿಸಲು ಪೌಲಸ್ತ್ಯ ತನಯನು ಕಾಡು ನಿನ್ನುವನು ||
ಬೇವ ಕಾಮಜ್ವರದಲೊಯ್ಯಲು
ದೇವಿ ಬಂದೆನು ಮುನಿಯ ವೇಷದ
ಲಾವ ಸುಖ ರಾಮನಲಿ ತನ್ನನು ಭಜಿಸು ನೀನೆಂದ || ೨೯ ||

ಉಣ್ಣು ತನ್ನಯ ಮನೆಯ ಭೋಗವ
ಗಣ್ಯವಿಲ್ಲದ್ದನಿತನೆಲ್ಲವ
ಬಣ್ಣ ಬೆಳಿನವನುಟ್ಟು ಸುಖದಿಂ ವನದಲೇನುಂಟು ||
ಹಣ್ಣು ಹಂಪಲ ತಿಂಬುದೇಕೆನೆ
ಸುಣ್ಣ ಜಲದೊಳಗಿಂಗಿದಂತ
ಕ್ಕಣ್ಣ ವಾಕ್ಯವ ಕೇಳಿ ನುಡಿದಳು ಸೀತೆ ಭಯಭೀತೆ || ೩೦ ||

ಎಲವೊ ನೀನಿಂತೆಂದಡೀಕ್ಷಣ
ದೊಳಗೆ ಕೊಲುವನು ರಾಮ ನಿನ್ನನು
ತಳುವ ಮಾಡದೆ ನಿಮಿಷ ಬಹನೀಕ್ಷಣ ತನುಜ ಸಹಿತ ||
ಮೊಲನು ಸಿಂಹನ ಸತಿಯ ಮುಟ್ಟಲ
ಡಳವೆಯರಿಯಾ ತನ್ನ ತುಳುಕುವ
ಬಲವದಾರಿಂಗುಂಟು ಹೋಗೆಲೆ ಭಣಗೆ ನೀನೆನಲು || ೩೧ ||

ಖೂಳ ನೀ ರಾಮಾಸ್ತ್ರ ಹತಿಯಲಿ
ಬೀಳುವುದೆ ಧಿಟ ಯವನಿಯಲ್ಲೆನೆ
ಕೇಳಿ ರಾವಣ ಕೋಪದಲಿ ತೋರಿದನು ನಿಜತನುವ ||
ಕಾಲಮೇಘದ ಕಾಯ ದಶಶಿರ
ಜಾಳ ತೋಳಿಪ್ಪತ್ತು ಭೀಷಣ
ಮಾಲೆಗಂಗಳ ಭೂತವೆನೆ ವನದೇವಿಯರು ಬೆದರೆ || ೩೨ ||

ಎತ್ತಿದನು ನೆಲಸಹಿತಲವನೀ
ಪುತ್ರಿಯನು ಧಾರುಣಿಯ ಬಗೆದಿ
ಪ್ಪತ್ತು ತೋಳಲಿ ಮುಟ್ಟದವಳನು ನೆಗಹಿ ರಥದೊಳಗೆ ||
ಪ್ರತ್ಯಯದಲೇರಿಸಿ ವಿಹಾಯಸ
ದತ್ತಣಾ ಮಾರ್ಗದಿ ನಡೆಯೆ ಕರೆ
ದತ್ತಳವನಿಜೆ ರಾಮ ಹಾ ಸೌಮಿತ್ರ ಹಾಯೆನುತ || ೩೩ ||

ಕಡು ಕೃಪಣೆ ಬ್ಬಾಯಿಡುತ ಕಂಬನಿ
ಗಡಲಲೊದರುತ ರಾಮ ರಾಘವ
ಕಡೆಗಣಿಸಿದ್ಯೆ ತನ್ನನೆನುತವನಿಯನು ನೋಡುತ್ತ ||
ಮಡದಿ ಹಳವಿಸುತ್ತೈದುತಿರಲಾ
ನುಡಿಯ ಕೇಳಿ ಜಟಾಯು ಶೀಘ್ರದಿ
ನಡೆದು ಬಂದನು [1]ಗಗನ[1]ದೆಸೆಯಿಂ ತೀಕ್ಷ್ಣ ತುಂಡದಲಿ || ೩೪ ||

---

1 ನಗದ (ಖ)

ಕಳ್ಳ ನಿಲು ನಿಲ್ಲೆಲ್ಲಿಗೈದುವೆ
ವಳ್ಳೆ ಗರುಡನ ಮರಿಯು ತುಡುಕಿತೆ
ಹೊಲ್ಲೆಹವೆ ನಾನಿರಲು ಸಾಕ್ಷಾಲ್ಲೋಕನಾಯಕನ ||
ವಲ್ಲಭೆಯ ನೀನೊಯ್ದೆಯಾ ಹತಿ
ಯಿಲ್ಲದಾ ವೇಳೆಯದಲಧ್ವ
ಕಳ್ಳ ಹವಿಯನು ತುಡುಕಿ ನಾಯ್ಕೊಡು ತಿಂಬುವೋಲೆಂದ || ೩೫ ||

ಎನುತ ರಥವನು ತೀಕ್ಷ್ಣ ತುಂಡದ
ಕೊನೆಯುಲಪ್ಪಳಿಸಿದರೆ ಹುಡಿ ಹುಡಿ
ಯೆನಿಸಿತಾ ರಥವೆರಡು ಕಾಲಲಿ ತೋಳನಿಪ್ಪತ್ತ ||
ಘನ ಸಹಸಿ ಚೂರ್ಣವನು ಮಾಡುತ
ಧನುವ ಮುರಿದೀಡಾಡಿ ರಾವಣ
ಜನಕಸುತೆಯನು ಬಿಟ್ಟುಕೊಂಡನು ಖಡುಗವನು ಜಡಿದು || ೩೬ ||

ದುಷ್ಟನಾಹವದಲ್ಲಧರ್ಮದೆ
ಲೊಟ್ಟವಿಸಿದನು ಪಕ್ಷಿರಾಜನ
ರಟ್ಟೆಯೆರಡನು ಕಡಿದಡುರುಳಿದನವನಿಗಾಕ್ಷಣಕೆ ||
ನೆಟ್ಟನಿದ್ದುದು ಪ್ರಾಣ ಮಾತ್ರವು
ಕಟ್ಟಳೆಯ ಪ್ರಾರಬ್ಧದಿಂ ಬಳಿ
ಕಿಟ್ಟಳಿಸಿ ಪ್ರತಿ ರಥದಿ ಸೀತೆಯನೆತ್ತಿ ಹಾಕಿದನು || ೩೭ ||

ತಾಮಸಾಧಮನೊಯ್ಯುತಿರಲಾ
ಭೂಮಿಸುತೆ ಹಾ ರಾಮ ರಾಮಾ
ಸ್ವಾಮಿ ಜಗತೀನಾಥ ರಾಮನಿಮಿತ್ತ ಬಾಂಧವನೆ ||
ಭಾವಿಸಿಯಲಾ ನಿನಗೆ ತಾನೀ
ಭೀಮ ರಾಕ್ಷಸನೊಯ್ವನೆನ್ನ
ಕ್ಷೇಮವಾರದು ಬಿಡಿಸು ರಾಘವ ಯೆನುತೊರಲುತಿಹಳು || ೩೮ ||

ಹಾಹ ಲಕ್ಷ್ಮಣ ನಾನು ನಿನ್ನನು
ಬಾಹಿರನ ಮಾಡಿದನ ವಾಗ್ವಿ
ಜ್ಞಾಹತಿಯಲಿಲೆ ದೇವರಾ ಕ್ಷಮಿಸೆನ್ನ ಸನ್ಮತಿಯ ॥
ಊಹಿಸಿದರಪರಾಧಿ ನಾ ನಿನ
ಗೈಹಿಕ ಪ್ರಾರಬ್ಧ ನುಡಿಯನು
ತ್ರಾಹಿ ಮಾಂ ರಘುನಾಥ ಲಕ್ಷ್ಮಣ ಯೆನುತ ಹಲುಬಿದಳು ॥ ೩೯ ॥

ಲೋಕವೆಲ್ಲವು ಕೇಳಿ ರಾಘವ
ನಾಕೆ ನಾ ನಿರ್ದೋಷಿ ಬಲುಪಿನ
ಯಿೂ ಕುಠಾರ ದಶಾಸ್ಯನೊಯ್ವನು ಕಪಟದಲಿ ಬಂದು ॥
ಬಾಕುಳಿಗನೆಂದೊದರುತವನಿಯ
ನೀ ಕೆಳಗೆ ನೋಡುತ್ತ ರಾಮನ
ಶೋಕ ಹಂಬಲಿಸುತ್ತ ಹೋಹಳು ರಾಮ ರಾಮೆನುತ ॥ ೪೦ ॥

ವಾಯು ವೇಗದಿ ರಥದ ಮೇಲೆ ವಿ
ಹಾಯಸದಲ್ಲೈ ವೊಯ್ವುತಿರೆ ಸೀ
ತಾ ಯುವತಿ ಕೆಳಗೀಕ್ಷಿಸುತ್ತಿರೆ ಪರ್ವತಾಗ್ರದಲಿ ॥
ಮಾಯಿ ಕಂಡಳು ಪಂಚ ವಾನರ
ರಾಯರಿರೆ ಕೆಳಯಿಂಕೆ ಬೇಗಲು
ಪಾಘದಿಂದುತ್ತರೀಯ ವಸ್ತ್ರಾರ್ಧವನು ಸೀಳಿದಳು ॥ ೪೧ ॥

ಕಳಚಿ ಕರ್ಣಾಭರಣವೆಲ್ಲವ
ಚಳಕದಿಂ ಕಟ್ಟಿದಳಾ ಕಪಿ
ಗಳ ಹೊರಗೆ ರಾಘವಗೆ ಹೇಳುವದೆಂದು ಸಂಜ್ಞೆಯಲಿ ॥
ಘಳಿಲನಾ ರಾವಣನು ಶರಧಿಯ
ಕಳಿದು ಲಂಕೆಗೆ ಹೋದನಾ ನಿಜ
ನಿಳಯ ವಂತಃಪುರಕೆ ಮಾಯಾ ಸೀತೆಯನು ಕೊಂಡು ॥ ೪೨ ॥

ಹೊಕ್ಕನಂತಃಪುರವಶೋಕಾ
ವೃಕ್ಷವನದಲ್ಲಿರಿಸಿ ಸೀತೆಯ
ರಕ್ಕಸೀಯರ ವೃಂದವನು ಸುತ್ತಿರಿಸಲವರಗಳು ||
ರಕ್ಷಿಸುತ್ತಿರೆ [1]ಮಂತ್ರ[1] ಬುದ್ಧಿಯ
ಲಕ್ಕಟಿಸುತಂಬಿಕೆಯನಾರಸು
ತಕ್ಕಿಸದು ಪ್ರಾರಬ್ಧ ಮಾನವರಾದವರನೆಂದ // ೪೩ ||

ತನುವಿಡಿದರಿಗೆ ಶೋಕವೋಹದ
ವನಧಿಯಲಿ ಮುಳುಗುವದು ಲೋಕದ
ಜನರೋಳಾಂರಾಗಲಿಯೆನಿಪ್ಪುದು ಸತ್ಯವೆನಿಪುದನು ||
ಜನಕಸುತೆ ತನುವಿಡಿದು ತೋರಳೆ
ಯನುಭವಕೆ ಬರಲಜ್ಞರಿಂಗಂ
ಜನ ನಿಭಾಂಗನ ರಾಣಿಯಲ್ಲದುಡೆಲ್ಲಿಯದು ದುಃಖ || ೪೪ ||

ದೇವನಾಗಲಿ ದೇಹವಿಡಿದಡೆ
ಜೀವಶಬ್ದಕೆ ಸಲುವ ಜೀವನು
ಭಾವವದುವೇ ದುಃಖವೋಹಾದಿಗಳ ರೂಪದಲಿ ||
ಬೇವುದನುದಿನವಿದನರಿತವರು
ಜೀವ ಭಾವವ ತೊರೆವುದನುದಿನ
ವಾವಗಂ ವೈರಾಗ್ಯ ಬಲದಲಿ ಕಾಂತೆ ಕೇಳೆಂದ || ೪೫ ||

ಮೆಚ್ಚದೇ ವಿಷಯಾದಿ ಭೋಗವ
ತುಚ್ಛವೆಂದರಿದನವರತ ಮನ
ದೆಚ್ಚರೀ ತನ್ಮಾತ್ರ ತತ್ವವಿವೇಕವನು ತಿಳಿದು ||
ಸಚ್ಚರಿತ ಕರ್ಮವನು ಮಾಡಿ ಫ
ಲೋಚ್ಚತದಿ ರಾಮಾರ್ಪಣಾಗಿಪ
ಸಚ್ಚಿದಾತ್ಮಕನಾಗಿ ಪಡೆವುದು ದೇಶ ವಿರಹಿತವ || ೪೬ ||

---

1 ಮಾತ್ರ (ಖ)

ಪ್ರಾರಬುಧ ಸಂಭೋಗದಿಂದವೆ
ತೀರದಾರಿಗು ಬಿಡದು ಸೀತಾ
ನಾರಿಯತಿ ಕೃಶಿ ದೀನೆ ಪತಿಕ:ವ್ಯಾನು ವರ್ಜಿತದಿ ||
[ಬಾರಿಬಾರಿಗು ಹಂಬಲಿಸುತಿರೆ
ಕ್ರೂರ ರಾವಣ ತನ್ನ ರಾಕ್ಷಸ
ನಾರಿ ವೃಂದವ ಕಾಯಲಿಟ್ಟನು ಭೂಮಿಜೆಯ ಹೊರಿಗೆ || ೪೭ ||

ಜಾನಕಿಯು ತಾನಾಚರಿಸುತಿಹ
ಸ್ನಾನ ಪಾನಗಳನ್ನು ತೊರೆಯುತ
ಮಾನಸಿಕ ವೇದನೆಯನನುಭವಿಸುತ್ತ ಬಸವಳಿದು || ]
ನಾನವಿಧ ವಿಂಹಲದಿ ಹಳವಿಸು
ತಾನತಪ್ರಿಯ ರಾಮ ರಾಮಾ
ದೀನ ವತ್ಸಲ ಸಲಹು ಸಲಹೆನುತಿರ್ದಳನವರತ || ೪೮ ||

ಸಂಧಿ ಯಿಪ್ಪತ್ತಾರು ಪದಗಳ
ವೃಂದ ಪಂಚಾಶತ್ವ ಬಂಧಗ
ಳಿಂದೆಸೆಯಲದರೊಳಗೆ ಭಾವಿಸೆ ಗುಣರಹಿತವಾಗೆ ||
ಒಂದೆ ಮನದಿಂ ಕೇಳಲತಿ ಮುದ
ದಿಂದ ಸಲಹುವನಾನತಪ್ರಿಯ
ಬಂಧು ಗುರು ನಿತ್ಯಾತ್ಮ ಲಕ್ಷ್ಮಿನೃಸಿಂಹನೊಲವಿನಲಿ || ೪೯ ||

ಅಂತು ಸಂಧಿ ೨೬ ಕ್ಕೆ ಪದ ೧೧೪೭ ಕ್ಕೆ
ಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ



§ ಶ್ರೀ ರಾಮಚಂದ್ರಾಯ ನಮಃ §



# ಇಪ್ಪತ್ತೇಳನೆಯ ಸಂಧಿ

## ಸೀತಾನ್ವೇಷಣೆ ಜಟಾಯು ಮೋಕ್ಷ

ಸೂಚನೆ ॥ ಸೀತೆಯರಸುತ್ತರಸುತಾ ರಘು
ನಾಥನಾ ಪ್ರಾಕೃತರ ತೆರನ
ಲ್ಲಾತುಮ ಶ್ರೀರಾಮನಿತ್ತ ಜಟಾಯು ಮೋಕ್ಷವನು ॥

ಪದ ॥ ಕೇಳು ಪಾರ್ವತಿ ಕಪಟಿ ಮಾಯಾ
ಖೂಳ ರಾಕ್ಷಸ ಕಾಮರೂಪಿಯು
ಕಾಲನೂರಿಗೆ ಕಳುಹಿ ರಾಮನು ತಿರುಗಿಯಾಶ್ರಮಕೆ ॥
ಮೇಲೆ ಬರುತಿರಲೊ[1]ಣ[1]ಗಿದಾಸ್ಯದ
ಭೀಳ ಚಿಂತೆಯ ಲಕ್ಷ್ಮಣನ ಕಂ
ಡಾಲಿಸುತ ಪರಮಾತ್ಮ ನೆರೆ ತನ್ನೊಳಗೆ ಯೋಚಿ[2]ಸಿದ[2] ॥೧॥

ಸೀತೆ ಸುಖದಲ್ಲಿಹಳು ಮಾಯಾ
ಸೀತೆಯನು ಖಳನೊಯ್ದ ಲಕ್ಷ್ಮಣ
ನೀ ತೆರನ ತಾನರಿಯನೆನ್ನಯ ಯೋಗ ಮಹಿಮೆಯನು ॥
ನಾ ತಿಳಿಯೆ ನೀ ದುಃಖಿಯಾದ ಪ
ರಾತುಮನು ಧಿಟಕಾದರೂ ಶೋ
ಕಾತಿಶಯವನು ತೋರಬೇಹುದು ತಾನನುಜಗೆಂದ ॥೨॥

---

1 ರ (ಖ) 2 ಸುತ (ಖ)

ಲೋಕ ಪ್ರಾಕೃತ ತರದ ಮಾನವ
ರಾಕೃತಿಯಲೇ ಹೊರಗೆ ಮಾಳ್ಪೆನು
ಶೋಕವನು ವಂಚಿಸುವೆನಿವರರವನು ಮರುಗಿ ನರನಂತೆ ||
ನಾ ಕಡೆಗೆ ಶೋಕಿಸದೆ ಮನೆಯು
ಲ್ಲೇ ಕುಳಿತರಾರಕಟ ಕೊಲುವರು
ಲೋಕ ಕಂಟಕ ದೈತ್ಯ ಕೋಟಿಯನೆಂದನಾ ರಾಮ || ೩ ||

ನಾನು ಶೋಕಿಸಿ ದುಃಖ ತತ್ವ
ಜ್ಞಾನಿ ಕಾಮುಕ ಮರ್ತ್ಯರಂದದಿ
ಮಾನಿನಿಯ ಬಳಿಕರಸುತರಸುತ ಮುಂದೆ ಮುಂದೈದಿ ||
ದಾನವಾಧಮ ರಾವಣನ ಕುಲ
ಸೇನೆ ಸಹ ಸಂಹರಿಸಿ ತನ್ನಯ
ಜಾನಕಿಯನೊಡಗೊಂಬೆನಗ್ನಿಯ ನಡಗಿದುತ್ತಮೆಯ || ೪ ||

ನನ್ನ ನೇಮದಿಯಡಗಿಹಳಲಾ
ವನ್ಹಿ ಮಧ್ಯದಿ ಸೀತೆ ದಾನವ
ರನ್ನು ಕೊಂದಲ್ಲಿಂದ ಮೇಲವಳನು ಕರೆದುಕೊಂಡು ||
ಮುನ್ನಿನಾಯೋಧ್ಯಾಪುರದ ಸಂ
ಪನ್ನ ಗೃಹಕ್ಕೈದುವೆನು ನಾನೀ
ಭಿನ್ನ ಮಾನವರಂತೆ ತೋರಲಿಬೇಕಲಾ ಯೆಂದ || ೫ ||

ವ್ಯರ್ಥದಲಿ ತಾ ಚರಿಸೆನಜನ
ಭ್ಯರ್ಥಿಸಲು ಮಾನುಷ್ಯ ರೂಪದಿ
ವರ್ತಿಸುವೆನೀ ಮನುಜ ಭಾವದಲೇ ಕೆಲವು ಕಾಲ ||
ಮರ್ತ್ಯರೀ ಮಾಯಾ ಮನುಷ್ಯ ಚ
ರಿತ್ರದಲಿ ನಾ ನಡೆದು ಮಹಿಮೆಯ
ಕೀರ್ತಿಸುತ ಕೇಳುತ್ತ ಪಡೆವರು ಮುಂದೆ ನಿಜಪದವ || ೬ ||

ಮುಂದೆ ಕಲಿಕಾಲದಲಿ ಜನಿಸುವ
ಮಂದರಿಗೆ ತನ್ನಮಳ ಚರಿತಾ
ನಂದ ಕೀರ್ತನ ಪೂಜೆ ಮೂರ್ತಿಧ್ಯಾನ ಮತ್ಸೇವೆ ||
ಎಂದೆನಿಪ ನಿಜ ಭಕ್ತಿಯಲ್ಲದೆ
ದಂದುಗದ ಜೀವರಿಗೆ ಬೇರಿ
ನ್ನೊಂದು ಮಾರ್ಗಗಳಿಲ್ಲ ನಿಖಿಳೌಘಹರವೆಂದ || ೭ ||

ಅಪ್ರಯಾಸದಲೆನ್ನ ಭಕುತಿಯ
ಲುಪ್ಪರದ ಮೋಕ್ಷವನು ಪಡೆವರು
ಕಲ್ಪಶತಕೋಟಿಯಲಿ ಪುನರಾವೃತ್ತಿ ರಹಿತವನು ||
ದೃಷ್ಟಿಯೋಜನವಲ್ಲ ನಾನಡ
ವಿಪ್ರಕಾರವು ಜೀವ ಜಡರಿಗೆ
ಚಿತ್ಪ್ರಕಾಶಿಕ ಸಾಧನದ ಸನ್ಮಾರ್ಗವೆನುತಿರ್ದ || ೮ ||

ನಾನು ವಿಭುವಾದಡೆಯು ಲೌಕಿಕ
ದಾನುಕೂಲದಿ ನಡೆಯಬೇಕ
ಜ್ಞಾನಿಗಳ ಪರಿತತ್ವಕೋವಿದರಾಚರಿಸುವಂತೆ ||
ಏನನೂ ಬಿಡಬಾರದೀಶ್ವರ
ತಾನೆನಿಸಿದವನಾದಡೂ ವಿ
ಜ್ಞಾನವರಿತರು ಲೋಕಹಿತ ಸನ್ಮಾರ್ಗ ವೃತ್ತಿಗಳ || ೯ ||

ಇಂತು ನಿಶ್ಚೈಸುತ್ತ ಲಕ್ಷ್ಮೀ
ಕಾಂತ ಕಂಡನು ಮುಂದೆ ನಡೆ ತ
ಪ್ಪಂತರಂಗ ವ್ಯಥೆಯ ಲಕ್ಷ್ಮಣ ದೇವನನು ರಾಮ ||
ಚಿಂತಿಸುವವೋಲೆಂದನೇಕೀ
ಪ್ರಾಂತಕೈದಿದೆ ತಮ್ಮ ತನ್ನಯ
ಕಾಂತೆ ಸೀತೆಯ ಬಿಟ್ಟೆಕಟ ಮತ್ಪ್ರಾಣವಲ್ಲಭೆಯ || ೧೦ ||

ಸೀತೆಯನು ದಾನವರು ತಿಂದರೊ
ಪಾತಕಿಗಳೊಯ್ದರೊ ಮೇಣತಿ
ಕಾತರಿಸುತಿಹಳೋ ಯೆನಲು ಕೈಮುಗಿದು ಮೊರೆಯಿಡುತ ||
ಭ್ರಾತ ಚಿತ್ತವಿಸಿತ್ತ ದಾನವ
ತಾತ ಲಕ್ಷ್ಮಣ ಯೆಂದು ನಿಮ್ಮಯ
ಮಾತಿನಂದದಿ ಕರೆಯೆ ಭಯದಿಂದೆಂದಳೆನ್ನೊಡನೆ || ೧೧ ||

ಬರಲು ತನ್ನೊಡನೆಂದಳೇಳ
ಕ್ಕರಲಿ ರಾಘವ ಕರೆವನೆಂದೆನೆ
ಮರುಗಬೇಡೌ ರಾಮನುಡಿಯಲ್ಲೊಬ್ಬ ದಾನವನು ||
ಕರವನೆಂದೆನೆ ಕೆಟ್ಟನುಡಿಯಿಂ
ಜರೆದಳೆನ್ನನು ರಾಮ ತಾನದ
ನೊರೆಯಬಾರದು ನಿಮ್ಮ ಮುಂದೆಂದೆನುತ ಬಿಸುಸುಯ್ದ || ೧೨ ||

ಅಲ್ಪ ಮಾತಿಗೆ ಬಾರನಾ ಪ್ರಾ
ಣ ಪ್ರಯಾಸಾ ನುಡಿಯವಧಿಯನು
ಕಪ್ಪಗೇಳಿದು ಬಂದನೆಂದಡೆ ನುಡಿದ ರಾಘವನು ||
ಅಪ್ರಕಾರವೆಯಾದಡೂ ನೀ
ಬಪ್ಪುದನುಚಿತ ಬಿಟ್ಟು ನಾರಿಯ
ರಪ್ರಬುದ್ಧಿಗೆ ಬಿಟ್ಟು ಬಂದೆ ಶುಭಾಂಗನೆಯನೆಂದ || ೧೩ ||

ತಿಂದು ಹೋದರೊ ರಕ್ಕಸರು ತಾ
ನಿಂದುವದನೆಯನೊಯ್ದರೋ ಮೇ
ಣಿಂದದಕೆ ಸಂಶಯವು ಬೇಡೆನುತೈದಿ ಬೇಗದಲಿ ||
ಬಂದರಾಶ್ರಮದೊಳಗೆ ಜನಕನ
ನಂದನೆಯ ಕಾಣದೆಯರಸಿ ರಘು
ನಂದನನು ಕರೆದತ್ತನತಿ ದುಃಖದಿ ವಿಲಾಪಿಸುತ || ೧೪ ||

ಹಾ ರಮಣಿ ಹಾ ಸೀತೆ ಯಾತಕೆ
ಬಾರೆ ಹತ್ತಿರೆ ಯೆತ್ತ ಹೋದ್ಯೆ
ನಾರಿಯಾಶ್ರಮದಿಂದ ಬಿಟ್ಟಿನ್ನೊಡನೆ ಮೋಹಿಸಲು ||
ಸಾರಿ ಲೀಲೆಯಲಡಗಿದೆಯೊ ತ
ನ್ನಾರಯಿಕೆಗಿನ್ನಾರೆನುತ್ತತಿ
ಹಾರಯಿ ಸುತರಸಿದನು ವನದಲ್ಲಿರಲು ರಘುನಾಥ || ೧೫ ||

ಕಂಡಿರೇ ವನದೇವಿಯರು ಮೆ
ತ್ಪುಂಡರೀಕದಳಾಕ್ಷಿ ಸೀತೆಯ
ಕಂಡಿರೇ ಮೃಗನಿಕರ ಪಕ್ಷಿ ನೃಪಾಲರಾದಿಗಳು ||
ಕಂಡಿರೇ ಮುನಿನಿಕರ ತನ್ನಸು
ಮಂಡನೆಯ ನೆನುತರಸಿ ಕಾಣದ
ಖಂಡಮಹಿಮನು ಮರ್ತ್ಯರಂತೆ ವಿಲಾಪಿಸುತ್ತಿರ್ದ || ೧೬ ||

ಸರ್ವದೃಗು ಸರ್ವಾತ್ಮ ಸರ್ವಗೆ
ಸರ್ವಗತ ಸೀತೆಯನು ಅರಸುವ
ಸರ್ವಪರಮಾನಂದ ರೂಪನು ಶೋಕಿಸುವನೆ ಗಡ ||
ಪರ್ವತೋಪಮನಚಲನತ್ತಿ
ತ್ತುರ್ವಿಯಲಿ ಹರಿದರಸಿ ಬಳಲುವ
ಖರ್ವವಂದ್ಯನು ನಟಿಸುತಿರ್ದನು ಮನುಜಲೀಲೆಯಲಿ || ೧೭ ||

ತಾನೆ ನಿರ್ಮಮ ನಿರಹ ಹಮ್ಮಿನ
ಭಾನದೂರಾನಂದನದ್ವಯ
ಹಾ ನಿರಹಿತಾಖಂಡ ಚಿತ್ಪರಿಪೂರ್ಣನಾದರೆಯು ||
ಮಾನಿನಿಯೆ ಮಮಭಾರ್ಯೆ ಹಾ ಗುಣ
ಧೇನು ಹಾ ಯೆನ್ನರಸಿ ಹಾ ಯೆನು
ತಾನತಪ್ರಿಯ ದುಃಖಿಸುವ ಮಾಯಾ ಮನುಜರಂತೆ || ೧೮ ||

ಅರಿಯದಜ್ಞರಿಗೀ ರಘೂತ್ತಮ
ನೊರಲುವನು ಸತಿಯಗಲಿ ಮಾಯೆಾ
ನಿರುಗೆಯಲಿ ಸಿಕ್ಕಿದ್ದ ಜೀವನೊ ಯೆಂಬವೋಲಿಹನು ||
ಹೊರಗೆ ತೋರುವನಲ್ಲದೇ ನಿಜ
ನಿರುಗೆಯಿಂತಿದನಾತ್ಮ ವಿದರಿಗೆ
ಬರಿಯ ಪರಮಾನಂದ ಸುಖಪರಿಪೂರ್ಣನೆಲೆ ಗಿರಿಜೆ || ೧೯ ||

ವೊಳಗೆ ರಾಗವಿಹೀನ ದೇಹದ
ಬಳಿಯ ರಾಗಾಸಕ್ತನಂತಿಹ
ವೊಳಗೆ ತೋರದಖಂಡ ತನುವಿಂ ಖಂಡಿತಾಕಾರ ||
ವೊಳಗೆ ದುಃಖಿಸ ಹೊರಗೆ ದುಃಖಿಪ
ಬಳಿಕ ದುಃಖಾಕುಳಿತನಂತಿಹ
ಹಳವಿಸುತ್ತರಸಿದನು ಸೀತೆಯನನುಜ ಸಹವಾಗಿ || ೨೦ ||

ಮುಂದೆ ಬಿಟ್ಟರೆನೆಲದಿ ರಥಧನು
ನಿಂದ ಕೂಬರಸಹಿತ ರಾಘವ
ನೆಂದ ನೋಡೋ ತಮ್ಮ ಸೀತೆಯನಾಳುಕೊಂಡೊಯ್ಯೆ ||
ಬಂದವನ ಗೆಲಿದನ್ಯನೊಬ್ಬನು
ಬಂದಿವಿಡಿದನು ಕಾದಿ ಸೀತೆಯ
ಸಂದೆಹವೆ ತಾ ಕಾದಿದ ಸ್ಥಳವಿದನು ನೋಡೆಂದ || ೨೧ ||

ಮತ್ತೆ ಕಿಂಚಿದ್ದೂರ ಬರೆಬರೆ
ಹತ್ತಿರಾ ನೆಲವಲ್ಲಿ ಕಂಡನು
ರಕ್ತದಿಂ ನೆನೆದೊಡಲ ಪಕ್ಷಿಯ ಪರ್ವತೋಪಮನ ||
ಇತ್ತಲಿದೆಯಿದೆ ನೋಡು ಲಕ್ಷ್ಮಣ
ಮತ್ತಕಾಶಿನಿ ಜನಕ ತನುಜೆಯ
ತುತ್ತಗೊಂಡಿಲ್ಲಿಹನು ರಾಕ್ಷಸನೆಂದನಾ ರಾಮ || ೨೨ ||

ಡ್ಯೆ (ಖ)

ಕಾಪಟಿಗ ಯೆನ್ನರಸಿಯನು ತಿಂ
ದೀ ಪರಿಯ ತೃಪ್ತಿಯಲಿ ಬಿದ್ದಿಹೆ
ಚಾಪವನು ತಾ ಶಮ್ಮ ಕೊಲುವೆನು ಶರವನೆಂದೆನಲು ||
ತಾಪದಲಿ ಕೇಳ್ದಾ ಜಟಾಯು
ಶ್ರೀಪತಿಯ ವಚನವನು ಭಯದಲಿ
ಲೇಪದಿಂ ನರಳುತ್ತ ನುಡಿದನು ಪಕ್ಷಿ ರಾಘವಗೆ || ೨೩ ||

ನನ್ನ ಕೊಲಬೇಡಕಟ ರಾಘವ
ನಿನ್ನ ಪ್ರಿಯೆಗಾಗಿತ್ತೆ ದೇಹವ
ಬನ್ನವಡುತಿಹೆ ನಾನು ಪಕ್ಷಿ ಜಟಾಯು ಯೆಂಬವನು ||
ಚೆನ್ನೆ ಸೀತಾಂಬಿಕೆಯ ರಾವಣ
ಕುನ್ನಿ ಕದ್ದೊಯ್ಯುತಿರೆ ಕಾದಿದೆ
ನೆನ್ನ ಸಾಹಸವಿದ್ದನಿತರಿಂ ಬಹುವಿಧದಲೆಂದ || ೨೪ ||

ದುಷ್ಟ ಮರ್ದನ ಕೇಳು ರಾವಣ
ನಟ್ಟಿ ಕರವಿಪ್ಪತ್ತ ಮುರಿದೆನು
ಹಿಟ್ಟುಮಾಡಿದೆ ರಥವ ಧನುಃಕೂಬರವ ಛತ್ರಗಳ ||
ಕಟ್ಟ ಕಡೆಯಲಿ ಕಡಿದನೆನ್ನಯ
ರಟ್ಟೆಯನು ಜಗದೀಶ ತನುವನು
ಬಿಟ್ಟು ಕಳೆವೆನು ರಾಮ ನಿನ್ನಿದಿರಿನಲಿ ತಾನೆಂದ || ೨೫ ||

ನಿನ್ನಿದಿರಿನಲಿ ತನುವ ಬಿಡುವೆನು
ತನ್ನ ನೋಡೈ ರಾಮ ಯೆನಲಾ
ಕರ್ಣನವ ಮಾಡುತ್ತ ವಿಹಗನ ನುಡಿಯ ರಾಘವನು ||
ಬನ್ನವಡುತೀ ದೀನ ಕಂಠಗ
ತೋನ್ನತ ಪ್ರಾಣನನು ಕಂಡು ಕೃ
ಪಾರ್ಣವನು ದುಃಖಾಶ್ರುನಯನದಿ ಮುಟ್ಟಿದನು ಖಗನ || ೨೬ ||

ತಡವಿದನು ಹಸ್ತದಲಿ ಮೈಯ್ಯನು
ಕಡುಗರುಣದಿಂದೆಂದನಕಟಾ
ಮಡಿವೆಯ್ಯ ಮತ್ಕಾರ್ಯಭಾಗಿಗೆ ಬಳಲಿ ಸೀತೆಯನು ||
ತುಡುಕಿಕೊಂಡವನಾರು ಹೇಳೆ
ನ್ನಡರಿನಪ್ರಿಯಬಂಧು ನೀನೆನ
ಲೊಡಲಗಾಯದಿ ರಕ್ತವನು ಹೊರಗುಗುಳುತಿಂತೆಂದ || ೨೭ ||

ರಾಮ ಕೇಳೈ ರಾವಣಾಂಹಯ
ಭೀಮ ರಾಕ್ಷಸ ರಥದಲೊಯ್ಯಲು
ಭೂಮಿಸುತೆಯನು ದಕ್ಷಿಣಾಮುಖವಾಗಿ ತಾನಿನ್ನು ||
ಸ್ವಾಮಿ ನುಡಿಯಲಿಕಾರೆನೀ ಖ
ಡ್ಗಾಮಯವು ನಿನ್ನದಿ[1]ರಲೀ ಯಿೂ
ಭೂಮಿ ಮುಖ ಭೌತಿಕದ ತನುವಿದ ಬಿಡುವೆ ನಾನೆಂದ || ೨೮ ||

ದೃಷ್ಟಿಗೋಚರನಾದೆಯ್ಯ ಬಾ
ರೆಷ್ಟು ಸುಕೃತಿಯೊ ಮರಣಸಮಯದಿ
ಶಿಷ್ಟ ಪರಮಾತುಮ ಜಗನ್ಮಯ ವಿಷ್ಣು ನೀನೆನಗೆ ||
ತೊಟ್ಟ ಮಾಯಾ ಮನುಜ ರೂಪವ
ನೆಟ್ಟನೆನಗಿಂದಂತ್ಯ ಕಾಲದಿ
ಬಿಟ್ಟು ತನುವಿದ ಪರಮ ಪದವಿಯ ಪಡೆವೆ ತಾನೆಂದ || ೨೯ ||

ಹಸ್ತದಲಿ ಮತ್ತೊಮ್ಮೆ ತನ್ನ ನಿ
ರಸ್ತಮಾ ಯೆನೆ ಮುಟ್ಟು ಪಡೆದಪೆ
ನುತ್ತಮದ ನಿಜ ಪದವನೆನೆ ಸಿರಿರಾಮ ಕರುಣದಲಿ ||
ಅಸ್ತುಯೆಂದೆನುತಮೃತ ಕರದಲಿ
ಮಸ್ತಕವ ಮೊದಲಾಗಿ ಮುಟ್ಟಲು
ಬಿತ್ತೊಡಲು ಧರೆಗಾಗ ಬಿಟ್ಟನು ಪ್ರಾಣವನು ವಿಹಗ || ೩೦ ||

---

1 ನಲಿ ನಾ (ಖ)

ಕಾಯುವನು ಖಗನೆಳಿಯಲಳಲುತ
ದಾಯಿಗನ ಪರಿ ರಾಮನಶ್ರು ಜ
ಲಾಯತೇಕ್ಷಣ ತರಿಸಿದನು ಕಾಷ್ಠವನನುಜನಿಂದ ||
ವಾಯದೊಡಲನು ದಹಿಸಿ ವಹ್ನಿಯು
ಲಾಯತದಿ ಲಕ್ಷ್ಮಣನು ಸಹಿತ ಬು
ಜಾಯತಾಂಬಕನೆಳಲುತಿದ್ದನು ಕರುಣಿ ಖಗವರೆಗೆ || ೩೧ ||

ಅಲ್ಲಿ ಮೃಗವನು ಕೊಂದು ರಾಘವ
ಹುಲ್ಲನೇಲಾ ಖಂಡ ಮಾಂಸವ
ಚೆಲ್ಲಿದನು ಬೇರ್ಬೇರನೇಕವ ಪಕ್ಷಿಗಳ ಕರೆದು ||
ಕೊಳ್ಳಿರೀ ಮಾಂಸವ ಜಟಾಯುವೆ
ಸಲ್ಲಲಿತ ಸದ್ರೂಪದಲಿ ಹೋ
ಗೆಲ್ಲರೀಕ್ಷಿಸುವಂತೆ ವೈಷ್ಣವ ಪರಮ ಪದಕೆಂದ || ೩೨ ||

ಎನುತಿರಲಿಕಾಕ್ಷಣವೆ ಧರಿಸಿದ
ನನುಪಮಾಂಗವನಾ ಜಟಾಯು ಸು
ದಿನಕರಪ್ರತಿ ಕೋಟಿತೇಜೋಮಯದ ರೂಪವನು ||
ವನಜನೇತ್ರದ ನೀಲಗಾತ್ರದ
ಕನಕ ವಸನದ ಶೋಭಮಾನದ
ಘನ ಮಕರಕುಂಡಲದ ತಾಂಡವದಿಂದ ರಂಜಿಸಿದ || ೩೩ ||

ಸಾಲು ಭೂಷಣ ವರಯಶೋವನ
ಮಾಲೆಗಳ ಮಣಿ ಮಕುಟದೀಪ್ತಿಯು
ಭಾಳತಿಲಕದ ಚಂದನದ ಸುಕಪೋಲ ಭ್ರೂಲತೆಯ ||
ತೋಳಬಳೆ ಕಂಕಣದ ಮುದ್ರಿಕೆ
ಯೋಳಿಗಳ ಶಂಖಾಬ್ಜ ಗದೆವರಿ
ಭಾಳಭುಜ ನಾಲ್ಕರಲಿ ದಿವ್ಯವಿಮಾನದಿಂದೆಸೆದ || ೩೪ ||

ನಂದಮುಖ್ಯ ಚತುಷ್ಕ ಪಾರ್ಷದ
ರಿಂದ ಸೇವಿತರಾಗಿ ಮುನಿಜನ
ರಿಂದ ಹೊಗಳಿಸಿಕೊಳುತ ರಾಮಂಗೆರಗಿ ಕೈಮುಗಿದು ॥
ಅಂದು ಭಕುತಿಯಲಪ್ರಮೇಯನ
ಮುಂದೆ ಗದ್ಗದ ಕಂಠದಿಂ ಶ್ರುತಿ
ವೃಂದ ಮೆಚ್ಚಲು ಮಾಡಿದನು ಸಂಸ್ತುತಿಯನಾಕ್ಷಣಕೆ ॥ ೩೫ ॥

ಗಣಿಸುವರೆ ತಾನಾರು ಗುಣಗಣ
ದೆಣಿಕೆ ರಹಿತನನಾದಿ ನಾರಾ
ಯಣನ ನೀನೀ ಲೋಕ ರಕ್ಷಕ ಹೇತುವೇಕೆನಲಾ ॥
ಭಣಿತೆ ರಹಿತ ನಿಜಾತ್ಮಸುಖ ನಿ
ರ್ಗುಣ ಸಕಲ ಭೂತಾಂತರನೆ ತಾ
ನಣಿವೆನಾ ಶ್ರೀ ರಾಮಚಂದ್ರ ಪದಾಂತಿಕಕ್ಕೆಂದ ॥ ೩೬ ॥

ನಿರವಧಿಕ ಸುಖವೀವ ಪಾವನ
ಕರುಣವುಳ್ಳ ಮಹಾಲಕುಮಿ ಸರ
ಸಿರುಹಸಂಭವ ದಿವಿಜ ಮುಖ್ಯಾಮರರಿಗೊಳಗಾಗಿ ॥
ನಿರುತ ದುಃಖವದಂತವರಿಗಡ
ಮುರಿಯೆ ಸಿರಿಸಿರಿಯಾಂತ ನರವರ
ವರದ ಬಾಣ ಸುಹಸ್ತಗಾನನವರತ ನಮಿಸುವೆನು ॥ ೩೭ ॥

ಮೂರು ಭುವನಕ್ಕಧಿಕ ರೂಪೋ
ದಾರ ರವಿ ಸಾಹಸ್ರ ತೇಜಾ
ಕಾರದಿಂ ಶರಣೇಷ್ಟದಾನಾಭೀಷ್ಟವನು ಕೊಡುವ ॥
ಭೂರಿಸುರಕುಲತಲ್ಪ ತರುವಿಗೆ
ಬೇರೆನಿಸುವಾತ್ಮಸ್ವರೂಪ ವಿ
ಕಾರದೂರ ರಘೂತ್ತಮನೆ ಮರೆವೊಕ್ಕೆ ನಾನೆಂದ ॥ ೩೮ ॥

ಉನ್ನತದ ಸಂಸಾರದಡವಿಗೆ
ವಹ್ನಿಯೆನಿಸುವ ನಾಮಧೇಯನ
ಪನ್ನಗಾಭರಣಾದಿ ದೈವಕೆ ದೈವವೆನಿಸುವನ ||
ದುರ್ನಯದ ದಾನವರ ಕೋಟಿಯ
ಬನ್ನವಡಿಸಲು ರವಿತನೇಯನ
ದೆನ್ನೊಡೆಯ ಕಾಲಾತ್ಮ ಹರಿಯನು ನಾನು ಮರೆವೊಕ್ಕೆ || ೩೯ ||

ಒಮ್ಮೆಯೂ ಭವಭಾವಯುಕ್ತಾ
ಹಮ್ಮು ಮತಿಗಳಿಗರಿಯಬಾರದ
ನಿರ್ಮಲದ ಭವ ರಹಿತ ಮುನಿ ಹೃದಯಃಪಲಿ ಬೆಳಗುವನ ||
ದುರ್ಮದದ ಸಂಸಾರ ಶರಧಿಯ
ಹೋರ್ವಿ ಮಧ್ಯದಿ ನಾವೆಯಾದೀ
ರಮ್ಮಸಂಪ್ರಿದ್ಧ್ವಯುವೆನಗೆ ಗತಿಯಾಗಬೇಕೆಂದ || ೪೦ ||

ಪರಧನವು ಪರದಾರವನು ಸಲೆ
ತೊರೆದರಿಗೆ ಗತಿಯಪ್ಪ ಪರಗುಣ
ಪರರ ಹೆಚ್ಚಿಗೆಯಲ್ಲಿ ಮತ್ಸರಿಸಿದರ ಸೇವಿಸುವ ||
ಪರಹಿತೈಕ ಪರಾಯಣರು ಸ
ಚ್ಚರಿತರಾದರು ನೆನೆವ ಶ್ರೀರಘು
ವರ ಕಮಲಲೋಚನನ ಸಿರಿಪದವೆನಗೆ ಗತಿಯೆಂದ || ೪೧ ||

ಸ್ಮಿತ ರುಚಿರ ವಿಕಸಿತ ಮುಖಾಬ್ಜ
ಸ್ಮೃತಿ ಸುಲಭ ಸುರನೀಲ ನೀಲೋ
ದ್ಯುತ ನಿಕಾಶಾವಯದ ಸಿತ ಜಲರುಹ ಸುಲೋಚನದ ||
ಧೃತ ಕರದ ಕೋದಂಡ ಶರ ಸು
ವ್ರತ ಜಟಾ ವಲ್ಕಲದ ಶ್ರೀ ರಘು
ಪತಿಗಳಿಗೆ ಗುರುವೆನಿಸಿದೀ ಗುರುವರನ ಮರೆವೊಕ್ಕೆ || ೪೨ ||

ಅವನೀಯಜ ವಿಷ್ಣು ಶಿವ ಭೇ
ದಾವಯವು ನೆರೆ ಧರಿಸಿ ಗುಣದಲಿ
ಜೀವರನು ಸೃಜಿಸಿರಿಸಿ ಪಾಲಿಸಿ ಹರಿಸಿ ಜಲದಲ್ಲಿ ||
ಆವಪರಿ ಪಾತ್ರದಲಿ ಹೊಳಹೊಳ
ವಾ ವಿವಸ್ವನಲೋಲೆಸೆವ ಸು
ಸ್ಥಾವ ಪಾತ್ರ ಮುಕುಂದ ರಾಮನೆ ತನಗೆ ಗತಿಯೆಂದ || ೪೩ ||

ರತಿಪತಿಯ [1]ಸೌ[1]ರೀಯು ಕೋಟಿಯು
ನತಿಶಯಿಸುವಂಗತ್ಪವಿಯು ಶತ
ಪಥದ ನಾನಾ ಭಾವನಾದಿಗಳಿಂ[2]ದ[2] ದೂರನಹ ||
ಯತಿಪತಿಗಳ ಹೃದಾರವಿಂದದಿ
ಸತತ ಬೆಳಗುವ ನಾಮದಿಂ ರಘು
ಪತಿಯೆನಿಪ ಮೂರ್ತಿಯಲಿ ತೋರುವ ಹರಿಯೆ ಗತಿಯೆಂದ || ೪೪ ||

ಆರರಿವರಲೆ ರಾಮ ನಿನ್ನ ವಿ
ಹಾರ ಮಾಯಾ ನೋಟಕವನತಿ
ಘೋರ ತಾಮಸ ಪಕ್ಷಿ ಜನ್ಮವು ಸಹಿತ ಸದುಗತಿಗೆ ||
ಸೇರಿಸಿದ ಪರಮಾತ್ಮ ಮನುಜ ಶ
ರೀರಿಗಳಿಗಚ್ಚರಿಯೆ ಮುಕುತಿಯ
ಸೂರೆಗೊಂಬುದು ನಿನ್ನ ಭಕುತಿಯಲೆನುತ ಪೊಡವಂಟ || ೪೫ ||

ಕಾಂತೆ ಕೇಳೀಪರಿಯ ಸಂಸ್ತುತಿ
ಗಂತರಾತ್ಮನು ಮೆಚ್ಚಿ ನುಡಿದನು
ಚಿಂತೆ ಬೇಡೆಲೆ ತಂದೆ ಹೋಗೆನ್ನಮಳ ನಿಜ ಪದಕೆ ||
ಕಂತು ರಹಿತ ವಿಕಾರ ರಹಿತಾ
ದ್ಯಂತ ರಹಿತದ ವಿಷ್ಣು ಪದವಿಗೆ
ಸಂತಸದಲೆನ್ನಾಜ್ಞೆಯಿಂ ನೀನೆಂದನಾ ರಾಮ || ೪೬ ||

---

1 ಸೂ (ಖ) 2 ಗೆ (ಖ)

ಆರು ಕೆಲರೀ ನೀನು ಪೇಳ್ದೀ
ಸಾರ ಸಂಸ್ತವನಿದನು ಕೇಳ್ದವ
ರಾರು ಮತ್ತದ ಬರೆದು ಪಠಿಸುವರೊಲಿದು ಭಕ್ತಿಯಲಿ ||
ಘೋರ ಪಾಪವ ಕಳೆದು ನಿನ್ನಂ
ಘ್ರೀ ರುಚಿರ ಮದ್ರೂಪವಡೆವರು
ಸಾರಿ ತಾನೇ ಪರಮಗತಿಯೆಂದಾತುಕೊಳ್ಳೆಂದ || ೪೭ ||

ಈ ಪರಿಯು ರಾಘವನ ಭಾಷಾ
ಲಾಪವನು ನೆರೆ ಕೇಳಿ ಪಕ್ಷಿಗ
ಳೋಪನತಿ ಹರುಷದಲಿ ಬಲಬಂದೆರಗಿ ಬೀಳ್ಕೊಂಡು ||
ಶ್ರೀಪತಿಯ ಸಾರೂಪ್ಯದಿಂ [1]ಜಿತ[1]
ತಾಪನಾಗೀ ಬ್ರಹ್ಮಪೂಜ್ಯ ಮ
ಹಾ ಪದವನೈದಿದನು ಕೇಳೆಂದನು ಮಹೇಶ್ವರನು || ೪೮ ||

ಸಪ್ತವಿಂಶಕ ಸಂಧಿಯಲಿ ಪದ
ಯುಕ್ತ ಪಂಚಾಶಗಳು ರಾಮ ಚ
ರಿತ್ರವಿದನೋದಿದಡೆ ಕೇಳಿದಡೊಂದೆ ಮನದಿಂದೆ ||
ಭುಕ್ತಿ ಮುಕ್ತಿಯ ಪಡೆವರಿಹಪರ
ದಿತ್ತೆರದಲಾ ಕಾವನಾ ಚಿ
ದ್ವ್ಯಕ್ತ ಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹನೊಲವಿನಲಿ || ೪೯ ||

ಅಂತು ಸಂಧಿ ೨೭ ಕ್ಕೆ ಪದ ೧೧೯೭ ಕ್ಕೆ

ಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ



---

1 ನಿಜ (ಖ)

§ ಶ್ರೀ ರಾಮಚಂದ್ರಾಯ ನಮಃ §



# ಇಪ್ಪತ್ತೆಂಟನೆಯ ಸಂಧಿ

## ಕಬಂಧನ ಶಾಪವಿಮೋಚನೆ

ಸೂಚನೆ ॥ ಸೀತೆಯರಸುವ ನೆವದಲಾ ರಘು
ನಾಥ ಚಾರಿಸಿದನು ಕಬಂಧನ
ಪಾತಕದ ದೇಹವನು ಕೊಟ್ಟನವಂಗೆ ನಿಜಗತಿಯ ॥

ಪದ ॥ ಮತ್ತಕಾಶಿನಿ ಕೇಳು ರಾಘವ
ನಿತ್ತು ಮೋಕ್ಷವನಾ ಜಟಾಯುವಿ
ಗುತ್ತಮೋತ್ತಮ ಕೀರ್ತಿ ಲಕ್ಷ್ಮಣ ಸಹಿತ ವನದೊಳಗೆ ॥
ಮತ್ತೆ ಶೋಕವನದುಕರಿಸಿಕೊಂ
ಡತ್ತಲೈದಿದನನ್ಯ ವನವನು
ಸುತ್ತರಸುತಿದ್ದನುಜ ಸಹ [1]ವನದೊ[1]ಳಗೆ ಜಾನಕಿಯ ॥ ೧ ॥

ಅಲ್ಲಿ ಮುಂದದ್ಭುತವ ಕಂಡನು
ಖುಲ್ಲ ರಾಕ್ಷಸನಿರಲಿದಿರಲತಿ
ಮಲ್ಲನನು ವಕ್ಷದಿ ಭಯಂಕರ ವಕ್ತ್ರವಾಗಿರಲು ॥
ಇಲ್ಲ ಶಿರಪಾದಂಗಳೇನೂ
ಬಳ್ಳಿಯಂದದ ತೋಳೆರಡು ವನ
ಕೆಲ್ಲ ನಿಲುಕುವ ಯೋಜನಾಯತವಾಗಿಹುದು ಖಳಗೆ ॥ ೨ ॥

---

1 ಡವಿಯೊ (ಕ)

ರಾವಣನಿಂದ ಜಟಾಯುವಿನ ವಧೆ



ರಾವಣನಿಂದ ಸೀತಾಪಹರಣ



ನಾಮವವಗೆ ಕಬಂಧನೆಂಬು
ದ್ದಾನು ದೈತ್ಯನು ಸಕಲ ಜೀವ
ಸ್ತೋಮವನು ಬರಬರಗಿ ನುಂಗುವನೆರಡು ಕೈಗಳಲಿ ||
ಹೈಮವತಿ ಕೇಳದುಭುತವನಾ
ತಾಮಸನ ನಡುತೋಳ ಮಧ್ಯದಿ
ರಾಮ ಲಕ್ಷ್ಮಣರಲ್ಲಿ ಚರಿಸುತತ್ತೊಳಗೆ ಸಿಕ್ಕಿದರು || ೩ ||

ಕಂಡನಾ ಶ್ರೀರಾಮನತ್ಯು
ದ್ದಂಡ ದೈತ್ಯನ ತೋಳ ತೆಕ್ಕೆಯ
ಮಂಡಲದಿ ಸಿಕ್ಕಿದ್ದುದನು ತಂತ್ರಪ್ಪ ವಿಕೃತಿಯನು ||
ಪಂಡಿತನೆ ಸೌಮಿತ್ರ ನೋಡಿದ
ಕಂಡುದುಂಟೇ ಮುನ್ನ ರಕ್ಕಸ
ದಂಡಿಯಲ್ಲಿನುತಾಗ ನಕ್ಕನು ವಿಕೃತದಿರವಿಂಗೆ || ೪ ||

ಪಾದ ಶಿರವೇನಿಲ್ಲ ವಕ್ಷದ
ಲಾದುದೆಂತೋ ಮುಖ ವಿಚಿತ್ರವು
ಸೇದಿ ನುಂಗುತ್ತೈದನೀತನು ಕರಕೆ ದೊರಕಿದುದ ||
ಈ ದುರಾತ್ಮನ ಬಾಹು ಮಧ್ಯದ
ಲಾದೆವೈ ಹೊರವಡಲು ಕಾಣೆನು
ಹಾದಿಯನು ನುಂಗುವನಿದಕೆ ಕರ್ತವ್ಯವೇನೆಂದ || ೫ ||

ಎಂದಡೇಕೆಲೆ ರಾಮ ಸಂಶಯ
ದಿಂದ ಕೇಳುವೆ ತೋಳ ತಾವೊಂ
ದೊಂದ ಖಂಡಿಸಿಬಿಡುವ ಬೇಗದಲೆಂದಡಹುದೆನುತ ||
ನಿಂದು ಖಡುಗದಿ ರಾಮ ಬಲಗೈ
ಯ್ಯೊಂದ ಕಡಿದನು ಭುಜಲತೆಯ ಮ
ತ್ತೊಂದನೆಡದಲಿ ವೀರ ಲಕ್ಷ್ಮಣ ಕಡಿದನಿದಿರಿನಲಿ || ೬ ||

ತೋಳ ಕಡಿಯಲು ಹಾರಿ ರಕ್ಕಸ
ಮೇಲೆ ಗಗನದಿ ನಿಂತು ನುಡಿದನು
ಹೇಳಿರೈ ನೀವಾರು ನರಪುಂಗವರು ಮದ್ಭುಜವ ||
ಹೋಳುಗಳೆವೀ ಶಕ್ತಿ ಸುರನರ
ಪಾಲಕರಿಗೆಂತುಂಟು ಯೆನೆ ಸುವಿ
ಶಾಲ ಪದುಮದಳಾಕ್ಷ ರಾಮ ನಗುತ್ತಲಿಂತೆಂದ || ೭ ||

ವಿಪುಲಗುಣ ಸಂಪನ್ನಯೋಧ್ಯಾ
ಧಿಪನು ದಶರಥರಾಯನೆಂಬವ
ನುಪಮಿಸದ ಗುಣವನಧಿಯಾತನ ಹಿರಿಯ ಮಗ ನಾನು ||
ಕ್ಷಪಿತ ಕಲ್ಮಷ ರಾಮನೆಂಬರು
ನಿಪುಣನಿವ ತನ್ನನುಜ ಲಕ್ಷ್ಮಣ
ಕಪಟಿ ದಾನವ ವನದವಾನಳರಾವು ಕೇಳೆಂದ || ೮ ||

ತನ್ನ ಸತಿ ಜನಕನ ಮಗಳು ಸಂ
ಪನ್ನ ಚೆಲುವಿಂ ಮೂರು ಲೋಕದ
ಲುನ್ನತದ ಸುಕುಮಾರ ಸೀತೆಯೆನಿಪ್ಪುದಭಿಧಾನ ||
ತನ್ನ ನಾಶನಕಾಗಿ ದಾನವ
ಕುನ್ನಿ ಯಾರೋ ಕದ್ದನಾತನ
ಬೆನ್ನಲರಸುತ ಬಂದೆವೀ ವನದೊಳಗೆ ನಾವೆಂದ || ೯ ||

ಅನ್ನದಾಶೆಗೆ ನೀನರಸುತಿರೆ
ನಿನ್ನ ತೋಳಲಿ ಸಿಕ್ಕಿ ಬಳಿಕ
ಚ್ಛಿನ್ನವನು ಮಾಡಿದೆವು ಭುಜವನು ವಿಕೃತ ವೇಷದಲಿ ||
ಖಿನ್ನವಡುವವರಾರು ನೀನೆನೆ
ಧನ್ಯನಾದೆನು ಯೆತ್ತಲಾನೂ
ಚಿನ್ಮಯ ರಾಘವನೆ ನೀ ಬರಲೆಂದನಾ ದೈತ್ಯ || ೧೦ ||

ಆದಡೆಲೆ ರಘುನಾಥ ಕೇಳಾ
ಾದಿಯಲಿ ಗಂಧರ್ವರಾಜ ವಿ
ನೋದಿ ಯವ್ವನ ರೂಪು ಗುಣದರ್ಪಿತ ಮನೋಹರನು ||
ಭೂದಿವಾದ್ಯದ್ಯಖಿಳ ಚರಿಸುತ
ವೇದಗರ್ಭನ ತಪದಿ ಮೆಚ್ಚಿಸಿ
ಸಾಧಿಸಿದೆನಸ್ವೈರಲಿ ಮರಣವು ಬಾರದೆಂದೆನುತ ||೧೧||

ಚೆನ್ನ ರೂಪದ ಪರರ ನಾರಿಯ
ರನ್ನು ಮೋಹಿಸುತಿರಲು ಕಂಡೆನು
ತನ್ನ ದಿರನಲಿ ಬರುತಲಷ್ಟಾವಕ್ರ ಮುನಿವರನ ||
ಮನ್ನಿಸದೆ ಹಾಸ್ಯವನು ಮಾಡಲು
ವನ್ಹಿಯಾಯಿತು ಮುನಿಯ ಕಂಗಳು
ದುರ್ವಿನೀತನೆ ಧರೆಗೆ ರಕ್ಕಸನಾಗಿ ಬೀಳೆಂದ ||೧೨||

ಎತ್ತಲಾನೂ ಹಿರಿಯರಿಗೆ ದು
ರ್ವೃತ್ತರಲಿ ಕೋಪವದು ಬಂದಡೆ
ಚಿತ್ತದಲಿ ದಯವುಂಟಲೇ ಸರ್ವಾತ್ಮರಿದಿರಿಂಗೆ ||
ಸತ್ಯಗುಣನಿಧಿ ತಪದ ತೇಜದಿ
ಸುತ್ತ ಬೆಳಗುತ ಮಗುಳೆ ನುಡಿದನು
ಹೆತ್ತವನು ಪುತ್ರರನು ಶಿಕ್ಷಿಸಿ ಸಲಹುವಂತೆಂದ ||೧೩||

ತ್ರೇತೆಯಲಿ ದಶರಥ ನೃಪಂಗು
ದ್ಭೂತನಹ ನಾರಾಯಣನು ಸಾ
ಕೇತದಲ್ಲವ ಬಹನು ವನವಾಸಾರ್ಥಕಾದಿನದಿ ||
ಷಾತಕದ ಯೋಜನದ ತೋಳ ವಿ
ಘಾತಿಸುವನಾ ರಾಮ ಶಾಪದ
ಭೀತಿ ಬಂಧನ ಹರಿದು ನೀ ಮಗುಳೈದು ನಿಜ ಗತಿಗೆ ||೧೪||

ಎಂದು ಮುನಿ ಹೋದನು ನಿಜೇಚ್ಛೆಗೆ
ಸಂದು ನಾ ರಾಕ್ಷಸಿಗೆ ರಾಕ್ಷಸ
ನೆಂದೆನಿಸಿ ಜನಿಸಿದೆನು ಲೋಕದ ಮೃತ್ಯುವೆಂಬಂತೆ ||
ವೊಂದುದಿನ ಕೋಪದಲಿಯುಟ್ಟಿದ
ನಿಂದ್ರನೆನ್ನನು ಹಗೆಯೆನುತ್ತ
ದ್ವಂದ್ವ ಪಾದ ಶಿರಂಗಳನು ವಜ್ರದಲಿ ಖಂಡಿಸಿದ || ೧೫ ||

ಕುಕ್ಷಿಯಲಿ ತಲೆ ಬಂದು ಸಿಕ್ಕಿತು
ಮುಕ್ತನಾದನು ಮೃತ್ಯು ತನ್ನನು
ಯಿಕ್ಕಿಸವಸನು ಬ್ರಹ್ಮನಿತ್ತಾ ವರದ ಬಲದಿಂದ ||
ಯಿಕ್ಕಿರಲು ವಜ್ರದಲಿ ಬದುಕಿದ
ದಕ್ಕಟೆಂದಾ ಹರಿಹಯನು ಮುಖ
ರಕ್ಕಸಂಗಿನ್ನುಳಿವುದೆಂತೋ ಶಿವ ಶಿವಾ ಯೆಂದ || ೧೬ ||

ನೋಡಿ ತನ್ನನು ದಯದಿ ನುಡಿದನು
ಮೂಢವೀತಗೆ ಪಾದ ತಲೆಗಳು
ಮಾಡುವಹಿತವದೇನು ತನಗಿವನಾಯುವಿದ್ದವನ್ನ ||
ಕೂಡಲೊಡಲಲಿ ಮುಖದ ಭಾವವ
ನೀಡಿ ನಿಲುಕುವ ಕರವ್ನ ಯೋಜನ
ಕಾಡಿ ಸಿಕ್ಕಿದ ತಿನ್ನು ಹೋಗೆನಲಿದ್ದೆನೀ ಸ್ಥಳದಿ || ೧೭ ||

ಅಂದು ಮೊದಲಿಲ್ಲಿರ್ದು ಕರದಲಿ
ತಂದು ನುಂಗುತ ವನದಲುಳ್ಳೀ
ವೃಂದ ಜೀವವನಿಷ್ಟು ದಿನಕೆಂದಿಲ್ಲಿ ರಘುನಾಥ ||
ಬಂದು ಕರವನು ಕಡಿದೆ ತನುವಿದ
ನೊಂದು ಕುಳಿಯಲ್ಲಿಕ್ಕಿ ಮೇಲ
ಕ್ಕಿಂಧನಂಗಳನಿಕ್ಕಿ ತನ್ನನು ದಹಿಸಬೇಕೆಂದ || ೧೮ ||

ರಾಮ ತನುವಿದ ನೀನು ಸುಟ್ಟಡೆ
ನಾ ಮೊದಲ ರೂಪದಲಿ ನಿನ್ನಯ
ಕಾಮಿನಿಯು ಮಾರ್ಗವನು ಬಳಿಕಾನೆಂಬೆ ನಿನಗಿಸಲು ||
ತಾಮಸನ ಲಕ್ಷ್ಮಣನು ಬಲುಗುಳಿ
ಯಾ ಮಹಿಗೆ ಸೇರಿಸುತ ಕಾಷ್ಠ
ಸ್ತೋಮವನು ಮೇಲೊಟ್ಟಿ ಸುಟ್ಟನು ರಾಮ ರಾಮೆಸುತ || ೧೯ ||

ಯದ್ದನಾ ದೇಹದಿ ವಿಕಾಮನ
ಗೆದ್ದ ರೂಪಾಕಾರ ದೇಹದ
ಭದ್ರ ಸರ್ವಾಭರಣ ಭೂಷಿತನಾಗಿ ಭಕುತಿಯಲಿ ||
ಅದ್ವಯನ ಬಲಬಂದಿದಿರಿಸಲಿ
ಬಿದ್ದನೋ ಸಾಷ್ಟಾಂಗದಿಂ ಮಗು
ಳೆದ್ದು ಕೈಮುಗಿದೆಂದನಾ ಗದ್ಗದ ಗಳಾಕ್ಷರದಿ || ೨೦ ||

ಸ್ತುತಿಸಲೆಂದೆಲೆ ರಾಮ ನಿನ್ನನು
ಮತಿ ತನಗೆ ಸಂಭ್ರಮಿಸುತಿದೆಲಾ
ಶ್ರುತಿ ವಿದೂರ ಮನೋವಚನಕಳವಡದನಂತನನು ||
ಪ್ರತಿ ರಹಿತ ಸೂಕ್ಷ್ಮನು ನೀನೀ
ಕೃತಕ ದೇಹದ್ವಯ ವಿಲಕ್ಷಣ
ಕತಿಶಯಾವ್ಯಕ್ತನನು ಪೊಗಳುವಡಳವೆ ತನಗೆಂದ || ೨೧ ||

ದೃಶ್ಯವಾಗೀ ಮತಿಯರಿಯದಿದ
ನಶ್ರು ದ್ಯುತಿಯಾಗಿತರವರಿವಾ
ನಾಶ್ರುಕರಣಂಗಳಿಗೆ ಸಾಕ್ಷಿಕನಾಗಿ ನೀನಿರಲು ||
[ದೃಶ್ಯವಾಗಿಯೆ ನೀನು ಕಾಣುವ
ದೃಶ್ಯ ರೂಪವು ನಿನ್ನದಾಗಿಯೆ
ದೃಶ್ಯವೆಲ್ಲವನಾತ್ಮವೂ ಜಡವಾಗಿ ಇರುತಿರುವೆ] || ೨೨ ||

[ ಅತಿಶಯದಲಿಹ ನಿನ್ನ ರೂಪವ
ಸತಿ ಮುದದಿ ನೆನೆಯುತಿಹ ನರವರ
ರತಿಶಯಿಸಿ ಜಪಿಸಿದರು ನಿನ್ನನು ತಿಳಿಯದಿರುತಿಹರು ] ||
ಯತಿಗಳೆಂತರಿವರು ನಿಧಾನಿಸ
ಲಿತರನಲ್ಲರಿವಿಂಗೆ ಸಾಕ್ಷಿಯೆ
ಗತಿಯಲಾ ಮರಮರಳಿಯುಂ ನೋಡಿದಡೆ ಧಿಟಕೆಂದ || ೨೩ ||

ಬುದ್ಧಿಯಿಂ ದೇಹಾತ್ಮ ಭಾವವ
ಹೊದ್ದಿ ಜೀವನೆನಿಪ್ಪುದಂತಾ
ಬುದ್ಧಿ ಸಾಕ್ಷಿ ಬ್ರಹ್ಮರೂಪ ಮಹಾವಿಷಯವಿಲ್ಲವಲ ||
ಶುದ್ಧ ವಿಜ್ಞಾನವು ವಿಕಾರವ
ಹೊದ್ದದೆಂದೂ ನಿತ್ಯ ಶುದ್ಧವಿ
ಬುದ್ಧ ಸತ್ಯಜ್ಞಾಪ್ತಿ ಸುಖಪರಿಪೂರ್ಣಮಯವೆಂದ || ೨೪ ||

ನಿನ್ನಲಾದೀ ಸ್ಥೂಲ ರೂಪದ
ಹೊನ್ನಗರ್ಭ ವಿರಾಟ ಪೂರುಷ
ನನ್ಯನೇ ನಿನ್ನಿಂದ ನೀ ಮಹದಾತ್ಮನೆನಿಸಿದಡೆ ||
ಚೆನ್ನ ಸೂಕ್ಷ್ಮಧ್ಯಾನ ಮಂಗಳ
ಚಿನ್ಮಯನೆನುತಿಹವು ಯೆರಡೂ
ನಿನ್ನದುಳಿದೇನುಂಟು ಭೂತಂ ಭವ್ಯ ಭವಿತೆಯಲಿ || ೨೫ ||

ಸ್ಥೂಲದಂಡದ ಕೋಶ ದೇಹವ
ತಾಳಿ ನೀ ಮಹ ಹಮ್ಮು ನಭನಿಲ
ಮೇಲನಲ ಜಲವವನಿ ಸಹ ಸಪ್ತಾವರಣೆಯಿಂದ ||
ಹೇಳಲೇನದ ದಶಗುಣೋತ್ತರ
ಜಾಲಕಾಧಾರ ಸ್ವರೂಪಕೆ
ಮೂಲವಾದ ವಿರಾಟ್ ಸ್ವರೂಪನು ನೀನಲಾ ಯೆಂದ || ೨೬ ||

ನಿನ್ನಲೆಲ್ಲ ವಿಕಲ್ಪವಡೆದವು
ಭಿನ್ನವಾದವಯವವು ಲೋಕವು
ನಿನ್ನ ರೂಪವೆ ರಾಮ ಪಾತಾಳಾಖ್ಯವೆಂಬುದನು ||
ನಿನ್ನ ಪದದಡಿಯಾ ಮಹಾತಳ
ನಿನ್ನ ಮೇಗಾಲೆನಿಸುವವು ಗಡ
ನಿನ್ನ ಗುಲ್ಫ ರಸಾತಳವು ಜಂಘೆಯು ತಳಾತಳವು || ೨೭ ||

ನಿನ್ನ ಜಾನುವೆ ಸುತಳ ವಿತಳವು
ನಿನ್ನ ತೊಡೆ ಕಟಿಯತಳ ಭೂಮಿಯು
ನಿನ್ನ ನಾಭಿಯು ಕೆಳಗೆ ಭುವರ್ಲೋಕವದು ನಾಭಿಯುಲ ||
ಚಿನ್ನ ಸುವರ್ಲೋಕವದೆ ಕುಕ್ಷಿಯು
ನಿನ್ನುರಸ್ಥಳ ಜ್ಯೋತಿ ಲೋಕದ
ಚಿನ್ನ ನಿನ್ನಗ್ರೀವದಗ್ರವೆ ತಾ ಮಹರ್ಲೋಕ || ೨೮ ||

ವದನದಲಿ ಜನಲೋಕ ನಿನ್ನೆ
ಸ್ಪದ ಲಲಾಟದಿ ತಪದ ಲೋಕವು
ಪದುಮಭವ ಲೋಕವದು ಶಿರದಲಿ ಸತ್ಯವದು ನಿನ್ನ ||
ತ್ರಿದಶರಿಂದ್ರಾದ್ಯಷ್ಟ ದಿಗಧಿಪ
ರದುಭುತದ ನಿಜ ಬಾಹು ದಿಗು ಶ್ರೋ
ತ್ರದಲಿಯಶ್ವಿನಿಗಳು ಸುನಾಸಿಕ ರಾಮ ನಿನಗೆಂದ || ೨೯ ||

ಪಾವಕನೆ ಮುಖ ನಿನ್ನ ನಯನವ
ಲಾ ವಿವಸ್ವನು ಮನವೆ ಚಂದ್ರನು
ದೇವ ನಿನ್ನಯ ಬುದ್ಧಿಯಜ ನಿನ್ನಹಮಲಾ ರುದ್ರ ||
ಕೋವಿದ ಕ್ಷೇತ್ರಜ್ಞ ಚಿತ್ತವು
ಭಾವಿಸುವಡೀ ಪ್ರಾಣ ವಾಯುಗ
ಳಾ ವಿಧದ ವೇದಗಳೆ ನಿನ್ನಯ ವಚನವೆಲೆ ರಾಮ || ೩೦ ||

ನಿನ್ನ ದಂಷ್ಟ್ರವೆ ಯಮನು ವರ ಸಂ
ಪನ್ನ ನಕ್ಷತ್ರ ದ್ವಿಜಾಲಯ
ನಿನ್ನ ನಗೆ ಮೂಲೋಕವೆಲ್ಲವ ಮೋಹಿಸುವ ಮಾಯೆ ||
ಘನ್ನ ಸೃಷ್ಟಿಯೆ ಪಾಂಸು ಮೋಕ್ಷಣ
ನಿನ್ನ ಮುಂದಿಸೆ ಧರ್ಮ ಮಾರ್ಗವು
ನಿನ್ನ ಪೃಷ್ಠದ ಭಾಗವಲ್ಲಿಯಧರ್ಮವೆನಿಸುವುದು || ೩೧ ||

ಹಗಲು ನಿನ್ನ ನಿಮೇಷದಲಿ ರಾ
ತ್ರಿಗಳು ನಿನ್ನುನ್ಮೇಷ ಹುಬ್ಬಿನ
ಹಗರಣದಲೇ ಕಾಲ ಸಪ್ತ ಸಮುದ್ರ ಕುಕ್ಷಿಯಲಿ ||
ಮಿಗೆ ಮಹಾನದಿ ನಾಡಿ ವೃಕ್ಷಾ
ದಿಗಳು ರೋಮವು ವೃಷ್ಟಿ ರೇತವು
ನಗಗಳಸ್ಥಿಗಳೆಲ್ಲ ನಿನ್ನಯ ರೂಪು ಭಾವಿಸಲು || ೩೨ ||

ನಿನ್ನ ಮಹಿಮೆ ಜ್ಞಾನ ಸಾಕ್ಷಾ
ಚ್ಚಿನ್ನುಮಾಗುವೀ ಸ್ಥೂಲ ರೂಪವ
ಹನ್ನಿಶದಲೆಡಬಿಡದೆಯನುಸಂಧಾನವನು ಮಾಳ್ಪ ||
ಸನ್ನುತಾತ್ಮರನಾಯಸದಿ ಸಂ
ಪನ್ನ ಮುಕ್ತಿಯ ಪಡೆವರುಳಿದತಿ
ಭಿನ್ನ ಮತಿಗಳು ಮುಳುಗುವರು ಸಂಸಾರ ಶರಧಿಯಲಿ || ೩೩ ||

ತನಗೆ ನಿನ್ನೀ ಸ್ಥೂಲ ರೂಪವ
ನನವರತ ಭಾವಿಸುತ ತನ್ಮಯ
ನೆನಿಸಿ ಪುಳಕೋದ್ಭಿನ್ನಗಾತ್ರಾನಂದ ಜಲದಿಂದ ||
ತನು ನೆನೆದು ಸುಪ್ರೇಮ ರಸದಲಿ
ಮನ ಮುಳುಗಿ ಬಾಹ್ಯಾರ್ಥ ವಿಷಯದಿ
ನೆನಹಳಿವ ಸೌಖ್ಯವನು ಕರುಣಿಸು ರಾಮ ನೀನೆಂದ || ೩೪ ||

ಇದುವೆ ಸಾಕ್ಷಾತ್ಕೃತಿಯಲ್ಲೆಲೆ
ಪದಮಲನೆ ರಘುನಾಥ ವಿಷಯದ
ಮದವಳಿವಡೀ ಸ್ಥೂಲರೂಪ ಧ್ಯಾನ ಮುಖ್ಯವಲ ||
ಕದಕು ವಿಷಯವು ಕೆಟ್ಟಡಾಕ್ಷಣ
ವೊದಗುವುದು ವಿಜ್ಞಾನವದರಿಂ
ದಿದಿರಳಿದು ನಿಜಪದವ ಪಡೆವರನಾಯಪಡಲೆಂದ || ೩೫ ||

ನಿನ್ನ ಭಕುತಿಯೆ ಸಕಲ ಯುಕುತಿಗೆ
ನಿನ್ನ ಭಕ್ತಿಯೆ ಸಕಲ ಮುಕ್ತಿಗೆ
ನಿನ್ನ ಭಕ್ತಿಯೆ ಸಕಲ ಮುಕ್ತಿ ಸುಖಾಪ್ತಿ ಮೂಲವಲ ||
ಧನ್ಯರೀ ನಿನ್ನಮಳ ಭಕ್ತರು
ಬನ್ನಬಡರಜ್ಞಾನ ಕೂಪದಿ
ಘನ್ನ ವಿರತಿ ವಿವೇಕದಿಂದೈದುವರು ನಿಜ ಪದವ || ೩೬ ||

ಶ್ಯಾಮ ಕೋಮಲಕಾಯ ಕಾಂತಿಯ
ರಾಮಣೀಯಕದರಳುಗಂಗಳ
ಕಾಮ ಶತ ಸನ್ನಿಭ ಮನೋಹರ ರೂಪದಿಂದೆಸೆವ ||
ಭೂಮಿಸುತೆಯರಸುತ್ತ ವನ ವನ
ಸೀಮೆಯಲಿ ತೊಳಲುವ ವಿನೋದದ
ರಾಮ ನೀನೆನ್ನಂತರಂಗದಲಗಲಬೇಡೆಂದ || ೩೭ ||

ಇಟ್ಟ ವಲ್ಕಲ ವಸನದಿಂ ಜಡೆ
ಗಟ್ಟಿದುತ್ತಮ ಮಕುಟದಿಂ ದಳ
ವಟ್ಟ ಕರ ಧನು ಬಾಣದಿಂ ಬತ್ತಳಿಕೆಯಿಂ ಸಹಿತ ||
ಹೆಟ್ಟುಗೆಯನರಸುತ್ತ ಕೂಡೊಡ
ಹುಟ್ಟಿದೀ ಲಕ್ಷ್ಮಣನು ಸಹಿತಲಿ
ಬೆಟ್ಟ ಮಧ್ಯದಲಿದ್ದ ಮೂರ್ತಿಯೆ ಮತಿಯಲಿರಲೆನಗೆ || ೩೮ ||

ಸರ್ವಮಯ ಸರ್ವಾತ್ಮ ಸರ್ವಗ
ಸರ್ವಬಾಹ್ಯಗನಾದ ಪರಶಿವ
ಸರ್ವತಾಪ್ಯನೆ ಸಹಿತೆ ನಿನ್ನೀ ರೂಪವನನವರತ ||
ಸರ್ವದಾ ಧ್ಯಾನಿಸುವ ಕಾಶಿಯ
ಉರ್ವ ಮೋಕ್ಷೇಚ್ಛುಗಳಿಗೊರೆ ಯೆನೆ
ಶರ್ವ ತಾ ಬಲಗಿವಿಯಲೀ ಶ್ರೀರಾಮ ರಾಮೆನುತ || ೩೯ ||

ಕಾಶಿಯಲಿ ಜಡ ಜೀವರಿಂಗೆ ಸ
ದಾಶಿವನು ತಾರಕ ವಚನದುಪ
ದೇಶವನು ಮಾಡುವ ಸುಮಂತ್ರವು ನಿನ್ನ ನಾಮವಲ ||
ದೇಶವರಿಯಲು ನಿಶ್ಚಿತವಲಾ
ನೀ ಸದಾತುಮನೆಂಬದಿದು ಕಡು
ದೋಷಿ ಮೂಢಾತ್ಮಕರು ತಿಳಿಯರು ನಿನ್ನ ನಿಜದಿರವ || ೪೦ ||

ಜಯ ನಮೋ ಶ್ರೀರಾಮಭದ್ರನೆ
ಜಯ ನಮೋ ಪರಬೊಮ್ಮ ವಿಗ್ರಹ
ಜಯ ನಮೋ ಪರಮಾತ್ಮ ಶ್ರೀರಘುನಾಥ ಸುಖಪಾಥ ||
ಜಯ ಭಕುತಜನಯೂಥ ಪಾಲಕ
ಜಯ ಜಗನ್ಮಯ ಭಕ್ತವತ್ಸಲ
ಜಯತು ಲಕ್ಷ್ಮಣಸೇವ್ಯ ಮುನಿಜನ [1]ಭಾ[1]ವ್ಯ ಸುಶ್ರಾವ್ಯ || ೪೧ ||

ಮಾಯೆ ತನ್ನನು ಮುಟ್ಟದಂದದಿ
ಕಾಯಬೇಕೆಂದೆರಗಲಾ ರಘು
ರಾಯ ನುಡಿದನು ನಗುತ ಗಂಧರ್ವೋತ್ತಮಂಗೊಲಿದು ||
ಆಯಿತೀಳೀ ಸ್ತುತಿಗೆ ಮೆಚ್ಚಿದೆ
ನಾಯುಮಂತನೆ ಯೋಗಗಮ್ಯೋ
ಪಾಯ ಹೊಂದೆ ಸನಾತನದ ಮತ್ಪದವನೈದೆಂದ || ೪೨ ||

1 ತಾ (ಪ)

ಆರು [1]ನೀನೆನೆ[1]ಗೆಂದ ಸಂಸ್ತವ
ಸಾರ ವೇದೋದಿತದ ಭಕುತಿಯ
ಸಾರ ಹೃದಯದಿ ಜಪಿಸುವರು ನಿನ್ನುವನೆ ಭಾವಿಸುತ ||
ಸೇರುವದು ವಿಜ್ಞಾನವವರಿಗೆ
ಘೋರ ಭವವನು ಕಳಿದು ನಡೆವರು
ದಾರ ಸತ್ಯಾದ್ವಯ ಮಹಾನುಭವಾಪ್ತ ನಿಜ ಗತಿಯ || ೪೩ ||

ಅಷ್ಟ ವಿಂಶಕ ಸಂಧಿಯಲಿ ಪದ
ವಿಷ್ಟಿನಲು ವರ ರಾಜ ರಾಜರ
ಲಷ್ಟ ಮೂರ್ತಿಗಳೆನಿಪ ರುದ್ರರು ಕೂಡಿದಂದದಲಿ ||
ನಿಟ್ಟನದ ಲಾಲಿಸಿದ ನರರಿಂ
ಗಿಷ್ಟ ಸಿದ್ಧಿಯನೀವನನುರೋ
ತ್ಕೃಷ್ಟ ಗುರು ನಿತ್ಯಾತ್ಮ ಲಕ್ಷ್ಮಿನೃಸಿಂಹನೊಲವಿನಲಿ || ೪೪ ||

ಅಂತು ಸಂಧಿ ೨೮ ಕ್ಕೆ ಪದ ೧೨೪೦ ಕ್ಕೆ

ಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ



---

1 ನೀನೀ (ಖ)

॥ ಶ್ರೀ ರಾಮಚಂದ್ರಾಯ ನಮಃ ॥



# ಇಪ್ಪತ್ತೊಂಭತ್ತನೆಯ ಸಂಧಿ

## ಶಬರಿಗೆ ಮೋಕ್ಷ ಕರುಣಿಸಿದ್ದು

ಸೂಚನೆ ॥ ಭಕ್ತಿಯಲಿ ಪೂಜಿಸಿದ ಶಬರಿಗೆ
ಮುಕ್ತಿಯನು ಕರುಣಿಸಿದನೊಲಿದ
ವ್ಯಕ್ತ ಮೂರುತಿ ರಾಮನಖಿಳಶನಾಮ ಸುಖದಾಮ ॥

ಪದ ॥ ಮಡದಿ ಪಾರ್ವತಿ ಕೇಳು ವರವನು
ಪಡೆದು ಗಂಧರ್ವೋತ್ತಮನು ಮೇ
ಲಡರುತೆಂದನು ರಾಮಚಂದ್ರಂಗೆರಗಿ ಕೈಮುಗಿದು ॥
ಪೊಡೆಯ ಚಿತ್ರೈಸಿಲ್ಲಿ ಮುಂದದೆ
ನಡುವೆ ಶಬರಿಯೆನಿಪ್ಪದಾಶ್ರಮ
ಪೆಡೆಗೆ ಲಕ್ಷ್ಮಣ ಸಹಿತ ದೇವರು ತೆರಳಬೇಕೆಂದ ॥ ೧ ॥

ನಿನ್ನ ಸಿರಿ ಚರಣಾಬ್ಜಯುಗ ಸಂ
ಪನ್ನ ಭಕ್ತಿಯ ಮಾರ್ಗದಿರವನು
ನಿರ್ಣಯಿಸಿ ಬಲ್ಲವಳು ಜನಕಜೆಯಿರವ ಸಂಸ್ಥಿತಿಯ ॥
ವರ್ಣಿಸುವಳನುತರ್ಕ ತೇಜ ಸು
ವರ್ಣವಾದೀ ವಿಷ್ಣುವಿನ ನಿಜ
ದುನ್ನತಿ ಸ್ಥಾನಕ್ಕೆ ಸಂದನು ಬಳಿಕ ಗಂಧರ್ವ ॥ ೨ ॥

ರಾಮಗುಣ ಸಂಸ್ಮರಣೆ ತದ್ಗುಣ
ರಾಮ ತದ್ಗುಣನಾಮ ಕೀರ್ತನ
ಧಾಮಕರಿಗೆಂತೀ ಮಹಿತ್ವೆಯಮೋಲು ಹರಿಪದಕೆ ॥

ಕಬಂಧ ರಾಕ್ಷಸನ ಸಂಹಾರ



ರಾಮ ಲಕ್ಷ್ಮಣರಿಗೆ ಶಬರಿಯ ಆತಿಥ್ಯ



ತಾಮಸಸು ಸಹ ನಡೆದನಿತ್ತಲು
ಭೀಮ ಸಿಂಹವ್ಯಾಘ್ರ ಘೂಳಿತ
ದಾ ಮಹಾಟವಿಯಿಂದ ಹೊರವಂಟರು ರಘೂತ್ತಮರು ॥ ೩ ॥

ಮೆಲ್ಲಮೆಲ್ಲನೆ ಶಬರಿಯಾಶ್ರಮ
ದಲ್ಲಿಯೈತಂದನು ರಘೂತ್ತಮ
ನಿಲ್ಲದೀಕ್ಷಿಸಿ ಶಬರಿ ಲಕ್ಷ್ಮಣ ಸಹಿತ ಬಂದಿರಲು ॥
ಭುಲ್ಲವಿಸಿ ಹರುಷಾಶ್ರುವಿಂ ತನು
ವೆಲ್ಲ ನೆನೆಯಲು ಬೇಗ ಬಂದಿದಿ
ರಲ್ಲಿ ಬಿದ್ದಳು ರಾಮನಂಘ್ರಿದ್ವಯಕೆ ಭಕುತಿಯಲಿ ॥ ೪ ॥

ಬಂದಿರ್ಕೆ ಶ್ರೀರಾಮ ಲಕ್ಷ್ಮಣ
ರಿಂದು ತನ್ನಾಲಯಕೆನುತ ಕರ
ತಂದು ಕುಳಿರಿಸಿದಳು ಯಥೋಚಿತದಾಸನದ ಮೇಲೆ ॥
ಸಂದಣಿಯ ಸಂತೋಷದೋಂಪುಳಿ
ಯಿಂದ ಸಂಭ್ರಮಿಸುತ್ತ ಜಲವನು
ತಂದು ತೊಳೆದಳು ರಾಮಲಕ್ಷ್ಮಣರಂಘ್ರಿ ಪಂಕಜವ ॥ ೫ ॥

ಭಕ್ತಿಯಿಂ ತಜ್ಜಲವ ಶಿರದಲಿ
ಹೊತ್ತು ಹರಹರ ಧನ್ಯನಾದೆನು
ಮರ್ತ್ಯರಿಂಗಿದು ಸುಲಭವೇ ನಿನ್ನಂಘ್ರಿಜಲವೆನುತ ॥
ಮತ್ತೆ ತನು ನೆರೆ ನೆನೆಯ ಮಿಂದುದು
ನಿತ್ಯ ತುಷ್ಟನ ಪೂಜಿಸುವಡಾ
ನೆತ್ತ ಬಲ್ಲೆನೆನುತ್ತಲರ್ಘ್ಯಾದಿಕವ ಮಾಡಿದಳು ॥ ೬ ॥

ಪೂಜಿಸಿದಳಾ ಶಬರಿ ವಿಧಿಯಿಂ
ದೋಜೆ ತಪ್ಪದೆ ಸಕಲ ಸದುಗುಣ
ಭಾಜನನ ಸೌಮಿತ್ರ ಸಹಿತ ಸಚರ್ಯೆಯಿಂದೊಲಿದು ॥

ರಾಜ ರತುನನನು ಬಹವೆನುತ್ತ ವಿ
ರಾಜಿಸುವ ಸತ್ಕಾರ ಮಾಡಿದ
ಭಾಜನಂಗಳನುಳ್ಳದೆಲ್ಲವ ತಂದು ನೀಡಿದಳು ॥ ೭ ॥

ಹಸನವಾದುತ್ತಮದ ಫಲಗಳ
ವಿಸರವಮೃತೋಪಮದ ಪಕ್ವ
ಪ್ರಸರವನುವನ್ನನ್ನ ಮೂಲವನಿತ್ತು ಭಕುತಿಯಲಿ ॥
ಹೆಸರಿಸಿದ ಗಂಧದಲಿ ಪರಿಪರಿ
ಕುಸುಮದಲಿ ರಾಮಾಂಘ್ರಿಯುಗಳವ
ಮುಸುಕಿದಳು ಮುಳುಗಿದಳು ಹರಿಮಹಿಮಾರ್ಣವದಿ ಶಬರಿ ॥ ೮ ॥

ಭಕ್ತಿಗುಣ ಸಂಪನ್ನೆ ಶಬರಿಯು
ಸತ್ವ ಶುದ್ಧಿಯನೀಕ್ಷಿಸುತ್ತೊಲಿ
ದರ್ಥಿಯಿಂ ಕುಳಿತನು ಸಹಾನುಜನಾಗಿ ರಾಘವನು ॥
ಮತ್ತೆ ಶಿರದಲಿ ಕರಯುಗವ ಮುಗಿ
ವೃತ್ತ ನುಡಿದಳು ರಾಮ ಕೇಳೀ
ಯುತ್ತಮಾಶ್ರಮ ಋಷಿಗಳದು ಮದ್ಗುರುಗಳವರೆಂದ ॥ ೯ ॥

ಪರಮ ಋಷಿವರರಿದ್ದರದರೊಳು
ನಿರುತ ತಾನವರುಗಳ ಸೇವೆಯ
ಚರಿಸಿಕೊಂಡಿರೆ ವರುಷ ಬಹು ಸಾಹಸ್ರ ಸಲಲಿಲ್ಲಿ ॥
ತೆರಳಿ ಹೋಗುತ ಬ್ರಹ್ಮಪದವಿಗೆ
ಕರೆದೆನಗೆ ನೇಮಿಸಿದರಿಲ್ಲಿಯೆ
ಹಿರಿದುಕಾಲಿರು ಮುಂದೆ ಕಾರಣವುಂಟು ನಿನಗೆನುತ ॥ ೧೦ ॥

ದಶರಥಗೆ ಮಗನಾಗಿ ಜನಿಸಿದೆ
ನಸುರರನು ಸಂಹರಿಸಿ ಧರ್ಮ
ಪ್ರಸರವನು ಪಾಲಿಸೆ ಸನಾತನ ವಿಷ್ಣುವೇ ಬಂದು ॥

ಹೆಸರಿನಿಂ ರಾಮಾಖ್ಯೆಯಲಿ ವನೆ |
ವಸತಿಗೈದಿಹ ಮುಂದೆ ರಕ್ಷಿಸೆ
ಋಷಿಗಳನು ಪರಮಾತ್ಮನದ್ವಯನಾದ ಪರಬೊಮ್ಮ || ೧೧ ||

ಇಲ್ಲಿಗೀ ತಾ ಬಹನು ರಾಘವ
ನಿಲ್ಲು ನೀನೀ ಸ್ಥಳದಿ ತತ್ಪದ
ಪಲ್ಲವದ ಧ್ಯಾನದಲಿ ಸುಸ್ಥಿತಿಯಾಗಿ ಸುಖದಿಂದ ||
ಬಲ್ಲೆವಾತನು ಚಿತ್ರಕೂಟದಿ
ವಲ್ಲಭೆಯ ಸಹೋದರಿಗಿಳಿವ ಕೈ
ವಲ್ಯನಾಥನು ಲೋಕ ಸಂಗ್ರಹಕೇದರವರಂದು || ೧೨ ||

ಎನ್ನಗಿಲ್ಲಿಗೆ ರಾಮಬಹನೀ
ನನ್ನಗೀ ದೇಹವನು ರಕ್ಷಿಸು
ಚಿನ್ಮಯಾಯ ರಾಮನನು ಕಂಡಂದಿಂಗೆ ದೇಹವಿದ ||
ವಹ್ನಿಯಲಿ ನೀ ದಹಿಸಿ ಪಡೆ ಪರ
ಮೋನ್ನತಿಯ ಮೋಕ್ಷವನೆನುತ್ತವೆ
ನಿರ್ಣಯಿಸಿ ನಡೆದರು ಮಹಾತ್ಮರು ಬ್ರಹ್ಮಪದಕೆನಲು || ೧೩ ||

ಅವರ ನುಡಿಯನು ನಂಬಿ ರಾಘವ
ತವಪದದ ಧ್ಯಾನದೊಳಗಿದ್ದೆನು
ರವಿಕುಲೇಶ್ವರನೆಂದು ಬಹನೆಂದೆಂದು ಪರಿಯಂತೆ ||
ತವಕಿಸುತ್ತಿರಲೆಂದು ಕರುಣಾ
ರ್ಣವನೆ ಗೋಚರಿಸಿದೆಯಲಾ ತೆ
ಪ್ಪುವುದೆ ಹಿರಿಯರ ವಚನ ಸಫಲತೆಯಾಯ್ತು ಧಿಟಕೆನಗೆ || ೧೪ ||

ಗುರು ಕರುಣದಿಂದೆನಗೆ ನಿನ್ನಯ
ಚರಣ ದರುಶನವಾಯಿತಲ್ಲದೆ
ದೊರಕಲರಿವುದೆ ಹೀನಜಾತಿ ವಿಮೂಢವೇಷ್ಟಿತೆಗೆ ||

ಪರಮ ಪುರುಷನೆ ನಿನ್ನ ಶರಣರ
ಶರಣ ಸೇವಾನಿರತೆಯಾಗದ
ಡರಿದಲಾ ತವ ಪಾದಪದುಮಪರಾಗ ಸೌಖ್ಯವಿದು ॥ ೧೫ ॥

ಎಂತು ಗೋಚರನಾದೆ ತನಗಾ
ದ್ಯಂತ ರಹಿತನೆ ರಾಮ ಮುನಿಗಳ
ಚಿಂತನೆಗೆ ಮೈಗೊಡದ ನಿಗಮಕಸಾಧ್ಯವಾಗಿದ್ದ ॥
ಕಂತು ಮೋಹನರೂಪ ನಿನ್ನುವ
ನೆಂತು ಪೊಗಳಲು ಬಲ್ಲೆನೇ ಶ್ರೀ
ಕಾಂತ ಕರುಣಪ್ರಮೇನ ಮಾಡುವೆನೆಂದಳಾ ಶಬರಿ ॥ ೧೬ ॥

ನೀನೆನಗೆ ಗತಿಮತಿಯನಾಥೆಗೆ
ಹೀನ ಯೋನಿ ವಿಜಾತಿಗೆನುತಿರೆ
ಸಾನುರಾಗದಿ ರಾಮನೆಂದನು ಶಬರಿಯನು ನೋಡಿ ॥
ಏನನೆಂದೈ ಸ್ತ್ರೀಪುರುಷರಿಂ
ದೇನು ಕಾರಣ ಜಾತಿಯಾಶ್ರಮ
ವೇನು ಕಾರಣವಿಲ್ಲಕಾರಣ ಭಕ್ತಿ ಕೇಳೆಂದ ॥ ೧೭ ॥

ಭಕ್ತಿಯಿಲ್ಲದೆ ಜಾತಿಯಾಶ್ರಮ
ದುತ್ತಮಭಿಮಾನವನು ಬರಿದೇ
ಹೊತ್ತಡದರಿಂ ಸಿದ್ಧಿಯಾವುದು ನಟನ ಪರಿಯಲ್ಲಿ ॥
ಭಕ್ತಿಯಿಂ ಮತ್ಪದವ ಭಜಿಸುವ
ನತ್ಯಧಮನಾವರೆಯು ತನ್ನಲಿ
ಚಿತ್ತದೊಲವವನಲ್ಲಿ ಮಿಗಿಲಾಗಿಹುದು ಕೇಳೆಂದ ॥ ೧೮ ॥

ದಾನ ಯಜ್ಞ ತಪೋವ್ರತಾನು
ಷ್ಠಾನ ಸಾಂಗಷ್ಟಾಂಗಯೋಗ ವಿ
ಧಾನ ಜಪವಧ್ಯಯನ ತರ್ಕ ಮಿಮಾಂಸ ಮೊದಲಾದ ॥

ಏನ ಕಲಿತಾಚರಿಸಿದಡು ಕೇ
ಳಾನವಗೆ ಗೋಚರಿಸೆ ಭಕ್ತಿ ವಿ
ಹೀನನಾದಗೆ ತಾನು ಮೆಚ್ಚುವನಲ್ಲ ಕೇಳೆಂದ || ೧೯ ||

ಭಕ್ತಿಯಿಲ್ಲದಗಿಲ್ಲ ಯಿಹಪರ
ಭುಕ್ತಿಮುಕ್ತಿಯಲೇಶವದರಿಂ
ಭಕ್ತಿಯನು ನಿನಗೆಂಬೆ ತತ್ಸಾಧನವ ಕಿಂಚಿತವ ||
ಚಿತ್ತಶುದ್ಧಿಯು ಪಡೆವಡಾದಿಯು
ಉತ್ತಮರ ತತ್ಸಂಗವೇ ಮೊದ
ಲುತ್ತಮಹ ಸದ್ಭಕ್ತಿಯೆನಿಸುವುದೆಂದನಾ ರಾಮ || ೨೦ ||

ಎರಡನೆಯ ಭಕ್ತಿಯದು ಮತ್ಕಥೆ
ಚರಿತವನೆ ಹೇಳುವುದು ಮೇಲಾ
ದರದಿ ತಾ ಮಾಡಿದ್ದ ಮಹದವತಾರ ಲೀಲೆಗಳ ||
ಹರುಷದಲಿ ಕೇಳುವುದು ಭಕುತಿಯು
ಸರಣಿಯವು ಮೂರನೆಯದನ್ಯರಿ
ಗೊರವುದುವ್ಯಾಖ್ಯಾನದಿಂ ನಾಲ್ಕನೆಯ ಭಕುತಿಯದು || ೨೧ ||

ಐದನೆಯದಾಚಾರ್ಯನ ಶ್ರೀ
ಪಾದವನೆ ತಾನೆನುತ ಭಕುತಿಯ
ಲಾದ ಕಪಟವನುಳಿದು ಸೇವೆಗಳನ್ನು ಮಾಡುವುದು ||
ವಾದಿಸದೆ ವಂಚಿಸದೆ ಹಿತವನೆ
ಸಾಧಿಸುತ ಸತ್ಕರಿಸಿ ಶಾಸ್ತ್ರದ
ಭೇದದೊಳಗುತ್ತಮವನರಿವುತ್ತಿಹುದು ಕೇಳೆಂದ || ೨೨ ||

ಆರನೆಯದದು ದಾನಧರ್ಮಾ
ಚಾರ ಪರಹಿತ ಪುಣ್ಯ ಮಾರ್ಗವಿ
ಹಾರದಿಂದಿಹುದರ್ಥಿಯಿಂದೆನ್ನನುಳ ಮೂರುತಿಯ ||

ಸಾರ ತುಳಸೀ ಮುಖ್ಯ ಪುಷ್ಪವ
ನಾರಯಿದು ಗಂಧಾಕ್ಷತಾದ್ಯುಪ
ಹಾರ ಪೂಜಾನಿಷ್ಠೆಯಲ್ಲಿಹುದೆಂದು ಕರುಣಿಸಿದ || ೨೩ ||

ಯಮನಿಯಮ ಮುಖ್ಯಾದಿ ಪೂಜಾ
ಕ್ರಮವು ಕೇಳೇಳನೆಯದೆಂತೆನೆ
ವಿಮಳ ಮನ್ಮಂತ್ರನ ಷಡಂಗಾಮೂಲ ಸಹವಾಗಿ ||
ಭ್ರಮೆಯಳಿದು ಗುರುಮುಖದಿ ಪಾಸ್ತ್ರೀ
ಕ್ರಮದಿ ಜಪಿಸುವುದಖಿಳ ಸಾರೋ
ತ್ತಮವನೀ ಸಂಸಾರ ಘೋರೋತ್ತಾರ ತಾರಕವ || ೨೪ ||

ಎಂಟನೆಯದೆಲೆ ಶಬರಿಯನುದಿನ
ನಂಟುವಡೆವುತ ಸಕಲ ಭೂತದಿ
ಪಂಟಿಸಿಹ ಪರಮಾತ್ಮನೆಂದು ದಯಾಪರತ್ವದಲಿ ||
ಯೆಂಟುಮಡಿ ತನ್ನಂದ ಮಿಗಿಲೆನಿ
ತುಂಟನಿತರಿಂ ಪೂಜಿಪುದ ನಿ
ಷ್ಕಂಟಕದಿ ಮದ್ಭಕ್ತಿಯುಳ್ಳರೆನೆಂದನಾ ರಾಮ || ೨೫ ||

ಪುತ್ರ ಮಿತ್ರ ಕಳತ್ರ ಧನ ಸಂ
ಪತ್ತು ವಿಷಯಾದ್ಯಾಭಿಲಾಷೆಯ
ಕತ್ತರಿಸಿ ವೈರಾಗ್ಯದಲಿ ಶಮೆದಮೆಯನಳವಡಿಸಿ ||
ಚಿತ್ತ ಶುದ್ಧಿಯ ಪಡೆದು ಬಯಲಿಗೆ
ಮತ್ತಕಾಶಿನಿಯರಲೆರಗದಿಹು
ದುತ್ತಮೋತ್ತಮವಾದ ತನ್ನೊಂಟನೆಯ ನಿಜ ಭಕುತಿ || ೨೬ ||

ಇನ್ನು ವೊಂಭತ್ತನೆಯ ಭಕುತಿಯೆ
ತನ್ನ ತತ್ವ ವಿಚಾರದಾತ್ಮನ
ನಿರ್ಣಯವ ನೆರೆ ತಿಳಿದು ಜೀವಭ್ರಾಂತಿಯನು ಕಳಿದು ||

ಭಿನ್ನ ಭಾವವನೆಳಿದು ನಿಜ ಚೈ
ತನ್ಯಮಾತ್ರವೆಯುಳಿದ ಸಚ್ಚಿ
ತ್ಪೂರ್ಣ ಪರಮಾನಂದ ಪದವಾಗಿಹುದು ಕೇಳೆಂದ || ೨೭ ||

ಈ ಪರಿಯ ನವವಿಧದ ಭಕುತಿಯ
ರೂಪುವರಿದವರಾರದಾಗಲಿ
ನೈಪುಣತೆ ಬೇರಿಲ್ಲ ನಾರೀ ಪ್ರುರುಷರೆಂದೆಂಬ ||
ಕಾಪುರಷರುತ್ತಮರೆನಿಪ್ಪುದು
ರೂಪಭೇದವೆ ಶಬರಿ ಭಕುತಿಯ
ದೀಪವೇ ಗುಣವಲ್ಲದನ್ಯದಲೇನು ಫಲವೆಂದ || ೨೮ ||

ಆವಗೆನ್ನಲಿ ಪ್ರೇಮಯುತ ಸ
ದ್ಭಾವಭಕುತಿಯು ಜನಿಸುವುದು ಬಳಿ
ಕಾ ವಿಮಳ ಭಕುತಿಯದು ಜನಿಸಿದ ಮಾತ್ರ ಮನಜರಿಗೆ ||
ತೀವಿ ತನ್ನನುಭವವು ಸಿದ್ಧಿಸಿ
ಪಾವನದ ಮುಕುತಿಯನು ಪಡೆವನು
ದೇವ ತತಿಗೂ ದುರ್ಲಭವು ನೀ ಜನ್ಮದೊಳಗೆಂದ || ೨೯ ||

ಅದು ನಿಮಿತ್ತವೆ ಸಕಲ ಶಾಸ್ತ್ರದಿ
ವಿದಿತ ನಿಶ್ಚಯ ಸಾರವಲ್ಲೆ
ಮುದದಿ ಮುಕುತಿಯ ಪಡೆಯಲಿಚ್ಛಿಸುವವಗೆ ಮದ್ಭಕ್ತಿ ||
ಮೊದಲ ಸಾಧನವೆಲ್ಲಿಯೂ ಮ
ತ್ಪದ ಶರಣರಾದಾತ್ಮವಿದರ
ಲ್ಲೊದವಿದಾ ಸತ್ಸಂಗವಿಲ್ಲಾ ಸಾರದೊಳಗೆಂದ || ೩೦ ||

ತನ್ನ ಪದಯುಗ ಭಕ್ತಿಯುತ ಸಂ
ಪನ್ನೆ ನೀನಾಗಿದ್ದೆಯದರಿಂ
ದೆನ್ನ ದರುಶನವಾಯಿತಂಜದಿರೆಲೆ ಶಬರಿ ನಿನಗೆ ||

ಉನ್ನತದ ಮುಕುತಿಯನು ಪಡೆವುದ
ಕಿನ್ನು ಸಂಶಯವಿಲ್ಲ ಬಲ್ಲಡೆ
ತನ್ನರಸಿ ಸೀತಾ ಸ್ಥಿತಾಸ್ಪದವನರುಹು ನೀನೆಂದ || ೩೧ ||

ಎಲ್ಲಿಹಳು ತನ್ನರ್ಧದೇಹದ
ಫುಲ್ಲಲೋಚನೆ ಸೀತೆಯೊಕಡೆ
ಯೆಲ್ಲಿ ಚೋರರು ಕೊಂಡು ಪೋಯ್ದುದ ನೀನು ಕಂಡಿಹೆಯ ||
ಬಲ್ಲಡುಸುರೆನೆ ಶಬರಿ ನುಡಿದಳು
ವಲ್ಲಭನು ನೀ ಬಲ್ಲೆ ವಿಶ್ವದ
ಲುಳ್ಳದನು ಸರ್ವಜ್ಞ ಸರ್ವಾಂತರಿ ಜಗದ್ವ್ಯಾಪಿ || ೩೨ ||

ಪ್ರಾಕೃತರ ಪರಿ ತನ್ನ ಕೇಳುವೆ
ಲೋಕದನುಸಾರದಲಿ ಹೇಳಲೆ
ಬೇಕು ನೀ ವಿಭುವಾದ ಕಾರಣ ಸೀತೆಯಿದ್ದಿರವ ||
ನಾಕರಿಪು ರಾವಣನು ಲಂಕೆಯ
ಶೋಕವನವಲ್ಲೊಯ್ದಿರಿಸಿದನು
ಜೋಕೆಯಿಂ ಮುಂದಣ ಪಥಾಂತರವದನು ಚಿತ್ತವಿಸು || ೩೩ ||

ರಾಮ ಸನಿಹದಿ ಮುಂದೆ ಪಂಪಾ
ನಾಮವಲ್ಲಿ ಸರೋವರವು ಕೂ
ಡಾ ಮಹಾನಗ ಋಷ್ಯಮೂಕಗಿರಿವರ ಸಮಾಖ್ಯೆಯಲಿ ||
ಕ್ಷೇಮದಿಂದಲ್ಲಿಹನು ಮಂತ್ರಿ
ಸ್ತೋಮ ನಾಲ್ವರು ಸಹಿತವಾಗಿಯೆ
ಭೀಮ ವಿಕ್ರಮ ವಾನರಾಧಿಪನೆನಿಪ ಸುಗ್ರೀವ || ೩೪ ||

ಅನವರತ ಭಯಭೀತಿಯಿಂದಿಹ
ನನುಪಮನು ಸುಗ್ರೀವನೆಂಬವ
ನನಿಲವಿಕ್ರಮ ವಾಲಿ ತನ್ನಗ್ರಜನವನ ಹಗೆಯಿಂದ ||

ಮುನಿಯ ಶಾಪದಿ ಋಷ್ಯ ಮುಖವನು
ಮನವ ಮಾಡನು ಬಾಲಿ ನೀನಾ
ವನಚರೇಂದ್ರನ ಸಖ್ಯವೆಸಗುವುದೆಂದಳಾ ಶಬರಿ ‖ ೩೫ ‖

ಎಲೆ ರಘೂತ್ತಮ ನಿನ್ನ ಕಾರ್ಯಕೆ
ಬಳಲುವನು ಸುಗ್ರೀವನಾತನ
ಸಲುಗೆಯನು ನೀ ಮಾಡು ನಿನ್ನಿದಿರಿನಲಿ ಯೀಕ್ಷಣವೆ ‖
ಜ್ವಲಿಸಿಯಗ್ನಿಯ ಹೊಗುವೆನೆರಡೇ
ಘಳಿಗೆ ನಿಂದಿರು ರಾಮ ತನುವಿದ
ಕಳಚುವನ್ನಗ ನಿನ್ನ ಮೂರ್ತಿಯ ನೋಡುತಿರಬೇಕು ‖ ೩೬ ‖

ಇಂದ್ರನೀಲನಿಭಾಂಗ ಕಾಂತಿಯ
ಮಂದಹಾಸದ ದಂತ ಪಂಙ್ತಿಯ
ಚಂದದೆಸೆವ ಕಪೋಲ ಮಂಡಲದಧರದರುಣಿಮೆಯ ‖
ಯಿಂದಿವರ ಲೋಚನದ ಕರುಣಾ
ಕಂದಳಿತ ಕಮನೀಯ ಮೋಹನ
ದಿಂದ ವದನದ ದಿವ್ಯ ಮೂರ್ತಿಯದಿದಿರಲಿಫ್ಪ ತನಗೆ ‖ ೩೭ ‖

ಚಾರುದಿವ್ಯ ರಜದ್ವಯದ ಸುಕು
ಮಾರಗಾತ್ರದ ಕಂಬುಕಂಠದ
ಚೀರ ವಸನವ ಪೀನವಕ್ಷದಲೆಸೆದು ಲಂಬಿಸುವ ‖
ಸಾರ ತುಳಸೀ ಮಾಲಿಗಳ ಗಂ
ಭೀರ ನಾಭೀಹೃದದ ತ್ರಿವಳಿಯ
ಭೂರಿ ಭುವನವ ತಾಳ್ದ ಜಠರವ ಕಂಡು ತನುವಳಿಯೆ ‖ ೩೮ ‖

ಭೂರಿಕುಂಭ ನಿತಂಬ ಬಿಂಬದ
ಲೂರುಯುಗ ಜಾನುಗಳ ಜಂಘಾ
ದಾರ ಗುಲ್ಫದ ಹಾಹೆದೊಡರ ಪದಂಗುಲಿಯ ನಖದ ‖

ವಾರಿಜಾರಿ ಪ್ರಮುಖ ಪದತಳ
ದೋರಣದ ರೇಖೆಯದ ತೇಜೋ
ಪೂರಿತಾಂಗನ ಕಾಣುತಿದಿರಲಿ ಬಿಡುವೆನೀ ತನುವ || ೩೯ ||

ಧೃತಕರದ ಶರಚಾಪವರ ಭ್ರೂ
ಲತೆಯ ಭಾಳಸ್ವೇದ ಬಿಂದು
ದ್ಯುತಿಯುಲಿಸೆವ ಜಟಾಕಿರೀಟ ಮನೋಹರಾಕೃತಿಯ ||
ಜಿತತಮೋಭಾಸ್ಕರನಿಭ ಶ್ರೀ
ಪತಿಯೆ ನಿನ್ನುವ ನೋಡುತೀಕ್ಷಣ
ಹುತವಹಂಗಿಂತೊಡಲ ಕೂಡುವೆ ನಿನ್ನ ನಿಜಪದವ || ೪೦ ||

ಇಂತೆನುತ್ತಾ ಶಬರಿ ಲಕ್ಷ್ಮೀ
ಕಾಂತನನು ನೋಡುತ್ತ ರಾಘವ
ನಂತಿಕದಿ ಹುತವಹಗೆ ಹೋಮಿಸಿ ಪಂಚಭೌತಿಕದ ||
ಭ್ರಾಂತಿ ವಿದ್ಯಾ ದೇಹಬಂಧನ
ದಿಂ ತೊಲಗಿ ರಾಘವನ ಕರುಣದಿ
ಶಾಂತ ಮುಕ್ತಿಯನೈದಿದಳು ವರಯೋಗಿ ದುರ್ಲಭವ || ೪೧ ||

ಆವುದತಿ ದುರ್ಲಭ ಜಗತ್ಪತಿ
ದೇವ ರಾಘವನೊಲಿದರಿಂಗೆಲೆ
ದೇವಿ ಪರಮಾತುಮಗೆ ಹೀನೋತ್ತಮ ವಿಭೇದಗಳು ||
ಆವುದುಂಟೀ ಭಕ್ತವತ್ಸಲ
ದೇವನಲಿ ಸದ್ಭಕ್ತಿಯುಳ್ಳವ
ನಾವನಾಗಲಿ ಗತಿಯ ಪಡೆವನು ರಾಮಚಂದ್ರನಲಿ || ೪೨ ||

ಅತ್ಯಧಮೆ ಸಹ ಪಡೆದಳಾ ರಘು
ಸತ್ತಮನ ಕರುಣದಲಿ ಮುಕುತಿಯ
ನೃತ್ತಮಾಚಾರದಲಿ ವಿಪ್ರರು ಶಮದಮಗಳಿಂದ ||

ನಿತ್ಯ ರಾಮಧ್ಯಾನ ಪೂಜಾ
ಶಕ್ತಿಯುಳ್ಳ ಮಹಾನುಭಾವರು
ಮುಕ್ತಿಪಡೆವೆಲ್ಲವರು ಸಂಶಯವೆಂದನೀಶ್ವರನು ॥ ೪೩ ॥

ಉತ್ತಮ ಶ್ರೀ ರಾಮಚಂದ್ರ ಪ
ದೋತ್ತಮದ್ವಯ ಭಕ್ತಿಯೋ ಸ
ದ್ವೃತ್ತರಿರ ಮುನಿಗಳಿರ ಸಂಶಯಯುತ ವಿರಕ್ತರಿರ ॥
ಸತ್ವಗುಣ ನಿಧಿಗಳಿರ ಶಾಂತ ಸು
ಚಿತ್ತರಿರ ಧಿಟ ಕೇಳಿರೈ ಸುವಿ
ಚಿತ್ತದಲಿ ವರಕಾಮಧೇನು ಮುಮುಕ್ಷು ಸಂತತಿಗೆ ॥ ೪೪ ॥

ಕಾಮ್ಯ ಕರ್ಮವನುಳಿದು ನಾನಾ
ಭ್ರಾಮಕದ ಬಹು ಮಂತ್ರತಂತ್ರದ
ನೇಮವಿಡಿದಜ್ಞಾನ ವಿಷಯವನೆಲ್ಲವನು ಬಿಟ್ಟು ॥
ನಾ ಮುದದಿ ಭಜಿಸುವ ಚಿದಾತ್ಮ
ಶ್ಯಾಮಕಾಯ ಮನೋಹರ ಶ್ರೀ
ರಾಮನನು ಭಜಿಸುವದೆನುತ್ತೀಶ್ವರ ನಿರೂಪಿಸಿದ ॥ ೪೫ ॥

ಸಂದವಿಲ್ಲಿಗರಣ್ಯ ಕಾಂಡವು
ಸಂಧಿಯೋ ನವವಿಂಶ ಪದಗಳ
ವೃಂದನಾಲ್ವತ್ತಾರಿದನು ಹೇಳಿದಡೆ ಕೇಳಿದಡೆ ॥
ದಂದುಗವ ಪರಿಹರಿಸಿ ಪರಮಾ
ನಂದ ಸಿದ್ಧಿಯನೀವನಾಶ್ರಿತ
ಬಂಧು ಗುರುನಿತ್ಯಾತ್ಮಲಕ್ಷ್ಮೀನೃಸಿಂಹನೊಲವಿನಲಿ ॥ ೪೬ ॥

ಅಂತು ಸಂಧಿ ೨೪ ಕ್ಕೆ ಪದ ೧೮೬ ಕ್ಕೆ
ಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ

— ಅರಣ್ಯಕಾಂಡ ಮುಗಿದುದು —

ಸ್ವಸ್ತಿಪ್ರಜಾಭ್ಯಃ ಪರಿಪಾಲಯಂತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ||
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವಂತು || ೧ ||

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ
ದೇಶೋಽಯಂ ಕ್ಷೋಭರಹಿತೋ ಸಜ್ಜನಾಃ ಸಂತು ನಿರ್ಭಯಾಃ || ೨ ||

ಅಪುತ್ರಾಃ ಪುತ್ರಿಣಃ ಸನ್ತು ಪುತ್ರಿಣಃ ಸನ್ತು ಪೌತ್ರಿಣಃ
ಅಧನಾಃ ಸಧನಾಃ ಸಂತು ಜೀವನ್ತು ಶರದಾಂ ಶತಮ್

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾವಾ ಪ್ರಕೃತೇಃ ಸ್ವಭಾವಾತ್ || ೩ ||
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ || ೪ ||

ಯದಕ್ಷರ ಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್
ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ || ೫ ||

ಶ್ರೀಕೃಷ್ಣಾರ್ಪಣಮಸ್ತು



# ಅಧ್ಯಾತ್ಮ ರಾಮಾಯಣ

## ಕಿಷ್ಕಿಂಧಾಕಾಂಡ



ಯೋ ವಾಲಿನಾ ಧ್ವಸ್ತಬಲಂ ಸುಕಂಠಂ ನ್ಯಾಯೋಜಯದ್ರಾಜಪದೇ ಕಪೀನಾಂ

ತಂ ಸ್ವೀಯಂ ಸಂತಾಪ ಸುತಪ್ತ ಚಿತ್ತಂ ಶ್ರೀಜಾನಕೀಜೀವನಮಾನತೋಽಸ್ಮಿ ||

# ॥ ಶ್ರೀ ರಾಮಚಂದ್ರ ಧ್ಯಾನಮ್ ॥

ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ ।
ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ ॥೧॥

ವೈದೇಹೀ ಸಹಿತಂ ಸುರದ್ರುಮತಲೇ ಹೈಮೇ ಮಹಾಮಂಟಪೇ
ಮಧ್ಯೇಪುಷ್ಪಕಮಾಸನೇ ಮಣಿಮಯೇ ವೀರಾಸನೇ ಸುಸ್ಥಿತಮ್ ।
ಅಗ್ರೇ ವಾಚಯತಿ ಪ್ರಭಂಜನಸುತೇ ತತ್ತ್ವಂ ಮುನಿಭ್ಯಃ ಪರಂ
ವ್ಯಾಖ್ಯಾಂತಂ ಭರತಾದಿಭಿಃ ಪರಿವೃತಂ ರಾಮಂ ಭಜೇ ಶ್ಯಾಮಲಮ್ ॥೨॥

ವಾಮೇ ಭೂಮಿಸುತಾ ಪುರಶ್ಚ ಹನುಮಾನ್ ಪಶ್ಚಾತ್ ಸುಮಿತ್ರಾಸುತಃ
ಶತ್ರುಘ್ನೋ ಭರತಶ್ಚ ಪಾರ್ಶ್ವದಲಯೋರ್ವಾಯ್ವಾದಿಕೋಣೇಷು ಚ ।
ಸುಗ್ರೀವಶ್ಚ ವಿಭೀಷಣಶ್ಚ ಯುವರಾಟ್ ತಾರಾಸುತೋ ಜಾಂಬವಾನ್
ಮಧ್ಯೇ ನೀಲಸರೋಜಕೋಮಲರುಚಿಂ ರಾಮಂ ಭಜೇ ಶ್ಯಾಮಲಮ್ ॥೩॥

ರಾಮಂ ರಾಮಾನುಜಂ ಸೀತಾಂ ಭರತಂ ಭರತಾನುಜಮ್ ।
ಸುಗ್ರೀವಂ ವಾಯುಸೂನುಂ ಚ ಪ್ರಣಮಾಮಿ ಪುನಃ ಪುನಃ ॥೪॥

ನಮೋಽಸ್ತು ರಾಮಾಯ ಸಲಕ್ಷ್ಮಣಾಯ
ದೇವ್ಯೈ ಚ ತಸ್ಯೈ ಜನಕಾತ್ಮಜಾಯೈ ।
ನಮೋಽಸ್ತು ರುದ್ರೇಂದ್ರ ಯಮಾನಿಲೇಭ್ಯೋ
ನಮೋಽಸ್ತು ಚಂದ್ರಾರ್ಕ ಮರುದ್ಗಣೇಭ್ಯಃ ॥೫॥

ಚರಿತಂ ರಘುನಾಥಸ್ಯ ಶತಕೋಟಿಪ್ರವಿಸ್ತರಮ್ ।
ಏಕೈಕಮಕ್ಷರಂ ಪ್ರೋಕ್ತಂ ಮಹಾಪಾತಕನಾಶನಮ್ ॥೬॥

ವಾಲ್ಮೀಕಿ ಗಿರಿ ಸಂಭೂತಾ ರಾಮಸಾಗರಗಾಮಿನೀ ।
ಪುನಾತು ಭುವನಂ ಪುಣ್ಯಾ ರಾಮಾಯಣ ಮಹಾನದೀ ॥೭॥

ಶ್ಲೋಕಸಾಗರಮಾಕೀರ್ಣಂ ಸರ್ಗಕಲ್ಲೋಲಸಂಕುಲಮ್ ।
ಕಾಂಡಗ್ರಾಹಮಹಾಮೀನಂ ವಂದೇ ರಾಮಾಯಣಾರ್ಣವಮ್ ॥೮॥



|| ಸ್ವಸ್ತಿ || ಶ್ರೀ ಗುರುಗಣೇಶಾಯ ನಮಃ || ಶುಭಮಸ್ತು ||
|| ನಿರ್ವಿಘ್ನಮಸ್ತು || ಶ್ರೀ ಗೋಪಾಲಕೃಷ್ಣಾಯ ನಮಃ ||
|| ಶ್ರೀ ರಾಮಚಂದ್ರಾಯ ನಮಃ ||

# ಅಧ್ಯಾತ್ಮ ರಾಮಾಯಣ



## ಕಿಷ್ಕಿಂಧಾ ಕಾಂಡ

## ಮೂವತ್ತನೆಯ ಸಂಧಿ

### ರಾಮ ಸುಗ್ರೀವರ ಸಖ್ಯ

ಸೂಚನೆ || ವಾಯುಸುತ ಸುಗ್ರೀವರನು ರಘು
ರಾಯ ಕಂಡಾ ಋಷ್ಯಮೂಕದಿ
ಮಾಯೆಯಿಲ್ಲದೆ ಮಾಡಿದರು ಸಖಿತನವ ತಮ್ಮೊಳಗೆ ||

ಪದ || ನಿತ್ಯ ನಿರ್ಗುಣ ವಸ್ತುವೆನಿಸುವ
ಸತ್ಯ ಸಂವಿನ್ಮೂರ್ತಿಯೆನಿಸಾ
ಪ್ರತ್ಯಗಾತ್ಮ ಪರಾತ್ಮನೆಂಬೀ ಯೆನಿಸಿ ತೋರುವನು ||
ವರ್ತಿಸುವ ತಾನಾಗಿ ತೋರದೆ
ಮತ್ತೆ ಚೈತನ್ಯಾತ್ಮನೆನಿಸುವ
ನಿತ್ಯಸುಖ ಪರಿಪೂರ್ಣನೆನಿಸಿದ ರಾಮ ಸಲಹೆಮ್ಮ ||೧||

ಶ್ರೀ ಮಹೇಶ್ವರ ವಿಶ್ವವಲ್ಲಭ
ನಾಮ ರೂಪ ವಿದೂರನಾಶ್ರಿತ
ಕಾಮಧೇನು ನಿರೀಹನದ್ವಯ ಶಾಂತ ಸುಸ್ವಾಂತ ||
ವ್ಯೋಮಕೇಶ ಗಿರೀಂದ್ರ ತನುಜಾ
ಪ್ರೇಮನಾದೀಶ್ವರನು ತಾನೇ
ರಾಮನುರು ಕಿಷ್ಕಿಂದಿಕಾಂಡವನೆಂದ ಗಿರಿಸುತೆಗೆ || ೧ ||

ಗಿರಿಜೆ ಕೇಳಾ ರಾಮ ಲಕ್ಷ್ಮಣ
ರಿರದೆ ಮೋಕ್ಷವನಿತ್ತು ಶಬರಿಗೆ
ತೆರಳಿದರು ಮೆಲ್ಲನೆ ಬಳಿಕ ಪಂಪಾಸರಸ್ತಟಕೆ ||
ಬರುತೆ ಕಂಡರು ಮುಂದೆ ಮೊಪ್ಪುವ
ಸರಸಿಯನು ಸಂಪೂರ್ಣ ಜಲದಿಂ
ದಿರಲು ವಿಸ್ಮಯವಟ್ಟರಾ ಶ್ರೇಷ್ಠದ ಸರೋವರಕೆ || ೨ ||

ಕ್ರೋಶ ವಿಸ್ತೀರ್ಣಗಲಗಾಧ ಮ
ಹಾ ಸಮುದ್ರದ ಮೋಲು ಸುಮನೋ
ಭಾಸ ಪಂಕಜ ಕುಮುದ ಕಲ್ಹಾರೋತ್ಪಲಗಳಿಂದ ||
ದೇಶ ಪರಿಮಳಿಸುತಿರೆ ಯದರೊಳು
ಹಂಸ ಕಾರಂಡಾದಿ ಪಕ್ಷಿ ನಿ
ವಾಸವಾಗಿರೆ ಚಕ್ರವಾಕ ಸಮೂಹದಿಂ ತುಂಬಿ || ೪ ||

ಮುಟ್ಟಿ ತಜ್ಜಲಪಾನದಿಂದಾ
ಶಿಷ್ಟವಾದಾ ಶ್ರಮವ ನೀಗಿ ವಿ
ಶಿಷ್ಟ ಸರಸೀತೀರ ವನದಲಿ ಶೈತ್ಯವಾಗಿರ್ದ ||
ಬಟ್ಟೆಯಲಿ ಬರುತಿರ್ದರಂದೊಡ
ಲಿಟ್ಟು ಚಲುವಿಂ ರಾಮ ಲಕ್ಷ್ಮಣ
ರಿಷ್ಟರಾಗಿಯೆ ಋಷ್ಯಮೂಕದ ಗಿರಿಯ ಪಾರ್ಶ್ವದಲಿ || ೫ ||

ಶರಧನುರ್ಧರಕರರು ವಲ್ಕಲ
ಮೆರೆವರಾಂಬರಧಾರಿಗಳು ಸು
ಸ್ಥಿರದದಾಂತರು ಶಾಂತರತಿಕೋಮಳರು ಶ್ಯಾಮಳರು ||
ಸರಸಿರುಹದಳ ನೇತ್ರರುತ್ತಮ
ಚರಿತರುಜ್ವಲಗಾತ್ರದಂತ
ಸ್ಫುರಿತ ಕೌಮುದಿ ಹಾಸಕೇಶಜಟಾ ಮಕುಟಧರರು || ೬ ||

ಬರುತ ನಾನಾವೃಕ್ಷ ಷಂಡದ
ಗಿರಿಯನೀಕ್ಷಿಸುತತಿ ಪರಾಕ್ರಮ
ವರಮನೋಹರರಿವರ ಕಂಡನು ಪರ್ವತಾಗ್ರದಲಿ ||
ತರಣಿಸುತ ಸುಗ್ರೀವ ನಾಲ್ವರು
ವರಪ್ರಧಾನ ಕಪೀಂದ್ರರಿಂ ಸಹಿ
ತಿರದೆಯಲ್ಲಿಂ ಮೇಲೆ ತುದಿಗೈದಿದನು ಮಹಿಲದಲಿ || ೭ ||

ಭೀತಿಯಲಿ ಸುಗ್ರೀವನೆಂದನು
ವಾತಸುತನೊಡನಾರು ನೋಡೈ
ಭೂತಳದಿ ಬಹವೀರರನು ನೀ ಹೋಗಿ ವಟುವಾಗಿ ||
ಜಾತಿ ವಿಸ್ತೃತ್ವದಲರಿದು ಬಾ
ರಾತಗಳ ಮೇಣೆನ್ನನಿವರು ವಿ
ಘಾತಿಸಲು ಕಳುಹೆನಲೆ ಬಾಲಿಯದಾರರಿವರೆಂದ || ೮ ||

ಅವರ ಹೃದಯವ ಹೋಗಿ ಪರಿಕಿಸು
ಜವದಲತಿ ನಿಷ್ಠುರಿಗಳಾದಡೆ
ನವಗೆ ಸತ್ವವ ಮಾಡುಕರದಿಂದಿತ್ತಲಾಡುವೆನು ||
ಕವಲುವೋಗದೆ ಸುಜನರಾದಡೆ
ತವಕಿಸದೆ ನಗೆಯಿಂದ ನೋಡೆನೆ
ಪವನ ಸುತನಾಗಲಿಯೆನುತ ವಟು ರೂಪ ತಾಳಿದನು || ೯ ||

ಕನಕರುಚಿರದಕಾಯಕಾಂತಿಯು
ಹೊನಲ ಪತ್ತೆಕ್ಕಿಪೀನದುಡುಗೆಯು
ಕನಕ ಕುಂಡಲವಲೆಯ ವಿಲಸದ್ಬ್ರಹ್ಮ ಸೂತ್ರಗಳ ||
ಘನದ ಚಂಡಿಕೆ ಮೇಖಲಾಂಬರ
ವಿನುತನಿಷ್ಠಾ ಚಾರು ಲಕ್ಷಣ
ದನುಪಮದ ವಟು ಸುಳಿದನಾ ಶ್ರೀ ರಾಮನಿದಿರಿನಲಿ || ೧೦ ||

ಬಂದು ವಿನಯದಲೆರಗಿ ರಾಮನ
ಗೆಂದನಾತ್ಮೆ ನೀವು ಮಾನವ
ರಂದವಾಗಿಹ ವೀರ ಕಾರ್ಯೋದಾರ ವಿಕ್ರಮರು ||
ಇಂದು ದೆಸೆಯನು ಬೆಳಗುವಿರಿ ರವಿ
ಯಂದದಲಿ ತನುಕಾಂತಿ ಭಾಸೀ
ಛಂದದಲಿ ಮೂಲೋಕ ಕರ್ತುಗಳೆನ್ನ ಮತಕೆಂದ || ೧೧ ||

ಕಾರಣರು ನೀವಾದಿ ಪುರುಷರು
ಸೂರಿಸಮ್ಮತ ಸರ್ವಗತರು ವಿ
ಚಾರಿಸಲು ಮಾಯಾಮನುಜರೆಂಬಂತೆ ಕಾಣುತಿಹೆ ||
ಭೂರಮಣರಂ ತಿಳಿಹಲವನೀ
ಭಾರವನು ತದ್ರಕ್ಷಣಾರ್ಥವ
ತಾರವಾದಂದದಲಿ ತೋರ್ಪುದು ತನ್ನ ಮತಕೆಂದ || ೧೨ ||

ಲೋಕ ಸೃಷ್ಟಿ ಸ್ಥಿತಿಲಯಂಗಳ
ಜೋಕೆಯಿಂ ಮಾಡುವ ಸಮರ್ಥರ
ದಾಕೆವಾಳ ಸ್ವತಂತ್ರ ಸರ್ವ ಪ್ರೇಂಕೋತ್ತಮರು ||
ನಾಕವಂದ್ಯರು ನರನರಾಯಣ
ಲಾಕೃತಿಯಲಿಹರೆನಗೆ ತೋರ್ಪುದು
ಶ್ರೀಕರಗ್ರಾಹಿಯು ಪೊಲೆಂದನು ವರ ರಘೂದ್ವಹಗೆ || ೧೩ ||

ಎನಲು ನೋಡಿನೆ ತಮ್ಮ ವಟುವಿನ
ವಿನಯಗುಣ ರೂಪವನು ಶಾಸ್ತ್ರವ
ಘನ ಜಟೆಯು ವೇದವನು ಸಾಂಗವನೆಲ್ಲ ಕೇಳಿದವ ||
ಜನಿಸದಪಶಬ್ದದಲಿ ಮಾತಿನ
ಗನುಪನುನೆ ನೀನಾರು ಹೇಳೆಂ
ದೆನುತಲಾ ವಿಜ್ಞಾನ ಮೂರುತಿ ರಾಮ ಬೆಸಗೊಂಡ || ೧೪ ||

ನಾನು ದಶರಥ ರಾಮಲಕ್ಷ್ಮಣ
ಸಾನುಜನು ತನಗೀತ ಸೀತಾ
ಜಾನಕಿಯೆ ಸತಿ ತನಗೆ ಬಂದೆವು ತಂದೆಯಾಜ್ಞೆಯಲಿ ||
ಕಾನನಕ್ಕಿಲ್ಲಿರಲು ಕದ್ದನು
ಮಾನಿನಿಯ ದಂಡಕದ ವನದಲಿ
ದಾನವನ ಬಳಿವಿಡಿದೆವರಸುತ ನೀನದಾರೆಂದ || ೧೫ ||

ವಟುನುಡಿದನೆಲೆ ರಾಮ ಕೇಳು
ತ್ಕಟನು ಸುಗ್ರೀವಾಖ್ಯ ಕಪಿಗಳ
ಕಟಕವರನು ಮಹಾವಿವೇಕಿಯವಂಗೆ ಮಂತ್ರಿಗಳು ||
ಪಟುಯುತರು ಕೂಡಿಹರು ನಾಲ್ವರು
ಮಠವು ಗಿರಿಶಿಖರವಾಗಿಪನು ಕಟಿ
ಕಟೆಯನೊಲ್ಲದೆ ಬಾಲಿಯೆಂಬ ಕಪೀಶ್ವರನ ತಮ್ಮ || ೧೬ ||

ಬಾಲಿಯೆಂಬಾ ಪಾಪ ಚೇಷ್ಟಾ
ಚಾಳಿಯಲಿ ಸುಗ್ರೀವ ಭಾರ್ಯೆಯ
ನಾಳಿ ಕೋಪದಿ ಹೊರವಡಿಸೆ ಸುಗ್ರೀವ ಭಯದಿಂದ ||
ಕಾಲಗಳಿವನು ಋಷ್ಯಮೂಕದ
ಶೈಲದಲಿ ಮಂತ್ರಿಗಳು ಸಹಿತಾ
ಮೇಳ ಸಖಿ ಸುಗ್ರೀವನಾತ್ಮಜ ತಾನಸಿಲಗೆಂದ || ೧೭ ||

ಉತ್ತಮಾಭರಣವನು ಕಳಚಿ ತ
ನ್ನುತ್ತರೀ ವಸ್ತ್ರದಲಿ ಕಟ್ಟಿ
ದತ್ತಲಳುತ್ತೈಡಿಗಳು ದಾನವನೊಯ್ಯುತಿರೆ ರಥದಿ ||
ಮತ್ತದನು ತಾ ತಂಪೊಳಗೆ ಗುಹೆ
ಯತ್ತ ಮಡಗಿಪೆ ನೋಡೆನುತ ತಂ
ದಿತ್ತನಾ ಶ್ರೀ ರಾಮಹಸ್ತದಲೊಲಿದು ಸುಗ್ರೀವ || ೨೬ ||

ಅದನು ರಾಘವ ಬಿಚ್ಚಿ ನೋಡು
ತ್ತಿದುವೆ ಸೀತೆಯದೆಂದು ಮರುಗು
ತ್ತೆದೆಯಲಿರಿಸಿ ಪ್ರಾಕೃತರ ಪರಿ ಸೀತೆ ಹಾಯೆನುತ ||
ಗದಗದಿಸಿ ಚಿಂತೆಯಲಿ ಮರುಗಲಿ
ಕಿದಿರಲಿಹ ಸೌಮಿತ್ರಿಗೆಂದನು
ಅದುಳಿ [1]ಸಿದ[1] ತನ್ನಂತ ರಾಮನ ಸಂತ ವಾಕ್ಯದಲಿ || ೨೭ ||

ರಾವಣನ ಸುಗ್ರೀವ ಸಹಿತವೆ
ನಾವು ಕೊಂದುತ್ತಮೆಯ ತಪ್ಪೆವು
ದೇವ ಮರುಗದಿರೆನಲು ರವಿಸುತನೆಂದನೀಕ್ಷಣವೆ ||
ನಾವು ಶಪಥವ ಮಾಳ್ಪೆವೆನೆ ನೆರೆ
ಪಾವಕನ ಪಟುಮಾಡಿ ಪವನಜ
ಕೋವಿದರು ಸುಗ್ರೀವ ರಾಮರು ನೀಡಿದರು ಕರವ || ೨೮ ||

ತನ್ನೊಳಾಲಂಗಿಸಿ ಕುಳಿತು ನೆರೆ
ರಮ್ಯಗಾ ಸುಗ್ರೀವನೆಂದನು
ನಮ್ಮೊಳಿಲ್ಲಲೆ ಭೇದ ನೀ ಸಖಿ ತನ್ನ ಸಂಗತಿಯು ||
ಮೊಮ್ಮ ಕೇಳಾ ಬಾಲಿ ಮಾಡಿದ
ದುರ್ಮದವ ಮಾಯಾವಿ ನಾಮದ
ಕರ್ಮಿ ದಾನವ ಮಯಸುತನು ಕಿಷ್ಕಿಂಧಿಗೈತಂದ || ೨೯ ||

---

1 ಸುತ (ಖ)

ವಾಲಿ ಸುಗ್ರೀವರ ಕಾಳಗ



ಹನುಮಂತನು ರಾಮಲಕ್ಷ್ಮಣರನ್ನು ಸುಗ್ರೀವನ ಬಳಿಗೆ ಕರೆತಂದುದು



ಬಾಲಿಯನು ಕೋಪದಲಿ ಕರೆದನು
ಕಾಳಗಕೆ ಘನ ಸಿಂಹನಾದದಿ
ಕೇಳಿ ಗರ್ಜಿಸಿ ಬಾಲಿ ತಾಮ್ರಾಕ್ಷದಲಿ ಹರಿತಂದು ||
ಖೂಳನನು ಮುಷ್ಟಿಯಲಿ ಹೊಡೆದಡೆ
ಘೋಳಿಡುತ್ತವ ದಡಿಗ ಹೊಕ್ಕನು
ತಾಳಲಾರದೆ ಮುಷ್ಟಿ ಹತಿಯನು ಗುಹೆಯ ಬಲು ಬಿಲನ || ೩೦ ||

ಅಟ್ಟಿ ತಾ ಸಹ ಬಿಲವ ಹೊಗುತಿರೆ
ಕಟ್ಟಲೆಯು ಮಾಡಿದನು ತನಗೀ
ದುಷ್ಟನನು ನಾ ಕೊಂದು ಬಹೆ ನೀನಿಲ್ಲಿ ನಿಲ್ಲೆನುತ ||
ನೆಟ್ಟನೊಳಹೊಗೆ ನಾನು ಬಾಗಿಲ
ನಿಟ್ಟಸುತ್ತಿರೆ ಮಾಸವನ್ನಗ
ಕೆಟ್ಟ ರಕುತವು ಬಿಲಮುಖದಿ ಹೊರಯಿಂಕೆ ಹರಿಯಿತ್ತು || ೩೧ ||

ಬಾಲಿ ಮಡಿದನೆನುತ್ತ ದುಃಖಿಸಿ
ಮೇಲೆ ಬಾಗಿಲಿಗಿಕ್ಕಿ ಶಿಲೆಯನು
ಹೇಳಿದೆನು ವೃತ್ತಾಂತವನು ದಾನವ ಕೃತಕವಂದವನು ||
ಕೇಳಿ ಮರುಗಿದರೆಲ್ಲ ಬಳಿಕದ
ಪಾಲಿಸಲು ರಾಜ್ಯವನು ಪಟ್ಟವ
ಮೇಳವಿಸಿದರು ಮಂತ್ರಿ ವಾನರರೆಲ್ಲರೆನಗೆಂದ || ೩೨ ||

ಕೆಲವು ಕಾಲವ ನಾನು ರಾಜ್ಯವ
ಸಲಹುತಿರಲಾ ಬಾಲಿ ಬಂದನು
ಬಿಲವ ಹೊರವಂಟೊರ್ವಿಗತಿ ಕೋಪದಲಿ ಸನ್ನೊಡನೆ ||
ಹಳಚಿ ಚರ್ಚೆಯಲಟ್ಟಿ ಮುಷ್ಟಿಯು
ಬಲದಿ ಹೊಡೆಯಲು ತಾಳಲಾರದೆ
ತೊಳಲಿ ಲೋಕವ ಬಂದೆನೀ ಋಷಿ ಮೂಕ ಪರ್ವತಕೆ || ೩೩ ||

ಋಷಿಯ ಶಾಪದಿ ಬಾಲಿಯಿಲ್ಲಿಗೆ
ಸುಳಿಯಲಾರನು ಯೆಂಬುದರಿತಾ
ನಿಶ್ಚಿತಿಯಾಗಿಹೆನಿಲ್ಲತಿ ಮೂಢಾತ್ಮನವನೆಂದ ॥
ಶಶಿಮುಖಿಯನೆಳೆದಾಳಿದನು ತಾ
ಸುಕುಮಲನ್ಮನು ಬಸಿವುತಿತ್ತಲು
ಸುಸುಳಿಕೊಂಡಿಹೆ ಸತಿಯಗಲಿಯಾಶ್ರಯವು ಸಹವಾಗಿ ॥ ೩೪ ॥

ಇಂದು ನಿನ್ನಯ ಪಾದದರುಶನ
ದಿಂದ ನಾ ಸುಖಿಯಾದೆ ಕೇಳರ
ವಿಂದಲೋಚನನಿಂತ್ರ ಶೋಕವ ನೀನು ಬಲ್ಲೆಯಲ ॥
ಕೊಂದು ಕೊಡುವೆನು ನಿನ್ನ ವೈರಿಯ
ಸಂದೆಹವೆ ನಿಜಸತಿಯನೊಯ್ದನ
ಮುಂದೆ ಚಿತ್ತೈಸೆನ್ನ ಕಾರ್ಯಕ್ಕೇನು ಹೇಳೆಂದ ॥ ೩೫ ॥

ಬಾಲಿಯತಿ ಬಲರಿಗು ಮಹಾಬಲ
ಸೋಲನವ ದಿವಿಜರಿಗು ಕಿಂಚಿತ
ಹೇಳುವೆನು ತದ್ಬಲವ ದುಂದುಭಿಯೆಂಬ ದಾನವನು ॥
ಸ್ಥೂಲಕಾಯ ಮಹಾಸುರನು ನೆರೆ
ತಾಳಿ ಮಹಿಷಾಂಗದಲಿ ಬಂದನು
ಕಾಲನೆನೆ ಕಿಷ್ಕಿಂಧಗಾಗಿಯೆ ಕಾದೆ ಬಾಲಿಯಲಿ ॥ ೩೬ ॥

ಇರುಳು ಭೀಷಣ ರೂಪದಿಂ ಬರೆ
ಕೇಳಿ ಕೇಳಿದು ಬಾಲಿ ಹೊರವಂ
ಟಿರದು ಕೋಪನು ನೆಗಹಿಕೊಂಡನು ಕೆಡಹಿ ಧರಣಿಯಲಿ ॥
ಚರಣ ಹತಿಯಲಿ ತುಳಿದು ದೇಹವ
ಶಿರವ ಮುರಿದಿಟ್ಟಿತ್ತ ದೂರಕೆ
ವನ ಮತಂಗಾಶ್ರಮ ಸಮೀಪದಿ ಬಿತ್ತು ತಲೆಯವನ ॥ ೩೭ ॥

ಸುತ್ತ ಮುನಿಯಾಶ್ರಮದಿ ಚೆಲ್ಲಿತು
ರಕ್ತವದ ಕಂಡಾ ಮುನೀಶ್ವರ
ನಿತ್ತ ಶಾಪವ ಕೆರಳಿ ಮದ್ಗಿರಿಗಿಂದು ಪೊದಲಾಗಿ ||
ಎತ್ತಲಾನೂ ಬಾಲಿ ಬಂದಡೆ
ಸತ್ತು ಹೋಗಲಿ ತಲೆಯೊಡೆದು ಯೆನೆ
ಚಿತ್ತ ಬಾರನು ಋಷ್ಯಮೂಕನಗಕ್ಕರಿತು ಬಾಲಿ || ೩೮ ||

ಆದಪರಿತು ನಾನಿಲ್ಲಿಹೆನು ನೋ
ಡದ್ಭುತದ ದುಂದುಭಿಯ ಶಿರವಿದೆ
ಪದಮಲನೆ ಪರ್ವತದ ಪರಿ ನೀ ನೊಗಚಿಪಡೆ ಯೆಂದನು ||
ವಧಿಸಲುಂಟು ಸಮರ್ಥ ಬಾಲಿಯು
ನದನು ತೋರಿಸೆ ಪರ್ವತೋಪಮ
ದದನು ಪಾದಾಂಗುಟದಲಿಟ್ಟನು ನೆಗೆತ ಸಿರಿ ರಾಮ || ೩೯ ||

ಹತ್ತು ಯೋಜನೆ ದೂರ ಪರಿಯಂ
ತತ್ತ ಬಿದ್ದದ್ಭುತವ ಕಾಣುತ
ಸತ್ಯವೆನುತವೆ ಮಂತ್ರಿಗಳು ಸಹ ಹೊಗಳೆ ಸುಗ್ರೀವ ||
ಮತ್ತೆ ನುಡಿದನು ತಾಳವೇಳಿದೆ
ಸುತ್ತ ಬೆಳೆದಿದೆ ನೊಂದು ಶರದಲಿ
ಕತ್ತರಿಸಿದಡೆ ಕೊಲುವೆ ಬಾಲಿಯ ರಾಮ ನೀನೆಂದ || ೪೦ ||

ನೆಂಬುವೆನು ತಾ ಬಳಿಕೆನಲು ತೊ
ಟ್ಟಂಬ ಧನುವಿಂ ರಾಮನೆಚ್ಚಡೆ
ಕುಂಭಿನಿಗೆ ಮಿದೆಗೆಡೆದವಂದೇ ಶರದಿ ತಾಳೇಳು ||
ಲಂಬಿಸಿತು ಗಿರಿಮೂರ್ಧಿಯಿಂ ಕೆಳ
ಗಂಬು ತೂಣೀರಕ್ಕೆ ಬಂದುದು
ನಂಬಿ ಹರುಷದಲೆಂದನಾಶ್ರುಗಳುಗಿವ ಸುಗ್ರೀವ || ೪೧ ||

ರಾಮ ನೀ ಜಗಕೊಡೆಯನದ್ವಯ
ನಾಮರಹಿತ ಪರಾತ್ಮನೆನಿಸಿಹ
ಸ್ವಾಮಿ ಸಂಶಯವಿಲ್ಲ ತನ್ನಯ ಪೂರ್ವ ಸುಕೃತಗಳು ||
ಈ ಮುಹೂರ್ತದಿ ಬಂದು ನಿಮ್ಮಡಿ
ತಾಮರಸ ಸಂಗವನು ಮಾಡಿದೆ
ನೈ ಮಹಾದೇವೆನ್ನ ಭಾಗ್ಯಕ್ಕಾರು ಸರಿಯೆಂದ || ೪೨ ||

ಯೋಗಿಗಳು ಸಹ ಸಂಸ್ಮೃತಿಯ ನೆರೆ
ನೀಗಿ ನಿನ್ನನು ಭಜಿಸುತಿಹರಾ
ವಾಗಲಾತನೆ ನನಗೆ ಸೇರಿದಡೆಲ್ಲಿ ಭವವಿನ್ನು ||
ಪೋಗರೆಯು ಧನಪುತ್ರ ರಾಜ್ಯವಿ
ಭಾಗವೆಲ್ಲವು ನಿನ್ನ ಮಾಯಾ
ಬೇಗೆಯದು ತನಗೇಕೆ ನೀನೆನಗೊಲಿದ ಬಳಿಕೆಂದ || ೪೩ ||

ಆದಿ ಪರಮಾನಂದ ವಸ್ತುವೆ
ಸಾಧಿಸಿತಲಾ ತನಗೆ ಮದ್ಭಾ
ಗ್ಯೋದಧಿಯ ಗೌರವವನಿದನೇನೆಂಬೆ ವೃತ್ತಿಕೆಯ ||
ಶೋಧಿಸುವನಿಗೆ ಧನವ ಕಂಡಂ
ತಾದುದೆನಗೆಲೆ ರಾಮ ತನಗೇ
ಚ್ಛೇದಿಸಾದಿಯವಿದ್ಯಕೃತ ಬಂಧನವನಿದನೆಂದ || ೪೪ ||

ದಾನಯಜ್ಞ ತಪೋವ್ರತಾಸು
ಸ್ನಾನ ವಿಷ್ವಾಪೂರ್ತಿ ಮುಖ್ಯದ
ಲೇನು ಪರಮಸುಧಳಿಯದೀ ಸಂಸಾರ ಬಂಧನವು ||
ಹಾನಿಯಾಗದು ನಿನ್ನ ದರುಶನ
ವೇ ನಿಧಾನಿಸೆ ಭವವನಳಿವುದು
ಭಾನುವಿದಿರಿನ ತಮದವೋಲೆಂದನು ಹರೀಶ್ವರನು || ೪೫ ||

ಒಂದರಕ್ಷಣವಾದ ಚಿತ್ತವು
ನಿಂದು ನಿನ್ನಲಿ ಚರಿಸಿದವರಿಗೆ
ಬಂದುಗದ ಮಾಯಾಸ್ತ್ರ ಬಂಧ[1]ನ[1] ನಿರ್ಮೂಲ ಸಹವಾಗಿ ॥
ವೊಂದು ಪ್ರಳಿಯದೆ ಕೆಡುವುದಾಕ್ಷಣ
ಕೆಂದಡೇನಚ್ಚರಿ ಮಹಾದೇ
ವೆಂದು ನಿನ್ನನು ಕಂಡನಂಗಿಲೆ ರಾಮ ತನಗೆಂದ ॥ ೪೬ ॥

ನಿಲಲಿ ಮನ ನಿನ್ನಲ್ಲಿ ಪೋಣ್ಸಂ
ಚಲಿಸಲಾವನ ವಾಣಿಯಲಿ ನಾಂ
ಗುಣಿಸಿಪ ನಿಜನಾಮವ ರಾಮಾ ರಾಮ ರಾಮೆನುತ ॥
ಲಲಿತ ಮಧುರಾಕ್ಷರದಿ ಗಾನವ
ಲೊಲಿದು ಪಾಡಲು ಸಕಲ ಪಾತಕ
ವಳಿದು ಹೋಹುದು ಬ್ರಹ್ಮಹತಿ ಸುರೆಗುಡಿಹು ಮೊದಲಾಗಿ ॥ ೪೭ ॥

ಬಯಸೆ ನಾನರಿ ವಿಜಯವನು ಸಲೆ
ಬಯಸೆನಂಗನೆ ಮುಖ್ಯ ಸುಖವನು
ಬಯಸೆನೇನನು ರಾಜ್ಯ ಸಂಭವ ಸಂಪದಾಧಿಕವ ॥
ಲಯವದುಳ್ಳವದಾಗಿಯನುದಿನ
ಬಯಸುವೆನು ನಿನ್ನಂಘ್ರಿಯುಗಳಾ
ಶ್ರಯದ ಭಕುತಿಯನಖಿಳ ಬಂಧವಿಮೋಚನವನೆಂದ ॥ ೪೮ ॥

ನಿನ್ನ ಮಾಯಾ ಕೃತದ ಸಂಸ್ಕಾ
ರೋನ್ನತಿಯಲೀ ಜೀವನಾದೆನು
ನಿನ್ನ ವಶದಿಂದಲೆ ರಘೂದ್ವಹ ನಾಮ ಧಿಟಕಿನ್ನು ॥
ನಿನ್ನ ಭಕ್ತಿಯನಿತ್ತು ಸಂಸಾ
ರಾರ್ಣವದ ಸಂಕಟದ ದೆಸೆಯಿಂ
ತನ್ನನೈದಿಸು ದೇವ ತತ್ವಜ್ಞಾನ ದಿಡಕೆಂದ ॥ ೪೯ ॥

---

1 ದ (ಖ)

ನಿನ್ನ ಮೂರ್ತಿಯು ನಿನ್ನ ಭಕ್ತರ
ನಿನ್ನ ನಿಜವನು ತಿಳಿದ ಗುರುಗಳ
ನಿನ್ನ ನಯನವು ನೋಡುತಿರಲನವರತ ಯೆಡಬಿಡದೆ ||
ನಿನ್ನ ನಾಮ ಸುಕರ್ಮ ಗುಣವನು
ಕರ್ಣಕೇಳಲಿ ಪದವಜಸ್ರವು
ನಿನ್ನ ಮಂದಿರ ವರಪ್ರದಕ್ಷಿಣೆ ಬರಲಿ ಭಕುತಿಯಲಿ || ೫೪ ||

ಅಂಗ ನಿಜಪಾದಾಬ್ಜ ರಜವಿ
ಶಂಗವಾದುತ್ತಮದ ತೀರ್ಥ ಜ
ಲಂಗಳಿಂ ನೆನೆಯಲಿ ಶರೇಣ್ಯ ವರೇಣ್ಯ ಕೇತುವಿನ ||
ಮಂಗಳಾಬ್ಜ ಭವಾದಿ ವಂದ್ಯ ಪ
ದಂಗಳಿಂದನುದಿನವು ನೆರೆ ಸಾ
ಷ್ಟಾಂಗದಿಂದಡಿಗಡಿಗೆ ನಮಿಸಲಿ ಬೇಕು ತಾನೆಂದ || ೫೫ ||

ಎಂದು ನೆರೆ ಸುಗ್ರೀವ ರಾಮಗೆ
ವಂದಿಸಿದನೆಂಬಲ್ಲಿಗಾಯಿತು
ಸಂಧಿ ಮೂವತ್ತಿಲ್ಲಿ ಪದ ಪಂಚಾಶ ಪಂಚಗಳು ||
ವೊಂದೆ ಮನದಿಂದೋದಿ ಕೇಳಲು
ದಂದುಗವ ಪರಿಹರಿಸುವನು ದಯ
ದಿಂದ ಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹ ನೊಲವಿನಲಿ || ೫೬ ||

ಅಂತು ಸಂಧಿ ೩೦ ಕ್ಕೆ ಪದ ೧೩೪೭ ಕ್ಕೆ

ಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ



ಮೊದಲು ಮಿತ್ರರು ಶತ್ರುವೆಂಬೀ
ಕದಕು ಮಾಯಾ ಭ್ರಾಂತಿಯಿತ್ತೀ
ಗದು ತೊಲಗಿತೀ ನಿನ್ನ ಸಿರಿಚರಣದ್ವಯವ ಕಂಡು ||
ಇದಿರಲೆಲ್ಲಾ ಬ್ರಹ್ಮವಾಗಿದೆ
ಇದರೊಳಾರ್ಕೆ ಶತ್ರು ಮಿತ್ರರು
ಸದಮಲನೆ ರಘುನಾಥ ಸರ್ವಂ ವಿಷ್ಣುಮಯವೆಂದ || ೫೦ ||

ನಿನ್ನ ಮಾಯಾ ಬಂಧೆ [1]ತನ್ನಿ[1]
ದ್ದನ್ನವರ ತದ್ಗುಣ ವಿಶೇಷದ
ಭಿನ್ನವಹ ನಾನಾತ್ವವಾಗಿಹೆ ತೋರುತತಿ ಭಯದ ||
ಗನ್ನಗತಕಕೆ ಸಿಕ್ಕಿ ಜೀವನು
ಬನ್ನಬಡುವನು ಬಯಸಿ ಮಾಯಾ
ವರ್ಣವನೆ ಕತ್ತಲೆಯನಂಧರು ಕಾಂಬ ತೆರನಂತೆ || ೫೧ ||

ಮಾಯಗಿಮವೇ ಮೂಲವೆಲೆ ರಘು
ರಾಯ ಪುತ್ರ[2]ನು[2] ಮಿತ್ರ ಬಾಂಧವ
ಜಾಯೆ ಪಶುಧನದಾನ್ಯ ಮೊದಲಾಗಿರ್ದ ಬಂಧವಿದು ||
ನೋಯಲಾರೆನು ತನಗೆ ಬಿಡಿಸೀ
ಮಾಯಿಕದ ಬಂಧನವ ನಿನ್ನ
ಚ್ಛಾಯೆಯೆನಿಸುವ ಮಾಯೆ ತೊತ್ತಿಲಿ ರಾಮನಿನಗೆಂದ || ೫೨ ||

ನಿನ್ನ ಪಾದಾರ್ಚಿತದಿ ಚಿತ್ತವ
ದನ್ನುದಿನವಿರಲೆನಗೆ ನಾಲಗೆ
ನಿನ್ನ ನಾಮಾವಳಿಯ ಪಾಡಲಿ ಗಾಯಕೋಕ್ತಿಯಲಿ ||
ತನ್ನ ಕರಯುಗ ನಿನ್ನ ಭಕ್ತರ
ಮನ್ನಿಸುತ ಸೇವೆಯನು ಮಾಡಲಿ
ಭಿನ್ನವಾದ ಮದಂಗವಿರಲಿ ತದಂಗ ಸಂಗದಲಿ || ೫೩ ||

1 ತಾನೀ (ಖ) 2 ರು (ಖ)

|| ಶ್ರೀ ರಾಮಚಂದ್ರಾಯ ನಮಃ ||



# ಮೂವತ್ತೊಂದನೆಯ ಸಂಧಿ

## ವಾಲಿವಧೆ, ಸುಗ್ರೀವನಿಗೆ ರಕ್ಷೆ

ಸೂಚನೆ || ಆ ಮಹಾಬಲವಂತ ವಾಲಿಯ
ರಾಮನೊಂದಂಬಿನಲಿ ಗೆಲಿದು
ಕ್ಷೇಮಪದವಿಯನಿತ್ತನತಿ ಕರುಣದಲಿ ಕಪಿವರಗೆ ||

ಪದ || ರಾಮರಾಮೆಂದೆಂಬ ಮನುಜಗೆ
ಕಾಮಿತಾರ್ಥವ ಕೊಡುವನಲ್ಲದೆ
ರಾಮನನುಭವಶರಧಿ ಗೋಷ್ಪದ ರಾಮನಾಮವಿದು ||
ರಾಮನೇ ಗತಿಯೆಂಬ ನರರಿಗೆ
ಪ್ರೇಮದಿಂ ಶಿವ ತಾನು ತಾರಕ
ನಾಮವನು ಜಪಿಸುವನು ಕಡೆಯಲಿ ರಾಮ ಸಲಹುವನು ||೧||

ಕಾಂತೆ ಕೇಳೀ ಪರಿಯ ರಾಮನ
ಸಂತರಂಗದಲರಿದು ಭಾವಿಸಿ
ಚಿಂತಿಸಲು ಸುಗ್ರೀವಗಂತರ್ಗತದ ಕಲ್ಮಷದ ||
ಭ್ರಾಂತಿ ಹರಿಯಿತ್ತಾಗಲಾ ಶ್ರೀ
ಕಾಂತನಾ ಸುಗ್ರೀವನೊಡನೆ ವ
ಸಂತ ಮುಗುಳ್ನಸುನಗೆಯಲೆಂದನು ನೋಡಿ ಕರುಣದಲಿ ||೨||

ಆತನನು ಮಾಯೆಯಲಿ ಮೋಹಿಸು
ವಾ ಶರದಲೆಂದನು ಸಖಿಯೆ ಧಿಟ
ನೀ ತಿಳಿಯೆ ಸತ್ಯವನೆ ಹೇಳಿದೆಯಾದಡಿನ್ನೊಂದು ||
ಭೂತಳವ ಜನವೆಂಬುದೀ ರಘು
ನಾಥನಾ ಕಪಿವರನ ಸಖ್ಯದ
ಲೀತಗಗ್ನಿಯು ಸಾಕ್ಷಿಯಿಂ ಮಾತಾಡಿದನು ಯೆಂದು || ೩ ||

ಲೋಕದೊಳಗಪವಾದವೆನಗಾ
ಯ್ತೇಕೆ ಸಂಶಯವಾದಡಾಗಲಿ
ಸಾಕೆ ಕೆರೆ ಕಾಳಗಕೆ ಬಾಲಿಯನೆಂದು ರಾಘವನು ||
ತಾ ಕಳುಹೆ ಸುಗ್ರೀವನೆದ್ದೇ
ಕೈಕ ವೀರನು ಗರ್ಜಿಸುತ ಕೋ
ಪಾಕುಲಿತನಾಗಿದ್ದು ಕರೆದನು ಬಾಲಿಯನು ರಣಕೆ || ೪ ||

ಕೇಳಿ ತಮ್ಮನ ಮರುಷ ವಾಕ್ಯವ
ನಾಲಿಗಳು ಕಿಡಿಗೆದರಿ ಕೋಪ ಕ
ರಾಳ ಲೋಚನನೆದ್ದನಾಗಳೆ ಮನೆಯ ಹೊರವಂಟು ||
ಬಾಲಿ ಬೇಗದಿ ಬಂದು ಮುಷ್ಟಿಯ
ಮೇಳವಿಸಿ ಸುಗ್ರೀವನೆದೆಯ ಥ
ಥಾಳಿಸುತ್ತೆರಗಿದನು ಘನತರ ಸಿಂಹನಾದದಲಿ || ೫ ||

ಇಲ್ಲ ಹುಸಿ ಹೋಗೆನುತ ಬಾಯಲಿ
ಭುಲ್ಲವಿಸಿ ಸುಗ್ರೀವ ಹೊಡೆದಡೆ
ತಳ್ಳಳಿಸುವನೆ ಬಾಲಿ ಮತ್ತೆರಗಿದನಸುಜನುರವ ||
ಘಲ್ಲಿಸುತ್ತಿಂತೊಬ್ಬರೊಬ್ಬರು
ಮಲ್ಲವೀರರು ಹೆಣಗುತಿರೆ ಸಿರಿ
ವಲ್ಲಭನು ಬೆರಗಾವ ರೂಪೇಕಡೊಂದೆಯಾಗಿರಲು || ೬ ||

ಇಬ್ಬರೊಂದೇ ರೂಪವಾಗಿರೆ
ಸರ್ಬಗತ ಶಂಕಿಸುತ ಶರವನು
ತೆಬ್ಬಿನಿಂ ಬಿಡದಿರ್ದನೆಚ್ಚಡೆ ಸಖಿಯಳಿವನೆಂದು ||
ತೆಬ್ಬರಿದ್ದಾ ಬಾಲಿ ಹೊಡೆದಡೆ
ಯುಬ್ಬಸದಿ ರಕುತವನು ಕಾರುತ
ತಬ್ಬಲಾರದೆಯೋಡಿದನು ಸುಗ್ರೀವ ನಿಜಗಿರಿಗೆ || ೭ ||

ಹೋಗಲತ್ತಲು ಬಾಲಿಯಿತ್ತಲು
ರಾಘವಗೆ ಸುಗ್ರೀವನೆಂದನು
ಲೋಗರೆಂಬರು ರಾಮು ಸತ್ಯವ ನುಡಿನನೆಂಡೆನುತ ||
ತೂಗಿ ಬಿಟ್ಟಗ್ರಜನ ಹಸ್ತದಿ
ನೀಗಲೇಕೆನ್ನಸುವನರಿಯು
ಲ್ಲೀಗ ಖಂಡಿಸು ನೀನು ಖಡ್ಗದಲೆಂದು ಬಿಸುಸುಯ್ದು || ೮ ||

ಶರಣವತ್ಸಲನೆಂದು ನಂಬೀ
ಪರಿಯ ತನಗೆನೆ ಕೇಳಿ ನಗುನದಿ
ಸುರಿವ ಜಲದಿಂ ರಾಮನಪ್ಪಿದನಂಜಬೇಡೆನುತ ||
ಪರಿಕಿಸದೆ ನಿಮ್ಮೊಳಗೆ ರೂಪಾಂ
ತರದ ಭೇದವದೇಕರೂಪಿನ
ಏರಲು ನಿನಗಳಿಗಹುದೆನುತ್ತೆಸದೀರ್ದೆ ನಾನೆಂದ || ೯ ||

ಈಗ ಚಿನ್ಹವ ಮಾಡಿ ಕಳುಹುವೆ
ತಾಗದಂತೆನ್ನಂಬು ನಿನ್ನನು
ಹೋಗಿ ಕರೆ ಮೂದಲಿಸಿ ಶತ್ರುವ ಕದನಕಿನ್ನೊಮ್ಮೆ ||
ಲಾಗಿನಿಂ ಕೆಡಹುವೆನು ನಿನ್ನರಿ
ಯಾಗಿ ಬಂದಗ್ರಜನ ನೋಡೆನು
ತಾಗ ಶಪಥವನಿತ್ತು ಸಂತೈಸಿದನು ರಘುನಾಥ || ೧೦ ||

ಕರೆದು ಲಕ್ಷ್ಮಣಗೆಂದ ನೀ ತಂ
ಗರಳ ಮಾಲೆಯನಿಕ್ಕಿ ಕೊರಳಿಗೆ
ತೆರಳಿಸಾಹವಕೆನಲು ಬೇಗದಿ ಪುಷ್ಪಮಾಲೆಯನು ||
ಹಿರಿಯನಾಜ್ಞೆಯ ಕಟ್ಟಿ ನಡೆನಡೆ
ಭರದಲೆನೆ ಸುಗ್ರೀವ ಮಗುಳ
ಬ್ಬರಿಸಿ ಕರೆದನು ಬಾಲಿಯೊಡನದ್ಭುತ ನಿನಾದದಲಿ || ೧೧ ||

ಕೇಳಿ ವಿಸ್ಮಯದಿಂದ ಬಾಲಿ ಚ
ಢಾಳಿಸುವ ಕೋಪದಲಿ ಪರಿಕರ
ಜಾಳವನು ಬಂಧಿಸುತ ಹೊರವಡುತಿರಲದನು ಕಂಡು ||
ಕಾಲ ಹಿಡಿದಳು ತಾರೆ ಹೋಗದಿ
ರಾಳುದನೆ ತಡೆ ಶಂಕೆಯುಂಟೇ
ವೇಳೆ ಮುರಿದೋಡಿದವನೆಂತೈತಂದನೀಕ್ಷಣ[1]ಕೆ[1] || ೧೨ ||

ಆವನವಗೆ ಸಹಾಯವೋ ಸು
ಗ್ರೀವನುಂತೇ ಬಾರನೆನೆ ರಾ
ಜೀವ ಮುಖಿ ಹೋಗಂಜದಿರು ತಾನೀಕ್ಷಣವೆ ಕೊಂದು ||
ಭಾವೆ ಬಹೆನವಗಾರ ಬಲ ಬಿಡು
ಕಾವರುಂಟೇ ತಾ ಮುನಿದಡವ
ನಾವನೇ ಬರಲಳಿದನೆಂದರಿ ಯರಿಯೆ ಮದ್ಬಲವ || ೧೩ ||

ವೈರಿ ಕರೆಯಲು ಮನೆಯಲಿಹರೇ
ಶೂರ ವಿಕ್ರಮರಂಜಿ ನಡುಗುತ
ಹೋರಿ ಯುದ್ಧದಿ ಕೊಂದು ಬಹೆನೆನೆ ನುಡಿದಳಾ ತಾರೆ ||
ಧೀರ ಕೇಳಾನೆಂದ ವಚನವ
ನಾರಯಿದ ಹೋಗೆಂದನೆನಗೆ ಕು
ಮಾರನಂಗದ ಬೇಟೆಗೈದಿರೆ ಕೇಳು ವಾರ್ತೆಯನು || ೧೪ ||

---

1 ದಿ (ಖ)

ದೊರೆಯಯೋಧ್ಯಾಧೀಶ ದಶರಥ
ವರತನಯ ಗಡ ರಾಮ ಲಕ್ಷ್ಮಣ
ಹಿರಿಯನಂಗನೆ ಸೀತೆ ರಾಮಂಗವರು ದಂಡಕದಿ ॥
ಚರಿಸಿದರು ಗಡ ತಂದೆಯಾಜ್ಞೆಯ
ಲಿರಲು ಸೀತೆಯ ಕದ್ದು ರಾವಣ
ದುರುಳನೊಯ್ದಡವಂದಿರರಸುತ ಬಂದರಿತ್ತಗಡ ॥ ೧೫ ॥

ಬರುತವಂದಿರು ಋಷ್ಯಮೂಕದ
ಗಿರಿಯೊಳಗೆ ಸುಗ್ರೀವನನು ಕಂ
ಡಿರದೆ ಸಖ್ಯವ ಮಾಡಿದರು ಗಡ ಚಾಗ್ನಿ ಸಾಕ್ಷಿಯಲಿ ॥
ವರ ಪ್ರತಿಜ್ಞೆಯ ರಾಮ ಲಕ್ಷ್ಮಣ
ವೆರಸಿ ಬಾಲಿಯ ಕೊಂದಡೀ ನಿ
ನ್ನರಸಿಯೊಯ್ದನ ಕೊಲುವೆನೆಂದವನು ಕಂಡು ಸುಗ್ರೀವ ॥ ೧೬ ॥

ಎಂದವರು ನಿಶ್ಚೈಸಿಕೊಂಡೇ
ಬಂದಿಹರು ಗಡ ಕೊಲಲು ನಿನ್ನನು
ಸಂದೆಹವೆ ಕೇಳೆನ್ನ ವಚನವನಲ್ಲದಡೆ ಧಿಟಕೆ ॥
ನೊಂದು ಹೋದವನೀಗಳೆಂತೈ
ಬಂದಪನು ಮರಳಿದನರಿದು ಕರ
ಸಿಂದೆ ಸುಗ್ರೀವನನು ವೈರವ ಮಾಡಬೇಡಿನ್ನು ॥ ೧೭ ॥

ಕಟ್ಟವಗೆ ಬೇಗವನು ರಾಜ್ಯದ
ಪಟ್ಟವನು ರಾಘವನ ಮರೆವೊಗು
ನೆಟ್ಟನಂಗದ ಸಹಿತ ಕುಲವಿದು ಪಾಲಿಸೆಂದೆನುತ ॥
ತೊಟ್ಟುಕೊಂಡಂಘ್ರಿಯನೆರಗಿ ಜಲ
ವೃಷ್ಟಿ ಪೂರ್ಣಾನನೆ ಮರುಗಿ ಮೊರೆ
ಯಿಟ್ಟಡೆಂದನು ಬಾಲಿ ಸತಿಯನು ತೆಗೆದು ತಕ್ಕಿಸು ॥ ೧೮ ॥

ಅಂಜಿಕೆಯಿದಬಲೆಯರ ಸಹಜವಿ
ದಂಜಿಕೆಯೆ ತನಗಿಲ್ಲ ಕೇಳಲೆ
ಕಂಜಲೋಚನೆ ರಾಮಲಕ್ಷ್ಮಣ ಸಹಿತ ಬಂದಿರಲು ||
ಅಂಜಿ ತಾನಿರ್ಪಲೇಕೆನಗೆ ಸಮ
ರಂಜಸದಿಸುಸ್ನೇಹವಹುದು ನಿ
ರಂಜನಾತ್ಮನಲೇಕೆ ಸಂಶಯವೆಂದನಾ ಪ್ಲವಗ || ೧೯ ||

ರಾಮ ನಾರಾಯಣನೆ ಕಾಣಾ
ಭೂಮಿ ಭಾರವನಿಳುಹಲಮರ
ಸ್ತೋಮ ಬುಧರಕ್ಷಾರ್ಥನಿಂದವತರಿಸಿದನು ಬಂದು ||
ಸ್ವಾಮಿಯೆಂಬುದ ನಾನು ಕೇಳಿಹೆ
ನಾಮರಹಿತಾನಂತನದ್ವಯ
ನಾ ಮಹಾತ್ಮನ ಭೀತಿ ತನಗೆತ್ತಣದು ಹೇಳೆಂದ || ೨೦ ||

ಆತುಮ ಶ್ರೀರಾಮಗೆನ್ನವ
ರೀತನನ್ಯರೆನಿಪ್ಪುದುಂಟೇ
ಜ್ಞಾತ ಹಗೆ ಕೆಳೆ ಮಧ್ಯರೆಂಬೀ ಬಗೆ ಮೊದಲೆಯಿಲ್ಲ ||
ಪ್ರೀತಿಯಿಂ ಕರೆತಂದು ಮನೆಗಾ
ನೀ ತನುವನಂಘ್ರಿಯಲಿ ಕೆಡಹುವೆ
ನೋತು ಸಲಹನೆ ಭಕ್ತಿಗಮ್ಯನು ಭೃತ್ಯವಾತ್ಸಲನು || ೨೧ ||

ಭಾವೆ ರಾಘವನಿಲ್ಲದೇ ಸು
ಗ್ರೀವನೇ ಬಂದಿರಲು ಕೊಲುವೆನು
ಜೀವವನೆ ನಿಮಿಷದಲದಲ್ಲದೆ ಯವ್ವ ರಾಜ್ಯವನು ||
ನಾವು ಕೊಡುವುದು ಮತವೆ ಭಯದಲಿ
ಹೇವದಿಂ ಕದನಕ್ಕೆ ಕರೆವನ
ದಾವನೀತಿಯದಖಿಳ ವಿಶ್ರುತ ಶೂರನಾದೆನಗೆ || ೨೨||

ಬಾಲಿ ಭಯದಲಿ ಪರರಿದಿರಿನಲಿ
ನಾಲಗೆಯ ತೆರೆವವನೆ ಭಾಮಿನಿ
ಬೀಳುಗೊಡು ಶೋಕವನು ಮನೆಯಲ್ಲಿರು ಸುಖದಿ ನೀನು ||
ಕಾಲಗತಿಯಿದನಾರು ಬಲ್ಲರು
ಸೋಲೆನೆಂದಂಗನೆಯ ತಿಳುಹಲು
ಬಾಲೆ ಶೋಕಿಸಿದಳು ಬಳಿಕ ಸುರಿವಶ್ರುಜಲದಿಂದ || ೨೩ ||

ನಡೆದು ಹೋದನು ಬಾಲಿ ತಮ್ಮನ
ಕಡುಗಿ ಕೊಲುವೆನೆನುತ್ತ ಬರಲ
ಪ್ಪಿಡಮಹಾವಿಕ್ರಮದಲಂದಿದಿರಾಗಿ ಸುಗ್ರೀವ ||
ಕಡುಗಲಿಯು ಮುಷ್ಟಿಯಲಿ ಲಂಘಿಸಿ
ಹೊಡೆದ ಹಾರಿ ಪತಂಗನಂದದಿ
ಯೊಡನೆ ಕೊರಳಲ್ಲಿಕ್ಕಿದಾ ಹೂಮಾಲೆಯೊಲವುತಿರೆ || ೨೪ ||

ತೆಕ್ಕುವನೆ ಕಲಿ ಬಾಲಿ ತಮ್ಮನ
ನಿಕ್ಕಿದನು ಮೂದಲಿಸಿ ಮುಷ್ಟಿಯು
ಲಕ್ಕುಟೆನುತಾ ಬಾಲಿಯನು ಮಗುಳೆರಗೆ ಸುಗ್ರೀವ ||
ಲೆಕ್ಕಲೆಕ್ಕಕೆ ತಪ್ಪದಂದದಿ
ಹೊಕ್ಕುಹೋರುತ್ತಿರೆ ಮರನ ಮರೆ
ಯಿಕ್ಕೆ ರಾಘವ ನೋಡುತಿದ್ದನು ಸಮರ ಸಮಯವನು || ೨೫ ||

ಕಾಣದಂದದಿ ವೃಕ್ಷ ಮೂಲದಿ
ಬಾಣವನು ತೂಣೀರದಿಂ ತೆಗೆ
ದಾಣೆಯಾಗಿಟ್ಟೈಂದ್ರಚಾಪಕೆ ತೊಡಿಸಿಯತಿ ಭರದಿ ||
ಗೇಣು ಪರಿಯಿಂತುಗಿದು ಲಕ್ಷವ
ಮಾಣದೀಕ್ಷಿಸಿ ಕಪಿಯ ವಕ್ಷವ
ಸಾಣೆಯಲಗಿನ ನಿಶಿತ ಶರವನು ಬಿಟ್ಟನಾ ರಾಮ || ೨೬ ||

ಘೋರ ಘೋರನೆ ಬಂದು ತಾಗಿತು
ವೀರಬಾಲಿಯ ವಕ್ಷವನು ಶರ
ಹಾರಿಬಿದ್ದನು ಧರೆಯಲಾಯ್ತದ್ಭುತ ಮಹಾಶಬ್ದ ||
ಮಾರಿಯರಿವ ಮುಹೂರ್ತ ಮೂರ್ಛೆಯು
ಹೋರೆಯಲ್ಲಿರೆ ಮತ್ತೆ ಚೇತನೆ
ಸೇರಲಿದಿರಲಿ ಕಂಡನಾ ಶ್ರೀ ರಾಮನನು ಬಾಲಿ || ೨೭ ||

ಆಗ ಕಂಡನು ಬಾಲಿ ಮುಂದಿಹ
ಯೋಗಿ ಹೃದಯಾಂತರ್ಗತನ ನಿಗ
ಮಾಗಮಾದಿ ವಿದೂರನಹ ರಾಜೀವಲೋಚನನ ||
ನಾಗಶಯನನನಾದಿ ಪುರುಷನ
ಭೋಗಿ ಭೂಷಣ ಸಖನನಾ ಶ್ರೀ
ರಾಘವಾಂಹಯ ರೂಪನಾದಾ ಸಚ್ಚಿದಾತ್ಮಕನ || ೨೮ ||

ವೊಪ್ಪುತಿಹ ಚೀರಾಜಿನದ ಕಂ
ದರ್ಪ ಶತಲಾವಣ್ಯ ಶೋಭೆಯ
ಸುಪ್ರಸನ್ನಾಂಬುರುಹ ವದನದ ಚಾರು ಭುಜಯುಗದ ||
ಕ್ಷಿಪ್ರದಿಂದಿದಿರಾಗಿ ಬಿಲ್ಲಿನ
ಕೊಪ್ಪ ಚರಣವಲೂರಿ ಬಾಣವ
ನಪ್ರಮೇಯನು ಹಿಡಿದು ನಿಂದಿರೆ ಕಂಡನಾ ಬಾಲಿ || ೨೯ ||

ವರಜಟಾ ಮಕುಟದ ಮನೋಹರ
ದರಳುಗಂಗಳ ದಂತ ಪಂಙ್ತಿಯ
ಕೊರಳ ಮೂರೇಖೆಗಳ, ವಕ್ಷಸ್ಥಳದಿ ರಂಜಿಸುವ ||
ತರುಣ ತುಳಸಿಯ ಮಾಲೆಗಳ ಮೋ
ಲುರದ ವಲ್ಲೂದರದ ನಾಭಿಯ
ಸರಸಿರುಹ ಭಾಸೆಯ ಮನೋಹರ ರೂಪವನು ಕಂಡ || ೩೦ ||

ನೀಲ ದೂರ್ವಾದಳಾಭ ಗಾತ್ರದ
ಫಾಳಪಾಳಿಯ ಕಿರುಬೆವರ ಬೆರ
ಕೋಳಿವಳದಿಪ್ಪಂದೊವ ಶ್ರೀ ಪಾದ ಪಂಕಜದ ‖
ಮೇಳವದ ಸುಗ್ರೀವ ಲಕ್ಷ್ಮಣ
ರೋಲಗಿಸಿರೆಡಬಲವಲೊಡನಿರೆ
ಬಾಲಸೂರ್ಯ ಸಹಸ್ರದೀಪ್ತಿಯೊಲೆಸೆದನಾ ರಾಮ ‖ ೩೧ ‖

ನೋಡಿ ಮೆಲ್ಲನೆ ಬಾಲಿ ರಾಮನ
ಕೂಡೆ ನುಡಿದನು ಗರುವಿಸುತ ನಾ
ಮಾಡಿಮುಪಸತಿಯೇನು ಬರಿದೇ ಕೊಂದೆ ತನ್ನುವನು ‖
ರೂಷಿಪತಿಗಳ ಧರ್ಮಪಥವನು
ದ್ದೂಷಿಸಿದೆ ನೀ ಮರನ ಮರೆಯಲಿ
ಹೇಡಿಯಂದದಲೆಚ್ಚೆ ಶರದಲಿ ಶಿವಾ ಶಿವಾ ಯೆಂದ ‖ ೩೨ ‖

ಕೀರ್ತಿಯೇ ಸುಡು ಸತ್ಯ ಸಂಗರ
ವೃತ್ತಿಯೋ ಚೋ[1]ರಂ[1]ಗದಿಂ ನೆರೆ
ಕುತ್ತಿ ಕೊಲುವುದು ಮನುಜಕುಲ ಕ್ಷತ್ರಿಯ ನೃಪಾಲರಿಗೆ ‖
ಸತ್ಯ ಸಮರಂಗದಲಿ ಯುದ್ಧವ
ತೆತ್ತು ಮಾಡಲು ಸಫಲ ತಾನೇ
ಸತ್ಯಧರ್ಮನೇ ಹಿತವನೇ ಸುಗ್ರೀವ ನಿನಗೆಂದ ‖ ೩೩ ‖

ಹೆಂಡತಿಯ ರಾವಣನು ಸೆಳೆದಡೆ
ದಂಡುವರಿದೈ ತನ್ನ ಮರೆಯಲಿ
ಮುಂದೆ ಬಹುರ್ಯಾತೆಂದು ಮುತ್ತೈದೆಯನು ಬಡಿದವೊಲು ‖
ಪಂಡಿತನೆ ಸುಗ್ರೀವನೆಂದಡೆ
ಭಂಡು ಮಾಡಿದೆ ತನ್ನ ಬಲವನು
ಕಂಡುಕೇಳಿದ್ದರಿಯಲಾ ರಘುನಾಥ ನೀನೆಂದ ‖ ೩೪ ‖

1 ಕಾಂ (ಖ)

ರಾವಣನ ಕುಲಸಹಿತ ಬಂಧಿಸಿ
ದೇವಿ ಸೀತೆಯ ಲಂಕೆ ಸಹಿತೆನ
ಗಾವ ಗಣ್ಯವು ತಾರನೇ ಕ್ಷಣಮಾತ್ರದಲಿ ತಾನು ||
ಕೋವಿದನು ಧರ್ಮಿಷ್ಠ ರಾಘವ
ದೇವನೆಂಬುದ ಲೋಕ ವ್ಯಾಧರ
ಭಾವದಿಂ ವಾನರನ ಕೊಂದೇನಾಯ್ತು ಹಿತ ನಿನಗೆ || ೩೫ ||

ಭಕ್ಷಿಸಲು ವಾನರನ ಮಾಂಸವು
ತಕ್ಕವಲ್ಲೆಲೆ ನಿನಗೆ ಧರ್ಮವ
ನಕ್ಕೆಯೆಂದೀ ಪರಿಯ ಹಲವನು ಬಾಲಿ ನುಡಿವುತಿರೆ ||
ಧಿಕ್ಕರಿಸುವಗೆ ರಾಮನೆಂದನು
ರಕ್ಷಿಸಲು ಲೌಕಿಕದಿ ಧರ್ಮವ
ತಕ್ಕ ಶರಚಾಪವ ಪಿಡಿದು ಚರಿಸುವೆನು ತಾನೆಂದ || ೩೬ ||

ಘಾತಿಸುವೆನನ್ಯಾಯ ನಿರತರ
ನೋತು ಕಾವೆನು ಧೈರ್ಯವುಳ್ಳರ
ಮಾತ ಕೇಳಾ ದುಹಿತೃ ಸೊಸೆ ನಿಜ ಭಗಿನಿ ಭ್ರಾತೃವಿನ ||
ದೈತೆಯೆಂಬರ ರಮಿಸುತಿಪ್ಪಾ
ಪಾತಕಿಯ ತಜ್ಞಾತಿಗಳು ಸಹ
ಘಾತಿಸುವುದೇ ಧರ್ಮ ಮಾರ್ಗದ ರಕ್ಷೆ ಕೇಳೆಂದ || ೩೭ ||

ತಮ್ಮನರ್ಧಾಂಗಿಯನು ಬಲುಹಿಂ
ಧರ್ಮವೇ ಭೋಗಿಸಿದೆಲಾ ನೀ
ನೆಮ್ಮದವಗುಣವಲ್ಲದದರಿಂ ಕೊಂದೆ ನಿನ್ನುವನು ||
ವರ್ಮವರಿಯದೆ ಕಪಿಯೆನಿಸಿ ನೀ
ಸುಮ್ಮ ತಾವಿರಬಾರದೀ ಜಗ
ಧರ್ಮಪಾಲಕರಾಗಿಯದುಗುಣ ಶಿಕ್ಷಿಸಿದೆನೆಂದ || ೩೮ ||

ಅರಿಯದೇ ಕಪಿವೃತ್ತಿಯಿಂದವೆ
ದುರುವಿಷಯದಲಿ ಬಿದ್ದ ನಿನ್ನುವ
ರಿದು ನಾ ಶಿಕ್ಷಿಸಿದೆನೇತಕ್ಕಿದಕೆ ಸಂಶಯವೆ ||
ಅರಿವನುಳ್ಳ ಮಹಾತ್ಮರಾದವ
ರುರುವಿಸುವ ಪಾವನವ ಮಾಳ್ಪರು
ಸರುವಥಾ ನಾ ತಪ್ಪೆ ನೀನದನಾಡಬೇಡೆಂದ || ೩೯ ||

ಎಂದಡದ ಕೇಳುತ್ತ ರಾಮ ಮು
ಕುಂದನೆಂಬುದನರಿದು ಭಯದಲಿ
ನೊಂದು ಬೇಗದಿ ಭಯದಿ ನುಡಿವನು ಬಾಲಿ ರಾಘವಗೆ ||
ಇಂದಿರಾಪತಿ ರಾಮ ರಾಮನ
ನಂದರೂಪ ಜಗತ್ಪತಿಯೆ ನಾ
ನೆಂದೆನರಿಯದೆ ವಚನದೋಷವ ನೋಡಬೇಡೆಂದ || ೪೦ ||

ದೇವ ನೀ ಪ್ರತ್ಯಕ್ಷದಿಂ ಬಂ
ದೀ ವಿಶೇಷದ ರೂಪ ತೋರಿದ
ಡಾವ ಧನ್ಯನೊ ತಾನು ತನುವನು ನಿನ್ನಿದಿರು ಬಿಡಲು ||
ನೋವುದೆಲ್ಲಿಯದೆನಗೆ ಯೋಗ ಮು
ನೀ ವಿದೂರನೆ ಮುಂದಿರಲು ಭಾ
ಪಾವ ಕರುಣಿಯೊ ರಾಮ ಭಕುತನೊಳೆಂದನಾ ಬಾಲಿ || ೪೧ ||

ಮರಣ ಕಾಲದಲಾವನೊಬ್ಬನ
ಸಿರುಪಮದ ನಾಮಾಕ್ಷರದ್ವಯ
ದೊರಕಿದೊಡೆ ಪರವಶದಲಾದರು ಮುಕ್ತಿವಡೆವರಿನೆ ||
ಅರರೆ ತನಗುತ್ಕ್ರಾಂತಿ ಸಮಯದಿ
ಪರಮ ಮಂಗಳ ದಿವ್ಯ ಮೂರ್ತಿಯ
ದರುಶನವದೆಂತಿರಲಹಹ ನಮಃ ಶಿವಾಯೆಂದ || ೪೨ ||

ತೆಪ್ಪಲರಿವುದೆ ಮರಣ ತೋರ್ಕೆಯ
ಲಿಪ್ಪವಗೆ ವಿಷವಹ್ನಿ ಖಡುಗವು
ಸರ್ಪಸರ ಜರೆ ಜಾರು ಜೋಹುವ್ಯಾಧಿ ಮುಖದಿಂದೆ ||
ಕುಪ್ಪರಿಸುತಿರಲಾಗಿ ಧಿಟದಿಂ
ಬಪ್ಪದೇ ಶ್ರೀ ರಾಮ ಚಿಂತೆಯು
ನಲ್ಪ ಸುಕೃತವೆ ತನಗೆ ರಾಘವನಿದಿರಲಳಿವುದಿದು || ೪೩ ||

ದೇವ ನೀನೆಯನಾದಿ ಪೂರುಷ
ದೇವಿ ಸೀತೆಯೆ ಲಕ್ಷ್ಮಿ ಜನಿಸಿದೆ
ರಾವಣನ ಸಂಹರಿಸಲಜ ನಿನ್ನುವನು ಬೇಡಿದಡೆ ||
ಸ್ವೈವಗತಿಯಲಿ ತನಗೆ ಮುಕ್ತಿಯು
ನೀವಡಿಲ್ಲಿಗೆ ಬಂದೆ ತಾನಳಿ
ವೀ ವಿನೋದವ ನೋಡು ತಾನೈದುವೆನು ನಿಜಪದವ || ೪೪ ||

ನನ್ನ ಸಮಬಲವಂತನಂಗದ
ನಿನ್ನ ಭೃತ್ಯನೆನುತ್ತ ಪಾಲಿಸು
ಬನ್ನ ಬಡಿಸುವ ಬಾಣವನು ತೆಗೆ ವಕ್ಷ ಕೀಲಿತದ ||
ನಿನ್ನಮೃತ ಹಸ್ತದಲಿ ಮುಟ್ಟನೆ
ಸನ್ನುತಪ್ರಿಯ ಬಾಣವನು ಕಿ
ತ್ತುನ್ನತೋನ್ನತ ಮಹಿಮ ಕರವಿರಿಸಿದನೆದೆಯ ಮೇಲೆ || ೪೫ ||

ಮುಟ್ಟಿ ಕರದಲಿ ರಾಮ ಬಾಲಿಯ
ಬಿಟ್ಟನಾ ಕಪಿದೇಹವನು ನೆರೆ
ತೊಟ್ಟನುನ್ನತ ದೇವ ಪತಿಯಹ ದಿವ್ಯದೇಹವನು ||
ಯೆಷ್ಟು ಸುಕೃತಿಯೊ ಬಾಲಿ ರಾಘವ
ತೊಟ್ಟ ಶರಹತಿಯಿಂದ ರಾಮನು
ಮುಟ್ಟದಾಕ್ಷಣ ತನುವನಳಿವುದಿದಾರ್ಗೆ ದೊರಕುವದೆ || ೪೬ ||

ಸತ್ಯ ನಿಧಿ ರಘುನಾಥನಮೃತದ
ಹಸ್ತವಾ ಬಾಲಿಯನು ಸೋಂಕಲು
ಮುಕ್ತಿಯಾಯಿತು ಸದ್ಯದಲಿ ಕಪಿದೇಹವಾಕ್ಷಣಕೆ ||
ಮತ್ತದಾರಿಗು ಪಡೆಯಬಾರದ
ನಿತ್ಯವಾದಾ ಪರಮಹಂಸರಿ
ಗತ್ಯಧಿಕ ದುರ್ಲಭವನೈದಿದನೊಂದು ನಿಮಿಷದಲಿ || ೪೭ ||

ಸಂದವಿಲ್ಲಿಗೆ ಸಂಧಿ ಮೂವ
ತ್ತೊಂದು ಪದಸಂಖ್ಯೆಗಳು ರವಿಗಳ
ವೃಂದದೊಳು ವೇದಗಳು ಕೂಡಿದ ಲೆಕ್ಕಕೊಂದುಳಿಯೆ ||
ಎಂನುವಗಲವ ಹೃದಯಕಮಲದ
ಮಂದಿರದಿ ಬೆಳಗುವ ಚಿದಾತ್ಮ
ನಂದಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹ ಜಯ ಶರಣು || ೪೮ ||

ಅಂತು ಸಂಧಿ ೩೧ ಕ್ಕೆ ಪದ ೧೩೯೦ ಕ್ಕೆ

ಮಂಗಳಮಹಾ ಶ್ರೀ ಶ್ರೀ ಶ್ರೀ



|| ಶ್ರೀ ರಾಮಚಂದ್ರಾಯ ನಮಃ ||



# ಮೂವತ್ತೆರಡನೆಯ ಸಂಧಿ

**ತಾರೆಗೆ ಹಿತೋಪದೇಶ, ಸುಗ್ರೀವನ ಪಟ್ಟಾಭಿಷೇಕ**

ಸೂಚನೆ || ತಿಳುಹಿ ತಾರೆಯ ,ರಾಮಚಂದ್ರನು
ಬಳಿಕ ಸುಗ್ರೀವಂಗೆ ಪಟ್ಟವ
ಸಲಿಸಿ ಲಕ್ಷ್ಮಣ ಸಹಿತ ವೊಪ್ಪಿದನಾ ಪ್ರವರ್ಷಣದಿ ||

ಪದ || ಅಪ್ರಮೇಯನೆ ಅದ್ವಿತೀಯನೆ
ಸುಪ್ರಕಾಶ ಚಿದಾತ್ಮರೂಪನೆ
ನಿಷ್ಪ್ರಪಂಚ ನಿರಾವಲಂಬನತರ್ಕ್ಯ ಗೋಚರನೆ ||
ಸುಪ್ರಸನ್ನಾಂಬುರುಹ ನಿಧಿ ಸಿರಿ
ವಪ್ರಲಾಂಛನದಿಂದಲೊಪ್ಪುವ
ಕಲ್ಪತರುವೆನಿಸಿರ್ದ ರಾಮನೆ ಬಿಡದೆ ಸಲಹೆಮ್ಮ ||೧||

ಬಾಲಿ ಕೇಳಾ ರಾಮ ಶರದಲಿ
ಬಾಲಿಯುಳಿದುದ ಕಂಡು ಕಪಿಗಳು
ಘೋಳಿಡುತ್ತೋಡಿದವು ಕಿಷ್ಕಿಂಧಿಗೆ ಮಹಾಭಯದಿ ||
ಹೇಳಿದರು ವೊರೆಯಿಡುತ ತಾರೆಗೆ
ಕಾಳಗದಿ ಕಪಿಯಳಿದನಲ್ಲಿಂ
ಮೇಲೆಯಂಗದನಂಗರಕ್ಷೆಯ ಯೋಚಿಸೀಕ್ಷಣವೆ ||೨||

ನಾಕುಬಾಗಿಲ ಕದವನಿಕ್ಕಿಸು
ಶೋಕದಿಂ ಮಂತ್ರಿಗಳ ಕರೆದಾ
ಲೋಕಿಸೀಗಳೆ ಪುರದ ರಕ್ಷೆಗೆ ಸುತ್ತ ವಾನರರ ||
ಆಕೆವಾಳರನಿ[1]ರಿ[1]ಸುವನ್ಯರು
ನೂಕದಂತಂಗದನ ಮೇಲಭಿ
ಷೇಕವಾಗಲಿ ರಾಜ್ಯ ಪಟ್ಟವು ಯೆಂದರಾ ಚರರು || ೩ ||

ಅದನು ಕೇಳುತ ಶೋಕಮೂರ್ಛೆಯು
ಉದರ ತಳತಾಡಣದಿ ಧೊಪ್ಪನೆ
ಬಿದುರಿ ಬಿದ್ದಳು ಕಟ್ಟಿನೆನುತವೆ ಬಿಟ್ಟ ಮಂಡೆಯಲಿ ||
ಸದೆದುಕೊಂಡಳು ತಲೆಯನೇ ಕಂ
ಗದನ ಮಾತೀ ರಾಜ್ಯ ಧನ ಸಂ
ಪದವದೇತಕೆ ಪತಿಯೊಡನೆ ಸಹಗಮನ ತನಗೆನುತ || ೪ ||

ಎಂದೊರಲುತವೆ ಬಿಟ್ಟ ಮಂಡೆಯು
ಲಿಂದುಮುಖಿ ವೇಗದಲಿ ಬಾಲಿಯು
ಕೊಂದೆಡೆಗೆ ಬಂದೀಕ್ಷಿಸಿದಳಾ ಪತಿಯು ಕಳೆವರವ ||
ಬೆಂದವ್ರೋಲಳಲುತ್ತ ರಕುತದಿ
ಮಿಂದವ್ರೋಲಿಹ ಶವವ ಕಾಣುತ
ಹೊಂದಿದ್ಯೆ ಹಾ ನಾಥ ಯೆನುತೆಡೆಗೆಡೆದಳಂಘ್ರಿಯಲಿ || ೫ ||

ತೋರಿ ಕರುಣ ವಿಲಾಪಿಸುತ್ತಾ
ನಾರಿ ನುಡಿದಳು ರಾಮ ತನ್ನನು
ಕ್ರೂರಲಗಿನಲಿ ಕೊಲ್ಲು ಬಾಲಿಯ[2]ಕೊಂದ[2] ಪರಿಯಲ್ಲಿ ||
ಸಾರುವೆನು ಪತಿಲೋಕಕೆನ್ನನು
ಹಾರುತಿಹನೆನ್ನಾಳ್ದ ನಾಥಗೆ
ಸೇರದಾ ಸ್ವರ್ಗದಲಿ ಸುಖ ಲವಲೇಶವಾನುಳಿಯೆ || ೬ ||

---

1ಲಿ (ಖ) 2 ನೊಂದ (ಕ)

ಹೆಂಡತಿಯನಗಲಿದ್ದ ದುಃಖವ
ಕಂಡುಬಲ್ಲೆಲೆ ರಾಮ ತನ್ನನು
ದಂಡುದರಿದ್ಯೈದಿಸಿದೆಯಾದಡೆ ಬಾಲಿಯೊಡನೆನ್ನ ॥
ಪಂಡಿತನೆ ಪತ್ನೀಸುದಾನೆದ
ಖಂಡಫಲ ನಿನಗುಂಟು ರಾಜ್ಯದ
ಮಂಡಲವ ಸುಖದಿಂದ ಕೊಡು ಸುಗ್ರೀವಗೊಲವಿನಲಿ ॥ ೭ ॥

ಎಂದಳಾ ಸುಗ್ರೀವಗಕಟಾ
ಕೊಂದೆ ಬಾಲಿಯನಿನ್ನು ರಾಘವ
ನಿಂದ ಸಹ ಸುಖ ರಾಜ್ಯವಾಳು ಸಪತ್ನಿ ಸಹಿತದಲಿ ॥
ಎಂದು ಹಳಿವಿಸೆ ತಾರೆ ಕಡು ಕೃಪೆ
ಯಿಂದ ಕೇಳಿ ಮಹಾಮನಸ್ವಿ ಮ
ಕುಂದ ದಯದಿಂ ಸಂತವಿಸುತಿದ್ದನು ರಘೂತ್ತಂಸ ॥ ೮ ॥

ತತ್ವವಿಜ್ಞಾನೋಪದೇಶವ
ನಿತ್ತು ಕಳುಹಲು ರಾಮನೆಂದನು
ವ್ಯರ್ಥದಲ್ಲೇಕಳುವೆ ಶೋಕದ ವಿಷಯಕದರೊಳಗೆ ॥
ಸತ್ತನಾರ್ಕೈ ಪತಿಯ ದೇಹದ
ಛಿತ್ರದ ಪತಿ ಜೀವನೋ ಹೇ
ಚಿತ್ರನನುಳಿದನ್ಯವಿಲ್ಲೆಲೆ ತಾರೆ ಕೇಳೆಂದ ॥ ೯ ॥

ದೇಹವೇ ಪತಿಯಾದಡಿದೆಲಾ
ಕಾಹುರದ ಜಡ ಪಂಚ ಭೌತಿಕ
ಸೋಹೆಯಿಂ ತ್ವಜ್ಮಾಂಸ ಯಲುನೆರ ತೊಗಲು ರಕುತ ಸಹೆ ॥
ಬೇಹ ಕಾಲಾಧೀನ ಕರ್ಮದ
ಸಾಹಚರ್ಯದಲುದಿಸುತಳಿವುದು
ನೀ ಹಳವಿಸುವುದೇಕೆ ಮುಂದಿರೆ ಕಾಣುತಕಟೆಂದ ॥ ೧೦ ॥

ಅಸ್ವತಡೆ ಜೀವಾತ್ಮನೋ ನಿಜ
ಸ್ವಸ್ವರೂಪವಂತಾಪದಡಾತಂ
ನಿಸ್ವ ಹಾಸಿ ನಿರಾಮಯನು ತಾನೊಂದು ಕಾಲದಲು ||
ಬಸ್ವಿ ನಾಸವ ಜನಿಸಲಳಿಯನು
ನಿಸ್ವ ನವಿಯನು ಪುರುಷ ನಾರಿಯು
ಅಸ್ವ ಮೇಣು ನಪುಂಸಕನು ತಾನಲ್ಲ ಕೇಳೆಂದ || ೧೧ ||

ಸರ್ವಗತನವ್ಯಕ್ತನನ್ವಯ
ನಿರ್ಲೇಪನು ಗಗನದಂದದಿ
ಪರ್ಣಿಸದ ನಿಷಂಪುವಲಲಾಪಕ ನಮಲನವ್ಯಯನು ||
ನಿರ್ವಿಕಲಕ್ರಿಯನು ನಿತ್ಯನು
ಶರ್ವ ಶಾಂತಜ್ಞಾನ ಸುಖರಸ
ಸರ್ವತೋಪಮನಚಲ ಶುದ್ಧನು ಬದ್ಧ ಸುಖಮಯನು || ೧೨ ||

ನಾರಿ ನೀನೆಂತಳುವೆಯವಗೆನೆ
ತಾರಿ ನುಡಿವಳು ರಾಮ ದೇಹ ವಿ
ಕಾರಿಸಲು ಕಾಷ್ಟೋಪಮಲವಾ ಜೀವನೆಂಬವನು ||
ಹೋರ ನಿತ್ಯ ಚಿದಾತ್ಮನಾದಡ
ವಾರಿಗೀ ಸುಖದುಃಖ ಬಂಧ ವಿ
ಕಾರ ಮೊದಲಾಗಿಲ್ಲ ತನಗಿದ ತಿಳುಹು ತಿಳಿವಂತೆ || ೧೩ ||

ಯನ್ನವರ ದೇಹೇಂದ್ರಿಯಾದಿಯ
ಲೆನ್ನಲೆಂಬಭಿಮಾನಹಂಕೃತಿ
ತನ್ನವರಲಿಪ್ತ ವರವಾ ಜೀವಾತ್ಮವೆಂಬವನ ||
ಬನ್ನ ಬಡಿಸುವಲಜ್ಞತೆಯಲೀ
ಗನ್ನ ಮಿಥ್ಯಾಹದದ ಸಂಸ್ಮೃತಿ
ನಿರ್ಣ[1]ಯದಿ[1] ಪರಿಕಿಸದೆ ಹೋಗದು ಯೆಂದನಾ ರಾಮ || ೧೪ ||

1 ಯಿಸಿ (ಖ)

ವಿಷಯವನು ನೆನೆವವಗೆ ಕನಸಿನ
ವಿಷಯವೇ ರೂಪಾಗಿ ಕಾಂಬಂ
ತಸಮವಾಗಿಹನಾದಿ ವಿದ್ಯಾ ವಾಸನಾತ್ಮಕದ ||
ವ್ಯಸನ ಬಂಧನಲಾತ್ಮ ತಾನೀ
ಪುಸಿಯೆನಿಪ ಸಂಸ್ಕೃತಿಯೆನಿಪ ನೆರೆ
ಮುಸುಕಿ ರಾಗ ದ್ವೇಷ ಸಂಕುಲದೊಳಗೆ ತೊಳಲುತಿಹ || ೧೫ ||

ಮನವೆ ಸಂಸಾರಕ್ಕೆ ಕಾರಣ
ಮನವೆ ಕರ್ಮಾಧೀನವೆಂಬುದು
ಮನವೆ ಜೀವನ ರೂಪವಲ್ಲದೆ ಬೇರೆ ರೂಹಿಲ್ಲ ||
ಚಿನುಮಯನು ತಾ ಮನದ ವಾಸನೆ
ಯೆನಿಪ ವಿಷಯವನ್ನೈದೆ ಸಂಸ್ಕೃತಿ
ಹೊನಲೊಳೆದ್ದನೊಯೆಂಬ ಪರಿಯಲಿ ಕಾಣಿಸುವನೆಂದ || ೧೬ ||

ಮನದ ಸಂಬಂಧಾದಿ ವಿಷಯಗ
ಳನುಪಮಗೆ ಹೊರದಡೆಯು ಸಾಕ್ಷಿಯ
ದೆನಿಪ ಸಂಮ್ಮಂಧದಲಿ ತಜ್ಜೀವನವೊಲಿರುತಿಹನು ||
ಎನಿಪುದಕೆ ದೃಷ್ಟಾಂತವೆಂತೆನೆ
ವಿನುತ ಶುದ್ಧ ಸ್ಫಟಿಕ ತತ್ತ
ಜ್ಜನಿತ ಬಣ್ಣವ ಹೊದ್ದ ರಕ್ತಾದಿಯಲಿ ತೋರ್ಪಂತೆ || ೧೭ ||

ಬುದ್ಧಿ ಮೊದಲಾದಿಂದ್ರಿಯಂಗಳ
ಹೊದ್ದಿ ತತ್ಸಾಮೀಪ್ಯಗುಣವಾ
ಗಿದ್ದಡವರ ವಿಕಾರ ಭಾವವು ಬಲಿವುದಾತ್ಮಂಗೆ ||
ಶುದ್ಧನೆಂಬುದ ಮರೆದು ವಿಷಯದ
ಬದ್ಧದಲಿ ಬಿಗಿವಡೆದು ಸಲೆ ಕ
ರ್ದ್ದಮಯದಲೋರಂತೆ ತೊಳಲುತ್ತಿಹನು ಕೇಳೆಂದ || ೧೮ ||

ಮೊದಲು ಸಂಕಲ್ಪದಲಿ ಸೃಷ್ಟಿಗ
ಳೊದಗದೀ ಮನವಾಯಿತಲ್ಲಿಂ
ದದರ ಮೇಲಾನೇಕ ಕರ್ಮಪ್ರಕೃತಿ ಗುಣದಿಂದ ||
ಸದಮಲಾಧಮ ಮಧ್ಯಮೇನೆಂ
ಬುದರ ದೆಸೆಯಿಂ ಶುಕ್ಲಲೋಹಿತ
ಕದಕು ಕೃಷ್ಣವೆನಿಪ್ಪ ಸತ್ವರಜಸ್ತಮಗಳೆಂದ || ೧೯ ||

ಈ ಪರಿಯ ಕರ್ಮಗಳ ಗುಣವಿಡಿ
ದಾ ಪರಿಯಲೆನೆ ನಡೆದು ವಿಷಯದ
ತೋಪಿನಲಿ ಬಿಗಿವಡೆದು ತಾನೇ ವಾಸನಾಯುತದ ||
ಲೋಪ ನಾನಾ ಸಾಧ್ಯ ವಿದ್ಯಾ
ರೂಪಿ ತಾನಿರ್ದಭಿನಿವೇಶದಿ
ಭಾಪು ಮರುಳುದಿಸುವನು ವಾಸನೆವಿಡಿದು ಕೇಳೆಂದ || ೨೦ ||

ಸೃಷ್ಟಿ ಕಾಲದಿ ಮರಳೆ ಪೂರ್ವದಿ
ತೊಟ್ಟ ವಾಸನೆ ವಿಡಿದು ಮರಮರ
ಳೆಷ್ಟು ಕಲ್ಪವು ಸಂದಡೂ ಜನಿಸುತ್ತಲಿಹನಾತ್ಮ ||
ಮುಟ್ಟಿ ಕೆಳಮೇಲೈದುತಿಪ್ಪಾ
ಕಟ್ಟಲೆಯ ಘಟಿ ಸೂತ್ರದಂದದ
ಲೊಟ್ಟವಿಸದೀ ಜನನ ಮರಣವು ಕೋಟಿ ಕಲ್ಪದಲಿ || ೨೧ ||

ಎತ್ತಲಾನೂ ಪುಣ್ಯ ಕರ್ಮದ
ಸತ್ವವೇ ಹೆಚ್ಚಿದ್ದಡವರಿಂ
ಗುತ್ತಮದ ತತ್ಸಂಗವಹದಾ ಸಾಧುವೆಂಬವರು ||
ನಿತ್ಯವೂ ಮದ್ಭಕ್ತಿ ಶಾಂತ ಸು
ಚಿತ್ತರಾಗಿಹರವರ ಸೇವಾ
ಸಕ್ತಿಯಲ್ಲಿರಲೆನ್ನ ಭಕ್ತಿಯ ಮಾರ್ಗವಹುದೆಂದ || ೨೨ ||

ದುರ್ಲಭವು ಮತ್ಕಥೆಯ ಕೇಳವು
ದೆಲ್ಲವಕ್ಕೆಲೆ ತಾರೆಯುದರಿಂ
ದಿಲ್ಲದೇ ನಾಯಾಸಮದ್ರೂಪವನು ನೆರೆ ತಿಳಿವ ||
ಸಲ್ಲಲಿತದಜ್ಞಾನ ಸೇರುವ
ದಲ್ಲ ಗುರುವಿನ ಕರುಣದಿಂದಲಿ
ಫುಲ್ಲವಿಸುವುದು ವಾಕ್ಯದರ್ಥ ಜ್ಞಾನವಾಕ್ಷಣಕೆ || ೨೩ ||

ದೇಹವಿಂದ್ರಿಯ ವಿಷಯ ವಾಯು ಸ
ಮೂಹವಂತಃಕರಣದಿಂದಲು
ಬಾಹಿಯಾತುಮನೆಂದು ಕಂಡಾ ತದಭಿಮಾನದಲಿ ||
ಮೋಹವಡೆಯದೆ ಬಳಿಕ ತಿಳಿವನು
ಸೋಹಮೆಂದು ನಿರಾವಲಂಬ ನಿ
ರೀಹ ಸತ್ಯಸ್ವಾನುಭವ ನಿರ್ದ್ವಂದ್ವ ನಿಜಪದವ || ೨೪ ||

ನಿತ್ಯನದ್ವಯ ಶಾಂತನಿರ್ಮಲ
ಸತ್ಯವೇಕನಮಾಯನಕ್ರಿಯ
ಪ್ರತ್ಯಯಾದಿ ವಿಲಕ್ಷ ನಿಷ್ಕಳ ನಿರಜ ನಿರವಂದ್ಯ ||
ಸುತ್ತ ಗಗನ ಶರೀರ ಚಿನ್ಮಯ
ವೃತ್ತಿ ದೂರನಖಂಡ ಶಾಶ್ವತ
ವಸ್ತು ತಾನೆಂದರಿದು ಸದ್ಯನ್ಮುಕ್ತನಹನೆಂದ || ೨೫ ||

ನಾನು ನಿನಗಿಂದಿದುವೆ ಸತ್ಯ
ಜ್ಞಾನವಿದನನವರತಲನು ಸಂ
ಧಾನಗುಂದದೆ ತಿಳಿಯೆ ಕಳಿವರು ಸಕಲ ದುಃಖವನು ||
ಏನುಮಾಯಸವಿಲ್ಲದಿನ್ನು
ಧ್ಯಾನ ಕೀರ್ತನ ಸೇವೆ ಕೂಡುವ
ತಾನೆ ಶೋಕವಿನಾಶ ಪರಮಾನಂದ ನಿಜಪದವ || ೨೬ ||

ಆತುಮಾನುಭವಪ್ರಮಾಣ
ಖ್ಯಾತ ಸಂತುಷ್ಟಿಯಲಿ ಜಯ ಬಂ
ಧಾತಿರೇಕವ ಬಿಟ್ಟು ಕಲ್ಮಷವಳಿದು ನಿಮಿಷದಲಿ ||
ವಾತಸಿಲ್ಲದ ಮನೆಯೊಳಿಪ್ಪಾ
ಜ್ಯೋತಿಯಂದದ ಜೀವ ಮುಕ್ತಿಯ
ನಾತುಮ ಶ್ರೀ ರಾಮ ಸಂಗದ ಮಾತ್ರಕೈದಿದಳು || ೩೧ ||

ಅಚ್ಚರಿಯೆ ಮರೆದೊಮ್ಮೆ ರಾಮನ
ಸಚ್ಚರಿತ ತನ್ನಾಮವನು ನರ
ರುಚ್ಚರಿಸೆ ಸಂಸಾರ ಬಂಧನದಿಂದ ಮುಕುತಿಯನು ||
ವಚ್ಚ[1]ಲ್ಕೈ[1]ದುವರೆನಲು ಸಾಕ್ಷಾ
ದ್ಯಚ್ಚುತ ಶ್ರೀ ರಾಮ ಮುಂದಿ
ಟ್ಟೆಚ್ಚರಿಸಲದ ತಾರೆಗಾಗದೆ ಜೀವ ಮುಕ್ತಿಯದು || ೩೨ ||

ಕೇಳುತವೆ ಸುಗ್ರೀವನಾ ಶ್ರೀ
ಲೋಲ ವಕ್ತ್ರೋಂಗಳಿತದಮೃತವ
ಸಾಲೆ ಕರ್ಣದಿ ಕುಡಿದು ಕಡಿದಜ ತಾನ ಬಂಧನವ ||
ಶೀಲಿಸುತ ಚಂಚಲವನಳಿದಿರೆ
ಮೇಲೆ ನುಡಿದನು ರಾಮನಾಶ್ರಿತ
ಪಾಲಕನು ತಾನಾಗಿ ಸುಗ್ರೀವಂಗೆ ಕರುಣದಲಿ || ೩೩ ||

ಆತನನು ತತ್ಪುತ್ರ ಸಹಿತ ಕು
ಲೋಚಿತಕ್ರಮವೇನು ತಪ್ಪದೆ
ನೀತಿಯಿಂ ಸಂಸ್ಕರಿಸು ಬೇಗೆನ್ನಾಜ್ಞೆಯಿಂದೆನಲು ||
ಆ ತಥೇತಿಯೆನುತ್ತ ಬಲ ವಿ
ಖ್ಯಾತ ವಾನರರಿಂದ ಸಹಿತವೆ
ಯೋತ ಪುಷ್ಪಕದಲ್ಲಿ ಬಾಲಿಯ ಶವವನಿರಿಸಿದರು || ೩೪ ||

1 ತ್ಯೈ (ಖ)

ಭೇರಿ ದುಂದುಭಿ ಘೋಷ ರಾಜಾಪ
ಚಾರ ಮುಖ್ಯದಿ ವಿಪ್ರ ಮಂತ್ರಿ ಕು
ಮಾರನಗಂದ ತಾರೆ' ವಾನರ ಮುಖ್ಯ ಯೂಥಪರು ||
ಪೌರಜನವೆಲ್ಲವರು ವನ ಕೈ
ದಾಪುಷೇಯಃ ಪ್ರೋಕ್ತ ವಿಧಿಯಲಿ
ಸೇರಿಸಿದರಾ ಬಾಲಿಯೂರ್ಧ್ವಕ್ರಿಯೆಯ ಸಂಸ್ಕೃತಿಯ || ೩೫ ||

ಮಿಂದು ಪರಿಜನ ಮಂತ್ರಿಗಳು ಸಹ
ಬಂದು ರಾಮನ ಹೊರೆಗೆ ಚರಣ
ದ್ವಂದ್ವದಲಿ ಮಯ್ಯಿಕ್ಕೆ ಪೂರ್ಣಮನೋನುರಾಗದಲಿ ||
ಎಂದನೆಲೆ ರಘುನಾಥ ರಾಜ್ಯವ
ನಿಂದು ಕಪಿಗಳಿಗೊಡೆಯನಾಗಿ ಪು
ರಂದರೋಪಮ ಸಂಪದವ ನೀನಾಳಬೇಕೆಂದ || ೩೬ ||

ದಾಸ ನಾ ನಿನ್ನಂಘ್ರಿಗೆಲೆ ಜಗ
ಧೀಶ ಲಕ್ಷ್ಮಣನಂತೆ ಸೇವೆಯ
ನಾ ಸದಾ ಮಾಡುತ್ತ ಬದುಕುವೆನೆನಲು ನಸುನಗುತ ||
ಲೇಸನಾಡಿದೆ ನೀನು ನಾನೇ
ದೇಶವರಿಯಲು ಸಂಶಯವೆ ಮ
ದ್ಭಾಷಿತವ ನೀ ಧೀರ ಕೇಳೆನ್ನಾಜ್ಞೆಯಿಂತೆಂದ || ೩೭ ||

ಪಟ್ಟಣದಿ ರಾಜ್ಯಾಭಿಷೇಕದ
ಕಟ್ಟಳೆಯ ನೀ ಧರಿಸು ನಗರವ
ಸಿಟ್ಟಸೆನು ಹದಿನಾಲ್ಕು ವರುಷವ ತಂದೆಯಾಜ್ಞೆಯಲಿ ||
ಮುಟ್ಟಿ ಲಕ್ಷ್ಮಣ ನಿನಗೆ ಪಟ್ಟವ
ಕಟ್ಟಿ ಬರಲೀಕ್ಷಣವೆ ಹೋಗಾ
ಕೊಟ್ಟು ಬಾಲಂಗದಗೆ ಯುವರಾಜ್ಯಾಧಿಪತ್ಯವನು || ೩೮ ||

ನಾನು ಹತ್ತಿರೆ ಶಿಖರ ಪರ್ವತ
ಸಾನುವಿನಲಿಹೆ ತಮ್ಮ ಸಹಿತವೆ
ನೂನ ವರ್ಷೋತ್ಕಾಲವಿದು ಕಳಿವನ್ನ ಯತ್ನವನು ||
ನೀನು ಮರೆಯದಿರಿನ್ನು ಕೆಲದಿನ
ಸೋನೆಗಳಿವನ್ನಿರು ಪುರದಿ ಮ
ನ್ನಾನಿನೀ ಸೀತೆಯನರಸಬೇಕೆಂದನಾ ರಾಮ || ೩೯ ||

ಎನಲು ಸಾಷ್ಟಾಂಗದಲಿ ವಂದಿಸಿ
ದನು ರಘೂತ್ತಮನಂಘ್ರಿಯುಗದಲಿ
ತನಗೆ ಬೇರೇನೂ ಸ್ವತಂತ್ರವೆ ನಿನ್ನ ನೇಮದಲಿ ||
ಅನುಕರಿಸುವೇನೆನುತ ಲಕ್ಷ್ಮಣ
ನನು ಕರೆದು ಕೊಂಡ್ಯೊದಿದನು ಸಂ
ಜನಿತ ರಾಮಾನುಗ್ರಹದ ಸಿದ್ಧಿಯಲಿ ಸುಗ್ರೀವ || ೪೦ ||

ಬಂದನಾ ಸುಗ್ರೀವ ಲಕ್ಷ್ಮಣ
ನಿಂದ ಸಹ ನಿಜಪುರಕೆ ಪೂಜೆಗ
ಳಿಂದ ಸೌಮಿತ್ರನನು ಮನ್ನಿಸಿ ರಾಮನೆಂದಂತೆ ||
ನಿಂದನರಸಾಗಿದ್ದೊಲಿದು ಕಿ
ಷ್ಕಿಂಧಿಯಲಿಯಂಗದ ಸಹಿತ ಸುಖ
ದಿಂದಲಾ ಶ್ರೀರಾಮನೊಲಿದಂಗಾವುದರಿದೆಂದ || ೪೧ ||

ಬೇಗ ಕಳುಹಿಸಿಕೊಂಡು ಲಕ್ಷ್ಮಣ
ರಾಘವನ ಹೊರೆಗಾಗಿ ಬಂದಾ
ಯೋಗಿ ವಂದ್ಯಗೆ ನಮಿಸಿಯೊಡನಿರಲಖಿಳ ತೇಜದಲಿ ||
ಮೇಗೆ ಹತ್ತಿ ಪ್ರವರ್ಷಣಾಖ್ಯ ಮ
ಹಾ ಗಿರಿಯ ಶಿಖರದಲಿ ವಿಸ್ತರ
ವಾಗಿರಲು ವಾಸವನು ಮಾಡಿದನನುಜ ಸಹವಾಗಿ || ೪೨ ||

ಆವರೊಳೊಂದಚ್ಚರಿಯ ಗುಹೆಯಿರೆ
ಸ್ವವಮಲಸ್ಫಾಟಿಕದ ತೇಜದ
ಹೊಸರಿಸಿಂ ವಾತಾತಪಾದಿಯ ಬಾಧೆಗದು ಹೊಗದ ॥
ಇದಿರು ವನಫಲಮೂಲವಿಂ ಸಂ
ಪದವೆನಿಸಿ ವಾಸವನು ಮಾಡಲು
ಮುದವದಾಗಿರಲನುಜ ಸಹಿತಲ್ಲಿದ್ದನಾ ರಾಮ ॥ ೪೩ ॥

ದಿವ್ಯ ಫಲ ಮೂಲಾದಿ ಶೋಭಿತ
ದಿವ್ಯ ಪುಷ್ಪಾಮೋದದಿಂ ವರ
ದಿವ್ಯ ಜಲದಿಂ ಮೌಕ್ತಿಕೋಪಳ ಪಲ್ವಲಂಗಳಲಿ ॥
ದಿವ್ಯ ವರ್ಣದ ಪಕ್ಷಿ ಮೃಗದಿಂ
ಸೇವ್ಯಮಾನಾಯತದ ಗಿರಿಯಲಿ
ದಿವ್ಯ ಮೂರುತಿ ಸುಖದಲಿದ್ದನು ತಮ್ಮ ಸಹವಾಗಿ ॥ ೪೪ ॥

ದಶಸ ಪರಿಮಿತ ಸಂಧಿಯಲಿ ಪದ
ವಿಸರ ವೇದದಿ ರುದ್ರರಿಟ್ಟಂ
ತಸುರಹರ ರಾಘವ ಚರಿತ್ರ ಕಥಾಮೃತಾಂತರದಿ ॥
ಸಸಿಯಿದನು ಕೇಳಿದಡೆ ಹೇಳಿದ
ಡೊಸೆದು ತನ್ನವರೆಂದು ನೆರೆ ರ
ಕ್ಷಿಸುವ ಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹನೊಲವಿನಲಿ ॥ ೪೫ ॥

ಅಂತು ಸಂಧಿ ೩೨ ಕ್ಕೆ ಪದ ೧೪೩೫ ಕ್ಕೆ

ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ



|| ಶ್ರೀ ರಾಮಚಂದ್ರಾಯ ನಮಃ ||



# ಮೂವತ್ತೊಂಬತ್ತನೆಯ ಸಂಧಿ

## ಲಕ್ಷ್ಮಣನಿಗೆ ರಾಮಪೂಜಾ ಕ್ರಮದ ವಿವರಣೆ

ಸೂಚನೆ || ಹೇಳಿದನು ಲಕ್ಷ್ಮಣಗೆ ಲಕ್ಷ್ಮೀ
ಲೋಲ ರಾಮನು ತನ್ನ ಭಕುತಿಗೆ
ಮೂಲವಾದುತ್ತಮದ ಪೂಜಾಕ್ರಮವ [1]ಕರುಣದಲಿ[1] ||

ಪದ || ಮಣಿ ಮಕುಟ ಮಣಿ ನೊಸಲ ತಿಲಕದ
ಲಣಕಿಸುವ ವರದೀಪ್ತಿ ದಂತದ
ಯೆಣಿಕೆಗೊಳ್ಳದೆ ಕುಂಡಲದ್ವಯ ಮಣಿಯ ಕಾಂತಿಗಳ ||
ಮಣಿಗಣದಿ ಗಂಜಿಸುವ ಹಾರದ
ಭಣಿತೆಯಿಂ ರಾಜಿಸುವ ಕಟಿತಟ
ದೆಣಿಕೆಯಿಲ್ಲದ ರಾಮಪದವನು ನೆನೆವೆ ಮನದೊಳಗೆ || ೧ ||

ಗಿರಿಜೆ ಕೇಳಾ ರಾಘವೇಶ್ವರ
ನಿರವ ಮಾಡಿದನಾ ಪ್ರವರ್ಷಣ
ಗಿರಿಯ ಮಹಿಗುಹೆಯಲ್ಲಿ ವರ್ಷಾಕಾಲಗಳಿಯಲಿಕೆ ||
[ಗಿರಿಯ ಮಣಿಮಯ ಗುಹೆಯಲಿರುತಾ
ಪರುವತದವೋಲ್ಬೆಳೆದ ಪಣ್ಗಳ
ವರರುಚಿರವಹ ಕಂದಮೂಲಂಗಳನು ಸೇವಿಸುತ || ೨ ||]

---

1 ಕರುಣಿಸಿದ (ಖ)

[ಭ್ರಾತೃ ಲಕ್ಷ್ಮಣ ಸಹಿತ ಗಿರಿಯಲಿ
ಸೀತೆಯನು ನೆನೆವುತ್ತಲಿರಲಿಕೆ
ವಾತದಿಂ ಕೂಡಿರ್ದ ವರ್ಷಾಕಾಲ ಸಮನಿಸಿತು ||]
ಖ್ಯಾತ ಕಾಂಚನ ಪರಿಕರದಿ ಗಜ
ಯೂಥಪವು ಗರ್ಜಿಸುತ ಬಹವೆನೆ
ಆಹುವು ಶ್ರೀ ರಾಮ ನೋಡುತ ವಿಸ್ಮಯದಲಿರ್ದ || ೩ ||

ಹೊಸತೆನಿಪ ಮೇಘದ ನಿನಾದ
ಚ್ಚ ಸಿತ ಶಬುದವ ಕೇಳಿ ಖಗಮೃಗ
ವಿಸರವೆತ್ತಿತ್ತೈದಿ ಪರಿವೃತ ರಾಮನಾಶ್ರಮದಿ ||
ವಿಸುಕದೆನೆಯನು ರಾಮ ಮೂರ್ತಿಯ
ವಿಷಯ ರೂಪವನೀಕ್ಷಿಸುತ್ತ
ಧ್ಯಾನಪರರಾಕ್ಷ್ವಧ್ಯಾನನಿಷ್ಠ ಮುನೀಂದ್ರರಂತಿಹವು || ೪ ||

ರಾಮ ಮಾನುಷ ರೂಪ ತಾಳ್ದೀ
ಭೂಮಿಯಲಿ ಹರಿ ಕಾನನದಿ ಸುಖ
ಧಾಮನಾಗಿರಲಂದು ಸಿದ್ಧ ಗಣಂಗಳೈತಂದು ||
ತ ಮಹಾ ಮೃಗಪಕ್ಷಿರೂಪಿಂ
ಸ್ವಾಮಿಯನು ಸೇವಿಸುತಪಾತ್ಮಾ
ರಾಮದಿಂ ಪ್ರೇಮಗೆದಿಹವು ತನ್ಮೂರ್ತಿ ಸುಖದೊಳಗೆ || ೫ ||

ಒಂದು ದಿನ ಸೌಮಿತ್ರ ನಮಿಸಿಂ
ತೆಂದನಾ ಶ್ರೀ ರಾಮನಾತ್ಮಾ
ನಂದಯೋಗ ಸಮಾಧಿಯಿಂದೆಚ್ಚರಿತಿರಲು ಕಂಡು ||
ನ್ನಂದ್ಯ ಕರವನು ಮುಗಿದು ವಿನಯದಿ
ಬಂದೆ ತನಗೆಲೆ ದೇವ ಕರುಣದ
ಲಿಂದ ತತ್ವಜ್ಞಾನ ಮಾರ್ಗವಿಚಾರವನು ಮುದದಿ || ೬ ||

ಆದರಿನಿಂದಲನಾದ್ಯ ವಿದ್ಯಾ
ಮದದ ಸಂಶಯವೆಲ್ಲವಳಿಯಿತು
ಹೃದಯಗತವಾದಸಿತು ನಿಮ್ಮ ಕೃಪಾಕಟಾಕ್ಷದಲಿ ||
ಸದಮಲಾತ್ಮಜ್ಞಾನೆ ನಿಷ್ಠನೆ
ಮುದದಿ [1]ನಿಮ್ಮನುಭಜಿಸು[1] ವರ್ಗದ
ವಿಧಿಯುತಾರಾಧನೆಯ ಕೇಳಲಿಕಿಚ್ಛೆಯಾಯ್ತೆಂದ || ೭ ||

ನಿನ್ನ ಪೂಜಾರಾಧನೆಯೆ ಸಂ
ಪನ್ನ ಮುಕ್ತಿಗೆ ಸಾಧನವು ಯೆಂ
ದುನ್ನತದ ಯೋಗಿಗಳು ನಾರದ ವ್ಯಾಸ ಮೊದಲಾದ ||
ಮುನ್ನ ಕಮಲಜ ಸಹಿತ ಹೊಗಳುವ
ರೆನ್ನ ಬೇಕೆನಗರಿವ ಪರಿ ಕರು
ಣಾರ್ಣವನೆ ರಘುನಾಥ ಪೂಜಾಕ್ರಮವನಿದನೆಂದ || ೮ ||

ವಿಪ್ರ ನೃಪಮುಖ ವರ್ಣವಾಶ್ರಮ
ಕೊಪ್ಪುವದ ಸ್ತ್ರೀ ಶೂದ್ರರಿಗೆ ಸಹ
ತಪ್ಪದುತ್ತಮ ಮುಕುತಿವಡೆವಡೆ ಸುಲಭವಾಗಿಹುದ ||
ಸ್ವಲ್ಪವಾದದ ಸಕಲ ವೇದದ
ಜಲ್ಪದಲಿ ಪೇಳಿದುದ ಸೇವಕ
ನಿಪ್ಪ ನಿಮ್ಮನುಜಂಗೆ ಕರುಣಿಸು ಲೋಕ ಹಿತನಾಗಿ || ೯ ||

ಎಂದು ಚರಣದಲೆರಗಲಾಶ್ರಿತ
ಬಂಧು ರಾಘವನೆಂದನನುಜಗೆ
ಕಂದ ಕೇಳೆನ್ನಮಳ ಪೂಜಾಕ್ರಮವ ವರ್ಣಿಸಲು ||
ಯೆಂದಿಗೂ ಕಡೆಯಿಲ್ಲದಡು ತಾ
ನೆಂದಪೆನು ಸಂಕ್ಷೇಪದಲಿ ಮೊದ
ಲಿಂದಲೇ ಕ್ರಮ ಮಾರ್ಗದಲಿ ನಿನಗೆಂದನಾ ರಾಮ || ೧೦ ||

---

1 ಭಜಿಸುವ ಧಾನ (ಖ)

ತಸ್ನ ಶಾಸ್ತ್ರೋಕ್ತ ಪ್ರಕಾರದ
ವರ್ಣಧರ್ಮವ ಬಿಡಲೆ ಬಾರದು
ವ.ಸ್ನಿಸುವದದ ವಿಪ್ರರಾದವರಾವ ಕಾಲದಲು ||
ಚಿಸು ವ.ಯುವಾಗಿದ್ದ ಗುರುವಿನ
ಚಿಸ್ನ ಕರುಣದಿ ಮಂತ್ರರೂಪಾ
ಪೆಸ್ನ ಭಕುತಿಯ ಪಥದಿ ತಿಳಿವುದು ಮುಕುತಿಕಾಮುಕನು || ೧೧ ||

ಉತ್ತಮದ ಗುರುವೆಂದ ಪರಿಯಲಿ
ಚಿತ್ತ ನಾರಾಧಿಸುವದೆನ್ನನು
ಮತ್ತೆ ಹೃದಯದಲನಲ ಪ್ರತಿಮೆಯಲಾ ವಿವಸ್ವನಲಿ ||
ಯುಕ್ತ ಸಾಲಗ್ರಾಮ ಶಿಲೆಯಂ
ಉಕ್ತದೊಳಗಾಲಸ್ಯವಿಲ್ಲದೆ
ಭಕ್ತಿಯಿಂ ಪೂಜೆಯನು ಮಾಳ್ಪದು ಸಕಲ ಕಾಲದಲಿ || ೧೨ ||

ಮೊದಲು ವಿಪ್ರರು ಭಜಿಸುವುದು ಕೇ
ಳುದಯಕಾಲ ಸ್ನಾನವನು ಮಾ
ಳ್ಪದು ಶರೀರವು ಶುದ್ಧಿಗೋಸುಗ ವೇದ ಮಂತ್ರದಲಿ ||
ವಿದಿತ ತಂತ್ರವು ಸಹಿತ ತುಳಸೀ
ಮೊದಲಲುಳ್ಳಾ ಮುಖ್ಯ ಮೃತ್ತಿಕೆ
ಯುವನು ಶಾಸ್ತ್ರದಿ ತಂದು ಮಂತ್ರದಿ ನದಿಯಲೆಸಗುವುದು || ೧೩ ||

ಮಾಡಿ ಸಂಧ್ಯಾರ್ಘ್ಯಾದಿ ನಿತ್ಯವ
ನೋಡಿ ತದ್ವಿಧಿ ತಪ್ಪದಂದದಿ
ಮಾಡುವುದು ಸಂಕಲ್ಪಪೂರ್ವಕ ಕರ್ಮ ಸಿದ್ಧಿಸಲು ||
ಜೋಡಿಯಿಲ್ಲದೆ ಗುರುವ ಪೂಜೆಯ
ಮಾಡುವುದು ಮೊದಲೆನ್ನನಲ್ಲಿಯೆ
ಕೂಡಿ ಮದ್ಬುದ್ಧಿಯಲಿ ಪೂಜಕನಾದ ನರನೆಂದ || ೧೪ ||

ಜಲವು ಮಾತ್ರವನಿತ್ತಡಿನಿತೆನೆ
ಸುಲಭ ಗಂಧಸುಪುಷ್ಪ ಭಕ್ಷ್ಯದ
ಲೊಲಿದು ಭಕ್ತರು ತನ್ನ ಭಜಿಸಿದ ಫಲಕೆ ಕಡೆಯುಂಟೆ ||
ಸಲುವರೆನ್ನಯ ಪರಕೆ ಪರದಲಿ
ಕಳೆವರಿಲ್ಲಿಯು ಸಕಲ ದುಃಖವ
ತಳೆವಡಿನ್ನುಸುರುವೆನು ಪೂಜಾಕ್ರಮವ ಕೇಳೆಂದ || ೧೯

ಮೊದಲು ಪೂಜಾ ದ್ರವ್ಯವೆಲ್ಲವ
ನೊದವಿಸಿರಿಸಿದ ಮೇಲೆ ಮೂರುತಿ
ಯಿದಿರ ಚೀರಾಜಿನ ಕುಶಾಸನವಿಕ್ಕಿ ಕುಳಿತಲ್ಲಿ ||
ಹೃದಯ ಶುದ್ಧಿಯ ರೇಚಕಾದಿಯ
ರೊದವಿಯಲ್ಲಿಂ ನ್ಯಾಸವನು ಮಾ
ಳ್ಪುದು ಬಹಿರ್ಮಾತೃಕೆಯನಂತರ್ಮಾತೃಕೆಯನೆಂದ || ೨೦ ||

ಕೇಶವಾದಿ ಸಮಸ್ತ ದೇವರ
ನ್ಯಾಸತತ್ತನ್ಮೂರ್ತಿ ಪಂಜರ
ನ್ಯಾಸವನು ತನ್ನಲ್ಲಿಯುದನೇ ಬಳಿಕ ಮೂರ್ತಿಯಲಿ ||
ನ್ಯಾಸವನುದಿನ ಮಾಳ್ಪುದುದಕದ
ನಿೂಸಲಿನ ಕಲಶವನೆಡಕೆ ಬಲ
ಕಾ ಸಮಸ್ತ ಸುಗಂಧ ಪುಷ್ಪಾಕ್ಷತೆಯನಿರಿಸುವುದು || ೨೧ ||

ನಾಲ್ಕು ಪಾತ್ರಿಪದೊಂದೆಡಲ್ಲಿರ
ಬೇಕುದರ್ಘ್ಯಾರ್ಘ್ಯದಲಿ ಮೂರರ
ಜೋಕೆ ಹಸ್ತೋದಕಕೆ ಮಧುಪರ್ಕಾಚಮನಕೆಂದು ||
ತಾ ಕುಳಿತು ಹೃತ್ಕಮಲ ಮಧ್ಯದ
ಲೇಕನದ್ವಯ ಚಿನುಮಯನ ಜೀ
ವಾಕೃತದ ದೇಹದಲಿ ಧ್ಯಾನವ ಮಾಳ್ಪುದಿದಿರಿದಡೆ || ೨೨ ||

ದೇಹದಲಿ ಪರಿಪೂರ್ಣ ವಸ್ತುವೆ
ಸೋಹವೆಂದರಿದಾತ್ಮನನಯೋ
ಪಾಹಿಸುವುದಿದಿರು ಪ್ರತಿಮೆಯಲಿ ಮತ್ಸರಾಯಣನು ||
ಊಹಿತಾಸನ ಸ್ವಾಗತೋಕ್ತಿಯು
ಪಾಹ ಪಾದ್ಯಾರ್ಘ್ಯಾಚಮನ ಸು
ಸ್ನೇಹ ಮಜ್ಜನ ವಸ್ತ್ರವುಪವೀತೋತ್ತರೀಯಕದಿ || ೨೩ ||

ಆಭರಣ ಕರ್ಪೂರ ಚಂದನ
ವೈಭವಾಗರು ಶೀರ ಕುಂಕುಮ
ಶೋಭಿತೋತ್ತಮ ಪುಷ್ಪವಾಮೋದಾಕ್ಷತೆಗಳಿಂದ ||
ತಾ ಭಕುತಿಯಿಂದಾವರಣೆ ದಶ
ಲೇಖಿ ತನ್ಮಂತ್ರಾದಿ ನಾಮದಿ
ಶೋಭನೋತ್ತಮ ಧೂಪ ಗೋಘೃತದೀಪವೆಸಗುವುದು || ೨೪ ||

ತನ್ನ ಶಕ್ತಿಗೆ ತಕ್ಕ ಪಾತ್ರ ಸು
ವರ್ಣ ಮೊದಲಿಲ್ಲದಡೆ ಕದಳೀ
ಪರ್ಣ ಕಡೆಯೆನೆ ಭಕ್ಷ್ಯ ನಾನಾಭೋಜ್ಯ ದಧಿ ಘೃತವು ||
ಚಿನ್ನ ಸಕ್ಕರೆ ಪಾಲು ಲಡ್ಡುಕ
ವೆಣ್ಣೆ ಹೂರಿಗೆ ಪರಡಿ ಪಾಯಸ
ಉನ್ನತದ ಫಲ ಪಕ್ವ ಶಾಕವ[1]ನರ್ಪಿ[1]ಸುವುದೊಲಿದು || ೨೫ ||

ವಿಸ್ತರದಿ ನೈವೇದ್ಯವನು ಮುಂ
ದಿತ್ತು ತುಳಸೀ ದಳದ ಜಲದಿಂ
ವಸ್ತುವೇ ಬ್ರಹ್ಮಾರ್ಪಣವುಯೆಂದೆಂಬುದನು ದಿನವೂ ||
ಇತ್ತಡಾ ನೈವೇದ್ಯ ತನಗೇ
ತುತ್ತುಗೊಳಲಿಕ್ಕೊಳಿವುದೆನ್ನಯ
ಭಕ್ತರಿಗೆ ಬಹುದೊಂದೆಯುತ್ತಮ ಶ್ರದ್ಧೆ ಕೇಳೆಂದ || ೨೬ ||

---

1 ನೊಪ್ಪಿ (ಖ)

ಭೋಜನಾಧಿಕನಲ್ಲ ಭಕುತಿಯ
ಭಾಜನಾರ್ಥಿಕನೀಶ್ವರನು ವಿರ
ಸೋಜೆಯಿಂ ನೈವೇದ್ಯವಿಟ್ಟು ವಿಧಾನ ಮಂತ್ರದಲಿ ||
ತೇಜವಾದಗ್ನಿಯಲಿ ಹೋಮವ
ನಾ ಜನಾರ್ದನ ತುಷ್ಟಿಯೆನಲೊಲಿ
ದೋಜೆ ತಪ್ಪದಗತ್ಯದುಕ್ತ ಕ್ರಮದಿ ಮಾಡುವುದು || ೨೭ ||

ನಿತ್ಯ ನೈಮಿತ್ತಾಗ್ನಿಯೆಂದೆರ
ಡುಕ್ತವಗ್ನಿಯು ಕುಂಡವಿಧಿ ನೈ
ಮಿತ್ತಿ ನೌಪಾಸನವೆ ತಾ ನಿತ್ಯಾಗ್ನಿಯೆನಿಸುವುದು ||
ಇತ್ತೆರದಲಂದಗ್ನಿ ಮುಖದಲಿ
ತಪ್ತಜಾಂಬೂನ ಸ್ವರೂಪನ
ಭಕ್ತಿಯಿಂ ಮಂತ್ರೋಕ್ತದಿಂದಾವಾಹಿಸುವುದಲ್ಲೀ || ೨೮ ||

ಮೂಲಮಂತ್ರದಿ ಹವಿ ಘೃತಾದಿಯ
ಬೇಳಿ ತನ್ನನೆಯಲ್ಲಿ ಭಾವಿಸಿ
ಮೇಲೆ ತಚ್ಛೇಷದಲಿ ಪಾರುಷದರಿಗೆ ಬಲಿಯಿತ್ತು ||
ಕೋಳುವೋಗದೆ ಹೋಮಶೇಷದ
ಶೀಲವಿಧಿಯನು ಮುಗಿದು ತನ್ನುವ
ನಾಲಿಸುತ್ತವೆ ತನ್ನಿದಿರು ಶತಜಪವ ಮಾಡುವುದು || ೨೯ ||

ಆ ನಿವೇದ್ಯವ ಬಿಡಿಸಿ ಮುಖವಾ
ಸಾನು ತಾಂಬೂಲಗಳನರ್ಪಿಸಿ
ತಾನು ನೀರಾಜನದ ಕರ್ಪೂರದಾರತಿಯನೆತ್ತಿ ||
ದಾನವಾಂತಕನೆನಿಪೆನಗೆ ಸ
ನ್ಮಾನಿಸುತ್ತವೆ ಮಂತ್ರ ಪುಷ್ಪಕ
ತಾನು ಮಾಳ್ಪುದು ನೃತ್ಯಗೀತ ಸ್ತೋತ್ರಪಾಠವನು || ೩೦ ||

ಅಡಿಗಡಿಗೆ ದಂಡಪ್ರಣಾಮವ
ನೊಡಲನವನಿಗೆ ನೀಡಿ ನಮಿಸುವ
ದೊಡೆಯ ವಿಶ್ವಕುಟುಂಬಿ ಭಕ್ತಾಭೀಷ್ಟದಾಯಕನೆ ||
ಮೃಡಮುಖಾಮರವಂದ್ಯ ರಾಘವ
ಕಡುಗರುಣಿ ಸರ್ವೇಶ ಶಾಶ್ವತ
ಜಡನು ತಾನೆನ್ನುವನು ನೀನುದ್ಧರಿಸಿ ಸಲಹೆನುತ || ೩೧ ||

ಎದ್ದು ಮತ್ತಿದಿರಿನಲಿ ಶಿರದಲಿ
ಬದ್ಧಿಸುತ ಕರಯುಗವನೆಲೆ ಕರು
ಣಾದ್ರ್ರನಯನ ಮುಕುಂದ ಕೇಶವ ವಿಷ್ಣು ವರದೇಶ ||
ಅದ್ವಯಾಚ್ಯುತ ರಾಮ ಮಾಧವ
ಬುದ್ಧಿ ಸಾಕ್ಷಿಯೆ ಪಾಲಿಸೆನುತವೆ
ಗದ್ಗದಾಕ್ಷರದಿಂದ ಹೊಗಳುವುದೆನ್ನನೀಕ್ಷಿಸುತ || ೩೨ ||

ಕರದಿ ನ್ನಂಘ್ರಿಯನು [1]ನಿ[1]ನ್ನಯ
ಶಿರದಿ ಧರಿಸೀಪರಿಯ ಭಾವಿಸಿ
ಶರಣುವೊಕ್ಕೆನು ನೀನೆ ಗತಿಮತಿ ತಂದೆ ತಾಯಿಗಳು ||
ವರ ಸಖಿಪ್ರಿಯ ಬಂಧು ಗುರುಧನ
ಹಿರಿಯ ಸೌಖ್ಯವು ನೀನೆ ನನ್ನನು
ಹೊರೆಯನಾಥನ ಘೋರ ಸಂಸಾರಾಬ್ಧಿ ಪತಿತನನು || ೩೩ ||

ಕರಚರಣ ವಾಕ್ಕರ್ಮಕಾಯಕ
ನಿರುತ ದೃಗು ತ್ವಗ್ಜಿಂಹೆ ನಾಸಿಕ
ವರ ರಸನೆ ಗುದ ಗುಹ್ಯ ವಾಯುಮನಸ್ಸು ಸಹ ಬುದ್ಧೀ ||
ಪರಿಪರಿಯಹಂಕಾರ ಚಿತ್ತಾ
ಚರಿತೆದಪರಾಧದ ಹಿತಾಹಿತ
ದೆರಡದೆಲ್ಲಾ ಕ್ಷಮಿಸು ಕರುಣಾನಿಧಿಯೆ ರಘುನಾಥ || ೩೪ ||

---

1 ತ (ಖ)

ಸರ್ವ ರೂಪನೆ ಸರ್ವ ಚೇತನ
ಸರ್ವವಂದ್ಯನೆ ಸರ್ವಸಾಕ್ಷಿಯೆ
ಸರ್ವಕರ್ತೃವೆ ಸರ್ವಭರ್ತೃವೆ ಸರ್ವ ಪಾವನನೆ ||
ಸರ್ವಭಾರವು ನಿನ್ನ ದೆನಗೇ
ಸುರ್ವಿ ಮೊದಲಹ ಭೂತ ನೀನೇ
ಸರ್ವಥಾ ನಾ ಬೇರದೆಂಬೀ ಭ್ರಮೆಯದೇನಿಲ್ಲ || ೩೫ ||

ಎದ್ದು ಬಿದ್ದಡಿಗಡಿಗೆ ನೆರೆ ನಿಂ
ದಿದ್ದು ತನ್ನಿದಿರಿನಲಿ ವಂದಿಸಿ
ಗದ್ಗದಾಕ್ಷರ ಗಳದಿ ಹೊಗಳುತಲುಕ್ತ ವಚನದಲಿ ||
ಭದ್ರಭಾವದಲೆನ್ನಲೈಕ್ಯದ
ಸಿದ್ಧಿಯಿಂದಾನಂದ ನಯನ ಜ
ಲದ್ದದೇಹದಲಿರಲದೆನಗತಿ ತುಷ್ಟಿಯಹ ಭಕುತಿ || ೩೬ ||

ಶಿರದ ಮೇಲೆನ್ನ ಪ್ರಸಾದವ
ಧರಿಸಿ ಪೂಜಾಕರ್ಮವನು ಮಾ
ಚರಣೆಕರ್ಪಿಸಿ ತನ್ನಲುದ್ಧಾರಿಸಿಕೊಳುತ್ತೆನ್ನ ||
ಪರಮ ಭಕ್ತರು ಸಹ ಮದರ್ಪಿತ
ದುರುತರದ ನೈವೇದ್ಯವುಂಬುತ
ಹಿರಿದು ಭೂತದಿ ದಯವ ಮಾಡುತ್ತಿಪ್ಪುದನವರತ || ೩೭ ||

ಈ ಪರಿಯಲುಕ್ತ ಪ್ರಕಾರದ
ಲಾಪರಿಯ ಪೂಜಿಸುತಿಹಾ ಶ್ರ
ದ್ಧಾ ಪರಾಯಣರಿಂಗೆ ಯಿಹ ಪರದಲ್ಲಿ ಮತ್ಕೃಪೆಯಿಂ ||
ದೀಪಿಸುವ ಸಂಸಿದ್ಧಿಯೆಲ್ಲವ
ತಾ ಪಡೆದು ಕಡೆಯಲ್ಲಿ ನನ್ನಯ
ರೂಪವೈದುವರೇಕೆ ಸಂಶಯವೆಂದನಾ ರಾಮ || ೩೮ ||

ಮಾಡುವುದು ಪೂಜೆಗಳನನುದಿನ
ಮಾಡಲಾಂದಡೀಕ್ಷಿಸುವುದದು
ಕೂಡದಿದ್ದಡೆ ಬಿಡದೆ ಜಪಿಸುವುದೆನ್ನ ನಾಮವನು ॥
ಮಾಡಿಸುವುದರ್ಚನೆಯನನುದಿನ
ಜೋಡಿಹೋಗದೆ ಸಕಲ ಕಾಲವು
ಪಾಡುವುದು ಸಶ್ರದ್ಧೆಯಲಿ ತನ್ನುವನೆ ಕೇಳೆಂದ ॥ ೩೯ ॥

ಇದು ರಹಸ್ಯದ ಸಾರ ಪಾವನ
ವಿದು ಸನಾತನ ಶಾಸ್ತ್ರ ಸರ್ವಾ
ಭ್ಯುದಯವನು ನಿನಗೆಂದೆನೆಲೆ ಸುಚರಿತ್ರ ಸೌಮಿತ್ರ ॥
ಇದನು ಪಠಿಸಲಜಸ್ರ ಕೇಳಿದ
ಗೊದಗುಗೆನ್ನನು ಪೂಜಿಸಿದ ಫಲ
ಸದರ ತನ್ನಯ ಭಕುತಿ ಮಾಳ್ಪಡೆ ಸರ್ವರಿಂಗೆಂದ ॥ ೪೦ ॥

ಕಾಂತೆ ಕೇಳೀ ಪರಿಯಲಾ ಶ್ರೀ
ಕಾಂತ ರಾಮನ ಭಕುತಿ ಮಾರ್ಗ
ಭ್ಯಾಂತರದ ಸತ್ಕ್ರಿಯೆಯನತಿ ಕರುಣದಲಿ ನೆರೆ ತನ್ನ ॥
ಚಿಂತಕರಿಗರಿವಂತೆ ಪೇಳ್ದನ
ನಂತನಂಶದ ಲಕ್ಷ್ಮಣಗೆ ಮಗು
ಳಂತೆ ದುಃಖವ ತೋರಿದನು ಪ್ರಾಕೃತರ ಪರಿಯಲ್ಲಿ ॥ ೪೧ ॥

ಎತ್ತ ಹೋದೌ ಸೀತೆ ಹಾ ಯೆನು
ತತ್ತು ನಿದ್ದೆಯು ಬಾರದಂತಿರ
ಲಿತ್ತ ಕಿಷ್ಕಿಂಧೆಯಲಿ ಯಾಸಮಯದಲಿ ವೊಂದುದಿನ ॥
ಯುಕ್ತಿವಂತನು ಹನುಮ ಕಪಿಗಳ
ವೊತ್ತದಲಿ ನಾಯಕ ಸುವೀರನು
ವೃತ್ತನೇಕಾಂತದಲಿ ಸುಗ್ರೀವಾಂಕಗಿಂತೆಂದ ॥ ೪೨ ॥

ಕೇಳರಸ ತಮೆಂತವ ಕಂಡುದ
ಹೇಳುವೆನು ರಾಘವನ ದೆಸೆಯಿಂ
ಮೇಳವಿಸಿತೀ ಭಾಗ್ಯವಾತನು ಮಾಡಿದುಪಕೃತಿಯು ||
ಖೂಳತನದಲಿ ಮರೆದಯೆಂಬಂ
ತಾಲಿಸಲು ಕಾಣುತದೆ ಪರಮ ಕೃ
ಪಾಳುವಿನಲಿ ಕೃತಘ್ನನಾದಡೆ ಕೆಟ್ಟೆ ನೀನೆಂದ || ೪೨ ||

ಮೂರು ಲೋಕದಲಧಿಕ ವಿಶ್ರುತ
ವೀರ ಬಾಲಿಯು ಕೊಂದ ನಿನಗಾ
ರರಿಯೇರಿ ರಾಜಸಿಂಹಾಸನದ ವೈಭವಕೆ ||
ಸೇರಿಸಿದನತಿ ದುರ್ಲಭದ ವರ
ತಾರೆ ಹೆಂಡತಿಯಾದಳಿನಿತುಪ
ಕಾರವರಿಯದೆ ಮರೆದರಾ ಶ್ರೀ ರಾಮಚಂದ್ರನನು || ೪೪ ||

ಕೊಟ್ಟ ಶಪಥವ ಸೀತೆಯೊಯ್ದನ
ನೆಟ್ಟನರಸಿದು ಕೊಲುವೆನೆಂದದ
ಲೊಟ್ಟವಿಸಿದೆಯಲಾ ಕೃತಘ್ನರದಾರು ನಿನ್ನಂತೆ ||
ಮುಟ್ಟೆ ಮುನಿದಡೆ ರಾಮ ಬಾಲಿಯ
ಬಟ್ಟೆ ನಿನಗಹುದೆನಲು ನೆರೆ ಕಂ
ಗೆಟ್ಟು ಹನುಮನ ಮಾತ ಕೇಳ್ದಿಂತೆಂದ ಸುಗ್ರೀವ || ೪೫ ||

ಸತ್ಯವನು ನೀನೆಂವೆ ತನ್ನೆದು
ಮತ್ತತನವಿನ್ನೀಗ ಬೇಗದಿ
ಸುತ್ತ ಸಪ್ತದ್ವೀಪದೊಳಗಿಹ ವಾನರರ ಪಡೆಯ ||
ಮತ್ತೆ ತನ್ನಾಜ್ಞೆಯಲಿ ಬರಿಸಲು
ಹತ್ತು ಸಾವಿರವಟ್ಟು ದೂತರ
ನಿತ್ತಲೆಲ್ಲರ ಬರಲದೊಂದೇ ಪಕ್ಷದೊಳಗೆಂದ || ೪೬ ||

ಪಕ್ಷದಿಂದೊಳಗಲ್ಲದೇ ಮೋ
ಲಿಕ್ಕುದೊಂದರೆ ನಿಮಿಷ ತಡೆದಾ
ಮರ್ಕಟರದಾರಾಗಡೆನ್ನಲಿ ಪೊದಗರಿಹರವರು ||
ತಕ್ಕವರ ಕಳುಹೆಂದು ಹನುಮಗೆ
ಹೊಕ್ಕನಾ ನಿಜಗೃಹವನಿತ್ತಲು
ದಿಕ್ಕು ದಿಕ್ಕಿಗೆ ವಾಯುಸುತರಹ ಹರಿ ಹರಿಯಬಿಟ್ಟ || ೪೭ ||

ವಾಯುವೇಗದಿ ನಡೆವರನು ಸ
ತ್ವಾಯುತರನಪ್ರತಿಮ ಪರ್ವತ
ಕಾಯ ಸನ್ನಿಭ ವೀರ ಕಪಿಗಳ ಕರೆದು ಹನುಮಂತ ||
ಬಾಯಮಾತಿನಲುಡುಗೊರೆಯನು
ತ್ಸಾಯವನು ನೆರೆಮಾಡಿ ಕಪಿಗಳ
ರಾಯನಾಜ್ಞೆಯೆನುತ್ತ ಕಳುಹಿದನಾ ಹರೀಶ್ವರನು || ೪೮ ||

ದೇವಗಣನೆಯ ಸಂಧಿ ಪದಗಳು
ದೆವರೊಳು ದೇವೇಂದ್ರರೊಡನೆ ಗು
ಣಾವಳಿಗಳಿದ್ದಂತಿದನು ನೆರೆ ಭಕುತಿಯಿಂದೊಲಿದು ||
ಆವನೋದುವ ಕೇಳುವನು ರಾ
ಜೀವಲೋಚನನವರ ಕರುಣದಿ
ಕಾವ ಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹನನವರತ || ೪೯ ||

ಅಂತು ಸಂಧಿ ೩೩ ಕ್ಕೆ ಪದ ೧೪೮೪ ಕ್ಕೆ

ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ



|| ಶ್ರೀ ರಾಮಚಂದ್ರಾಯ ನಮಃ ||



# ಮೂವತ್ನಾಲ್ಕನೆಯ ಸಂಧಿ

## ಕಪಿಪಡೆ ಸಹಿತ ಸುಗ್ರೀವ ರಾಮನ ಬಳಿ ಬಂದದ್ದು

ಸೂಚನೆ || ಬಂದುರಾಘವನಾಜ್ಞೆಯಲಿ ಕಿ
ಷ್ಕಿಂದಿಗಾ ಸುಗ್ರೀವ ಮುಖ್ಯ ಕ
ಪೀಂದ್ರರನು ಕರೆದೊಯ್ದನಗ್ರಜನೆಡೆಗೆ ಸೌಮಿತ್ರ ||

ಪದ || ಚಾರು ನಯನಾಂಬುರುಹ ವದನದ
ಹಾರಕೌಸ್ತುಭ ಕಿರಿಟ ಕುಂಡಲ
ಪೇರುರದಿ ವನಮಾಲೆ ರಂಜಿಪ ವಾರಿಜದ ಮನೆಯ ||
ಸಾರಿ ನೆನೆವರ ಹೊರೆವ ಭಕ್ತರ
ಭೂರಿ ಭಾಗ್ಯೋದಯದ ಕರುಣಾ
ಸಾಗರನೆ ಮರೆವೊಕ್ಕೆ ರಾಮನೆ ಸಲಹು ಕರುಣದಲಿ || ೧ ||

ಕೇಳು ಪಾರ್ವತಿ ರಾಮನಾ ಗಿರಿ
ಶೈಲಮಣಿ ಗುಹೆಯಲ್ಲಿರಲು ನರ
ಲೀಲೆಯಿಂ ರಾತ್ರಿಯಲಿ ಸೀತಾ ವಿರಹಶೋಕದಲಿ ||
ಹೇಳಿದನು ಲಕ್ಷ್ಮಣಗೆ ನೋಡಾ
ಬಾಲೆ ಸೀತೆಯನೆಳೆದು ರಾಕ್ಷಸ
ಖೂಳನಗಲಿಸಿಯೊಯ್ದನಕಟಕಟೇವೆನಿದೆಕೆಂದ || ೨ ||

ಸತ್ತಳೋ ಮೋಣಾಳಿದಳೋ ತ
ನ್ನೆತ್ತಮಾಂಗನೆಯೆಂಬ ನಿಶ್ಚಯ
ವೆತ್ತಲಿಲ್ಲದೆ ಹೋಯಿತೆನಗೊಬ್ಬೆಂದನತಿ ಪ್ರಿಯನು ॥
ಎತ್ತಲಾದರು ಜೀವಿಸಿದಳೆಂ
ದುತ್ತಮ್ಮನು ಹೇಳಿದನು ನಿಶ್ಚಯ
ವೆತ್ತಲಿಹಳೆಂದರಿಯಬಾರದಲಾ ಶಿವಾಯೆಂದ ॥ ೩ ॥

ಜೀವಿಸೆಲ್ಲಿಹಳೆಂದು ಹೇಳಿದ
ಡಾಪದುಸ್ಸಹದಲ್ಲಿರಲಿ ನಾ
ದೇವಿಯೆನುತವೆಡಬ್ಧಿ ಮಧ್ಯದ ಸುಧೆಯ ಕಲಶವನು ॥
ದೇವತೆಗಳಾಹರಿಸಿದಂದದಿ
ಹಾವುಗಳ ಹದ್ದೊಯ್ದದ ಪರಿಯಲಿ
ಜೀವ ಸಹ ಸೇದುವೆನು ದನುಜರನೆಂದನಾ ರಾಮ ॥ ೪ ॥

ತಮ್ಮ ಕೇಳೈ ತನ್ನ ಭಾಷೆಯ
ನೆಮ್ಮಸಿಯೊಯ್ದವನ ಕುಲಸಹ
ನಿರ್ಮೂಲವ ಮಾಡುವೆನು ತತ್ಸುತಪೌತ್ರರನು ದಹಿಸಿ ॥
ಸಮ್ಮುಖದಿ ಭಸುಮವನೆ ಮಾಡುವೆ
ಯೊಮ್ಮೆಯರಸದೆ ಹೋಯ್ತಲಾ ಹಾ
ರಮ್ಮಣಿಯೆ ರೂಪದ ಕಣಿಯೆ ವರಮಣಿಯೆ ಹಾ ಯೆಂದ ॥ ೫ ॥

ಇಂದುಮುಖಿ ಹಾ ದಿವಿಜವೈರಿಯ
ಮಂದಿರದಲಿಹ ವಿಧಿಯೆ ನಿನಗೆ
ನ್ನಂದವೀಕ್ಷಿಸದೆಂತೊ ದೇಹವ ಧರಿಸಿಹೆಯೊ ತನಗೆ ॥
ಚಂದ್ರ ಕರ ರವಿಕಿರಣದಂಶಿದೆ
ಮಂದ ಮಾರುತ ಸುಡುತ ಬೀಸುವ
ನಿಂದಿದಾರಿಂಗುಸುರುವೆನು ತಾನೆಂದನಾ ರಾಮ ॥ ೬ ॥

ಶಶಿಂಪಿ ಸಿಸ್ನಯ ಕಿರಣ ಕರದಲಿ
ವಸುಧೆ ಘನೆಯನು ಸೋಂಕನಿನ್ನಾ
ದಸುಮಯಂ ಸೋಂಕಿದಡೆ ಶೀತಳವಹುದು ತನಗೆಂದ ||
ವನಗೆ ಸುಗ್ರೀವಾಂಕ ಬಂದೆ
ನ್ನೊಸನವೇ ತನ್ನಳಲ ನೋಡನು
ವಸುಧಾಮಯನ ಪಾಡಿಸನೆ ಯಾರಿದ್ದೇನು ಫಲವೆಂದ || ೭ ||

ಏನು ಸುಗ್ರೀವಂಗೆ ನನ್ನಿಂ
ದಾದುಕೆಲ್ಸದ ಕಾರ್ಯ ರಾಜ್ಯಾ
ಧೀನನಾಗಿಯೆ ತಾ ನಯದಿ ನಾರಿಯರೊಡನೆ ನಿಜಪುರದಿ[1] ||
[illegible]ಸಕ್ತನಾಗಿ
[illegible] ಗಣಿಸದೆ ತನ್ನನಿತ್ತಲು
[illegible]ವದು ಬಾರಬಂತೆಲೆ ಶರದು ಋತುವೆಂದ || ೮ ||

ಸೀತೆಯರಸಲು ಬಹೆನೆನುತ್ತವೆ
ಮಾತ ಕೊಟ್ಟು ಕೃತಘ್ನನಾದನು
ಘಾತಕನು ನೀಕ್ಷ್ಣವೆ ಕೊಲುವೆನು ಬಾಲಿಯಂದದಲಿ ||
ಆತನುನ್ನತ ಬಂಧುವರ್ಗವು
ಖ್ಯಾತ ಸಹವಾಗೆಂದೆನುತ ರೋ
ಷಾತಿಶಯದಿಂ ರಾಮನಿರೆ ಕಂಡೆಂದ ಲಕ್ಷ್ಮಣನು || ೯ ||

ಏಕೆ ನೀನೆಲಿ ದೇವದುಷ್ಟನು
ಆ ಕೃತಘ್ನನ ನನಗೆ ನೇಮಿಸು
ಕಾಕಿಯರಿಗೆ ಕಡಿದವನ ಬಡಿಸುವೆನೆನುತ್ತಿದ್ದು ||
ಆ ಪಿಡುಗ ತೂಣೀರ ಸಶರಾ
ನೀಕವನು ಕೊಂಡೊಯ್ಯುತಿರುತಿರೆ
ನಾಕವಂದ್ಯನು ಕಂಡು ಕರೆದಿಂತೆಂದನನುಜಂಗೆ || ೧೦ ||

1 ತನಾಪುರದಿ ನಾರಿಯರೊಡನೆ ಪುರದಿ (ಖ)

ಮಗನೆ ಸುಗ್ರೀವನನು ಕೊಲದಿರು
ಬಗೆಯಲಂಜಿಸು ಸಖಿಯುಲಾತನ
ಗೊಗ:ಮಿಗೆಯು ಕೋಪದಲಿ ನುಡಿ ಬಾಲಿಯ ಪರಿಯಲಸುವ ||
ತೆಗೆವ ರಾಘವನೆನ್ನುವಾತನ
ಬಗೆಯನೆಲ್ಲವ ತಿಳಿದು ಬೇಗದಿ
ಮಗುಳೆ ಬಾ ಬಳಿಕೆಲ್ಲ ಯತ್ನವ ಕಾಣಬಹುದೆಂದ || ೧೧ ||

ಎಂದಡಾಗಲೆನುತ್ತ ಲಕ್ಷ್ಮಣ
ನಂದು ವೀರಾವೇಷ ವಿಕ್ರಮು
ದಿಂದ ಧನುಶರ ಸಹಿತಲತಿ ವೇಗದಲಿ ನಡೆದಾಗ ||
ಬಂದನಗ್ರಜನಾಜ್ಞೆಯಲಿ ಕಿ
ಷಿಂದಿಗಾ ಕಪಿಕಟಕವೆಲ್ಲವ
ನೊಂದು ನಿಮಿಷದಿ ಸುಟ್ಟುರುಹುವತ್ಯುಗ್ರ ಕೋಪದಲಿ || ೧೨ ||

ಧಿಟವೆ ರಾಮಗೆ ಗಿರಿಜೆ ಕೇಳಿದು
ನಟನೆ ಮಾತ್ರವಲಾ ವಿಚಾರಿಸೆ
ಪಟುತರದ ಸರ್ವಜ್ಞ ಸುಖಮಯ ನಿತ್ಯ ಲಕ್ಷ್ಮೀಶ ||
ಧಿಟದಲಾತ್ಮಜ್ಞಾನ ನಯನೀ
ಕುಟಿಲ ಮಾನವನಂತೆ ಶೋಕಿಸಿ
ಸಟೆಯ:ಲೆಂಬನು ಸೀತೆ ಹಾ ತನ್ನಗಲಿದ್ಯೆ ಯೆನುತ || ೧೩ ||

ದೇಹ ಬುದ್ಧ್ಯಾದಿಗಳ ಮೀರಿದ
ಜೀಹವೂ ಯೂ ಕಾರ್ಯವಿಲ್ಲದ
ಮೋಹ ರಾಗಾದಿಗಳ ಹೊದ್ದದ ಶುದ್ಧ ಚಿನುಮಯಗೆ ||
ಬಾಹಿರದ ಸುಖದುಃಖವೆಂತ ನಿ
ರೀಹನದ್ವಯನೇಕ ನಿಷ್ಪ್ರ
ತ್ಯೂಹ ಪರಮಾನಂದ ಪೂರ್ಣ ಪರಾತ್ಮರೂಪಿನಲಿ || ೧೪ ||

ಅಜನು ಬೇಡಿದ ಕಾರ್ಯ ಸಿದ್ಧಿಗೆ
ನಿಜವ ಮಾಡಲು ಮುನ್ನ ದಶರಥ
ಭಜಿಸಿದದ ನೆರೆ ಸಲಿಸಲಾಗಾಮಿಕದ ಕಲಿಯುಗದ ||
ಮಜಡರಿಗೆ ಸುಚರಿತ್ರ ಕಥೆಯಿಂ
ಬ್ರಜಿನ ಪರಿಹಾರಾರ್ಥವಾಗಿಯೆ
ಭುಜವೆಂಡಾಂಪೆಸೆವ ನರನಾಗಿರ್ದನಾ ರಾಮ || ೧೫ ||

ನೀತಿ ನಡೆನುಡಿಗಳಿಗೆ ತೋರುವ
ನೋತು ಕಾಮಕ್ರೋಧ ಲೋಭಾ
ವ್ರಾತ ಮೋಹಿಯುವೋಲು ತದ್ವ್ಯವಹಾರ ವರ್ತನೆಗೆ ||
ಆತು ತತ್ಕಾಲೋಚಿತಾಂಗವ
ಮಾತುಗುಣ ಕರಣಂಗಳಿಂ ಗಿರಿ
ಜಾತೆ ಕೇಳ್ಳೆ ಮಾನವಾಕೃತಿವಿಡಿದು ಪರಮಾತ್ಮ || ೧೬ ||

ತಾನು ಗುಣರಹಿತಾತ್ಮನಾದಡು
ನಾನವಿಧದನುರಕ್ತನಂತಿಹ
ಸ್ವಾನುಭವ ವಿಜ್ಞಾನ ಶಕ್ತಿಜ್ಞಾನ ಸಾಕ್ಷಿಕನು ||
ಈ ನಿಖಿಳ ಗುಣಲೇಪ ಹೊದ್ದನು
ಮಾನವಾಕೃತಿ ಹೊರದಡೆಯು ಕೇ
ಳ್ಳೆ ನಿರಂಜನ ಶುದ್ಧ ವಿಮಲಾಕಾಶದಂದದಲಿ || ೧೭ ||

ಕೆಲಬರೆಂಬರು ಭಕ್ತಿಯಿಂ ನಿ
ರ್ಮಲರೆನಿಸಿದ ಮಹಾನುಭಾವರು
ಗಳಿತ ವಾಸನರಾದವರು ಸನಕಾದಿ ಯೋಗಿಗಳು ||
ಚಲಿಸದಂತರ್ನಿಷ್ಠೆಯಿಂದವೆ
ಸಲೆ ನಿಧಾನವ ರಾಮ ನಿಜಮೃತಿ
ಗೊಳಗದಲ್ಲದ ವಸ್ತುವಹ ಚಿದ್ಬ್ರಹ್ಮಮಯನೆಂದು || ೧೮ ||

ಲೋಕದನುಸರಣೆಯಲಿ ತೋರಿದ
ಜೋಕನದ್ವಯಸಜನ ಮಾಯಿಕ
ನಾ ಕೃತಿ ಪ್ರತ್ಯಯು ನಿರಾಮಯು ನಿತ್ಯ ನಿರ್ಲೇಪ ||
ಸೋಕಿ ಸೋಕದೆಯಾಡಿ ಚಲಿಸದೆ
ಸಾಕಲೋಕಗ ಜಗದನವ ತಾ
ರಾಕೃತಿಯು ನಟಿಸುವನು ಸಲೆ ಸದ್ರಕ್ಷಣಾರ್ಥದಲಿ || ೧೯ ||

ಕಾಂತೆ ಕೇಳೈ ಭರದಿ ಕಿಷ್ಕಿಂ
ದಾಂತಿಕಕ್ಕೈತಂದ[1] ಲಕ್ಷ್ಮಣ
ನೆಂತ ಕೋಪನು ತೀವ್ರಕೋಪದಿ ನಿಂತು ಗರ್ಜಿಸಲು ||
ಅಂತರಂಗದಿ ನಡುಗಿ ಕಪಿಗಳು
ನೆಂತನನು ಕಾಣುತ್ತ ಕಿಲಿಕಿಲಿ
ಸುಂತೆ ಹಲುದೆರದೇರಿದವು ಪರ್ವತವ ಬೇಗದಲಿ || ೨೦ ||

ಕೊಂಡು ಶಿಲೆ ಪಾದಪಗಳನು ಮುಂ
ಕೊಂಡಿಡುತ ಕಪಿನಿಕರ ಬರೆ ಕಿಡಿ
ಕೆಂಡವಾದವು ಕಂಗಳಾಗಲೆ ನೋಡಿ ಲಕ್ಷ್ಮಣಗೆ ||
ಭಂಡರಾದೆವೆ ಭಾಪೆನುತ ಕೋ
ದಂಡಕೇರಿಸಿ ಶರವನೀಗಳೆ
ದಿಂಡುದರಿವೆನು ವಾನರರ ಮೂಲವನು ಸಹಿತೆಂದ || ೨೧ ||

ಅದನು ಕಂಡಂಗದನು ಬೇಗದ
ಲಿದಿರು ಬಂದಾ ಲಕ್ಷಣಂ ಗಾ
ಭ್ಯುದಯ ಬುದ್ಧಿಯಲುಳ್ಳವನು ಕಪಿವೀರರನು ನಿಲಿಸಿ ||
ಸದಮಳನ ಬಳಿಕೈದಿ ಬಿದ್ದನು
ಪದದಿ ದಂಡದವೋಲು ಬಳಿ ಕಂ
ಗದನ ಕರುಣದಲೆತ್ತಿ ತಕ್ಕೈಸಿದನು ಸೌಮಿತ್ರ || ೨೨ ||

---

1 ದು (ಖ)

ಬಾಗಿದ್ದೈಯಂಗದಮವಶ್ಯವು
ಪಾಗಮುವನನು ತಡೆಯದೇನೈ
ಹೋಗಿ ಸುಗ್ರೀವಂಗೆ ಕೋಪದಿ ತನ್ನನೀಯೆಡೆಗೆ ||
ರಾಘವನು ಕಳುಹಿದ್ದ ಬಂದಿಹೆ
ಬಾಗಿಲಲ್ಲಿಂದೆನ್ನೆನಲು ತಲೆ
ವಾಗಿ ಪಂದ್ದೈತಂದನಾ ಸುಗ್ರೀವನಿದ್ದೆಡೆಗೆ || ೨೩ ||

ಭಾಪು ಮರೆದಿರಬೇಡ ಲಕ್ಷ್ಮಣಾ
ಕೋಪತಾಮ್ರಾಕ್ಷದಲಿ ಬಂದಿಹ
ನೀ ಪ್ರಿಯ ಬಾಗಿಲಿಗೆನಲು ಭಯದಿಂದ ಕಂಗೆಟ್ಟು ||
ತಾಪದಲಿ ಮಂತ್ರೀಶನಗ್ಗದ
ನೈಪುಣತೆಯನು ಬಲ್ಲ ಹನುಮನ
ನೋಪಚಾರದಿ ಕರೆದು ನುಡಿದನು ಕಾರ್ಯ ಸಂಗತಿಯ || ೨೪ ||

ಹೋಗಿ ಬೇಗಂಗದ ಸಹಿತ ನೀ
ನಾಗರುವ ಲಕ್ಷ್ಮಣನ ಕೋಪದ
ಬೇಗೆಯನು ತಗ್ಗಿಸುತ ಕರತಾ ಸಂತವಚನದಲಿ ||
ಲೋಗನಾಗದ ವೋಲು ತಾನೆನ
ಲಾಗಲೆಂದು ಹನುಮನೈದಿದ
ನಾಗಪ್ರಯನನ ತಮ್ಮನೆಡೆಗಂಗದನು ಸಹವಾಗಿ || ೨೫ ||

ಬಾಗಿದರು ಲಕ್ಷ್ಮಣಗೆ ವಿನಯದಿ
ಸ್ವಾಗತೋಕ್ತಿಯಲೆಂದನೆಲೆ ಗುಣ
ಸಾಗರನೆ ಚಿತ್ತೈಸಿದ್ದೈ ಭೃತ್ಯಾನುರಾಗದಲಿ ||
ಹೀಗೆ ನೀ ಹೊರಗಿಹರೆ ನಮ್ಮವ
ನಾಗು ಮಾಡಿದ ಕರ್ಮಗಳು ಬೇ
ಕಾಗಿ ಕಾಂಬರೆ ಪುರವಿದಾರದು ನಿಮ್ಮದಲಿ ಯೆಂದ || ೨೬ ||

ಶಂಕಿಸುತ ಸಿಲಲೇಕೆ ಬೇಗೊಳ
ಯಿಂಕೆ ಚಿತ್ತೈಸುವುದು ಕಪಿಗಳು
ಮಂಕುಗಳಲೇ ನಾವು ಬಲ್ಲೆವೆ ನೀತಿಗೀತಿಗಳ ||
ಕಿಂಕರನು ಸುಗ್ರೀವನಾತನ
ಪಂಕಜಾಕ್ಷಿಯರನು ಸಹಿತ ಕಂ
ಡಂಕಿಸಿದ ಕಾರ್ಯವನು ಬಳಿಕಾವಾಚರಿಪೆಯೆಂದ || ೨೭ ||

ಎನುತ ಹಸ್ತವ ಹಿಡಿದು ಭಕುತಿಯು
ಲನುಪಮನನಾ ವಾಯುಪುತ್ರನು
ವಿನಯದಿಂ ಬರುತಿರಲು ಮೆಲ್ಲನೆ ರಾಜಗೃಹಕಾಗಿ ||
ಕನಕಮಯವಟ್ಟಾಲ ಗೋಪುರ
ತೆನೆಯ ಚಿತ್ರರರಚನೆ ಕೊತ್ತಳ
ವಿನುತರೆಂಬಣೆ ಕುದುರೆಗಂಡಿಯ ವಿಭವವನು ಕಂಡ || ೨೮ ||

ಕೋಟಿ ಕೊತ್ತಳನಂಕ ವಜ್ರಕ
ವಾಟ ಬೀಯಗ ಲಾಳ ವಿಂಡಿಗೆ
ನಾಟಕದ ಬಲುಸೂತ್ರ ರಾಟದ ಮಕರ ಬೊಬ್ಬೆಗಳ ||
ಕೋಟೆರದ ಗುಹೆ ಚಿಬುಕ ಡೆಂಕಣಿ
ಮೊಟೆನಿಪ ಕಪಿಯೂಥಪರ ಪರಿ
ದಾಟಿ ವಿಭವವ ಕಂಡು ತಲೆದೂಗುತ್ತ ನಡೆತಂದ || ೨೯ ||

ಸುತ್ತ ರಚನಾಶೋಕೆ ಶೈಲದ
ಚಿತ್ರರಚನೆಗಳಿಂದ ಪುರವು ನೆ
ಗುತ್ತಿರಲು ತೋರಣ ಪತಾಕಾದಿಗಳ ವಿಭವದಲಿ ||
ಅತ್ತಲಂತಃಪುರದಿ ತನ್ನಯ
ಮತ್ತಕಾಶಿನಿ ತಾರೆಗೆಂದನು
ಮತ್ತೆ ತಡೆಯದೆ ಹೋಗಿ ಲಕ್ಷ್ಮಣನಿದಿರುಗೊಳ್ಳೆನುತ || ೩೦ ||

ಸಂದಿಸ್ಯೆ ಲಕ್ಷ್ಮಣನ ಕೋಪವ
ನೆಂದು ಸುಗ್ರೀವನು ಕಳುಹೆ ನಗು
ತಿಂದುಮುಖಿ ನಡುರಾಜಭವನದ ಲಿದಿಪುಬಂದಲ್ಲಿ ||
ಸಿಂದಿರಲು ಸರ್ವಾಭರಣೆ ಸ
ಮ್ಮಂಧ ಮದ ರಕ್ತಾಂತನೇತ್ರದ
ಲೆಂದಳತಿ ವಿನಯದಲಿ ತಾರಾಹಾರೆ ಲಕ್ಷ್ಮಣಗೆ || ೩೧ ||

ಪಾಹಿ ಪಾಲ ಸುಭಕ್ತವತ್ಸಲ
ದೇಹಿಕನೆ ಕಡು ಕೋಪವೇತಕೆ
ದ್ರೋಹಿಯೇ ಸುಗ್ರೀವ ನಿಮ್ಮಯ ಭೃತ್ಯಭೃತ್ಯನಲ ||
ದೇಹಕ್ಕೈದದೆ ವಿನಿತು ದಿನವು ಸ
ಮೂಹ ಶೋಕದಲಿದ್ದ ನಿಮ್ಮಿಂ
ದೀ ಪದದಿ ರಕ್ಷಿಸಿದ ಕಾರಣ ಮನೆಯಲಿಹನೀಗ || ೩೨ ||

ರಕ್ಷಿಸಿದರಿಲಿ ನೀವಿವನ ಕೆಡ
ದಕ್ಷಯದ ಸುಖವಿತ್ತು ಮನೆಯಲಿ
ಸುಕ್ಷ್ಮತನದಿಂ ವಿಷಯಭೋಗದಲಿದ್ದವನೆ ಯಲ್ಲ ||
ದಿಕ್ಕು ದಿಕ್ಕಿಗೆ ಬಲುಬಲಾಧಿಕ
ತಕ್ಕ ಕಪಿಗಳ ಕರೆಯ ಕಳುಹಿದ
ಲೆಕ್ಕದಿಂ ದಶ ಸಾವಿರವನವರಿನ್ನು ಬರಲಿಲ್ಲ || ೩೩ ||

ಪರ್ವತೋಪಮ ಕಪಿಗಳೆಲ್ಲರ
ಸರ್ವಥಾ ಕರೆತಂದಡಾಕ್ಷಣ
ಸರ್ವಬಲ ಸಹ ಬಂದು ಲಂಕೆಗೆ ಧಾಳಿಯನು ಕವಿಸಿ ||
ಉರ್ವಿಸುತೆಯನು ಬಿಡಿಸಿ ರಾವಣ
ದುರ್ವಿನೀತನ ಬಲಸಹಿತ ಕೊಂ
ದರ್ಪ ಸಪ್ತಕ ಕುಲಜ ರಾಮನ ಭೃತ್ಯನೆನಿಸುವನು || ೩೪ ||

ಇಂದು ನೀನೊಡಗೊಂಡು ಕರೆದ್ಕೊ
ಯಿಂದ ಕಪಿಪಡೆ ಸಹಿತ ವಳಯಿಂ
ಕೊಂದು ಕ್ಷಣವನು ಚರಿಸಿ ರಾಣೀ ದಾಸಿ ಪುತ್ರರನು ||
ತಂದೆ ಕರುಣದಿ ನೋಡಿನಡುಗುತ
ನಿಂದಿಹಾ ಸುಗ್ರೀವನಭಯಾ
ನಂದ ಕರವನು ಕೊಟ್ಟು ಬಿಜಯಂಗೈಯ್ಯಬೇಕೆನಲು || ೩೫ ||

ನೀವು ಮನುಜರೆ ಶಿವಶಿವಾ ನೆತ
ದೇವಗೋದ್ವಿಜ ರಕ್ಷಣಾರ್ಥ ಕೃ
ತಾವತಾರರಲೇ ಜಗತ್ರಯ ದುರ್ನಿರೀಕ್ಷಕರು ||
ನಾವು ಬಲ್ಲೆವೆ ನಿಮ್ಮ ಮಹಿಮೆಯ
ಭಾವವನು ನಿಮ್ಮೊಲವೆ ತಮ್ಮೆಯ
ಜೀವವೆಂದಳು ತಾರೆ ತಾರಾಪತಿ ಮುಖಾಕಾರೆ || ೩೬ ||

ಎನಲು ಕೋಪವಡಂಗಿತುದಕವ
ನನಲನಲಿ ಕಳಿದಂತೆ ಲಕ್ಷ್ಮಣ
ಗನುನಯದಿ ವಂದ್ಯೈದಿದಳು ಸುಗ್ರೀವನೆಡೆಗವಳು ||
ವನಿತೆಯನು ತೆಗೆದಪ್ಪಿ ಮನ್ನಿಸಿ
ದನು ಬಳಿಕ ಹನುಮಂತರಂಗದ
ರನು ಕರೆದ ಲಾಗಿನಲಿ ಹೊಕ್ಕನು ವೀರಸೌಮಿತ್ರ || ೩೭ ||

ಬರಲು ಸೌಮಿತ್ರಿಯನು ಕಂಡು
ಪ್ಪರಿಸುತಿರೆ ಸುಗ್ರೀವ ಭಯದಿಂ
ಕೆರಳಿ ಲಕ್ಷ್ಮಣನೆಂದನೆಲೆ ದುರ್ವೃತ್ತ ರಾಘವನ ||
ಮರೆದೆಯಾ ಬಾಲಿಯನು ಕೊಂದಾ
ಶರವು ನಿನ್ನನು ನೋಡುತಿದೆಯದು
ಮರೆಯೆ ಬಾಲಿಯ ಪಥದಿ ಕಳುಹಿಸಿಕೊಡುವೆ ನಾನೆಂದೆ || ೩೮ ||

ಎಂದ ನಿಷ್ಠುರ ವಚನವನು ಕೇ
ಳೆಂದನಾ ಹನುಮಂತನೇನನು
ತಂದೆ ಹೇಳಿದೆ ರಾಮಚಂದ್ರನ ಪಾದ ಭಕುತಿಯಲಿ ||
ಸಂದೆಹವೆ ನಿನ್ನಿಂದಧಿಕನಿವ
ನೊಂದು ಕ್ಷಣವೂ ಮರೆಯದೇ ರಘು
ನಂದನನ ಕಾರ್ಯಕ್ಕೆ ಚಿಂತಿಸುತಿಪ್ಪನನವರತ || ೩೯ ||

ನೋಡು ಸುತ್ತಲು ಕೋಟಿಕೊತ್ತಳ
ಬೀಡಿನಲಿ ತುಂಬಿರ್ದ ನಾಯಕ
ವಾಡಿ ಕಪಿಗಳ ಕೋಟಿ ಕೋಟಿಗಳೈದಿ ಬಂದಿಹುದ ||
ಪ್ರೌಢತೆಯಲೆಲ್ಲರನು ಕರೆಯಿಸಿ
ಕೂಡಿಕೊಂಡಿಹನರಸಲೈದರು
ರೂಢಿಸುತೆಯನುವಪ್ರಬುದ್ಧನೆ ವೀರಸುಗ್ರೀವ || ೪೦ ||

ಹನುಮನೆಂದುದಕೇಳಿ ಲಕ್ಷ್ಮಣ
ಮನದಿ ನಂಬುತ ಕೋಪವಳಿದಿರೆ
ಯಿನುಪಮನು ಸುಗ್ರೀವ ಪಾದ್ಯಾರ್ಘ್ಯಾದಿಕವ ಹಿಡಿದು ||
ವಿನಯದಿಂದೈತಂದು ಪೂಜಿಸಿ
ದನು ನಮಿಸಿಯಾಲಿಂಗಿಸುತ ನಿಜ
ಮನವ ಹದುಳಿಸಿಕೊಂಡು ಮತ್ತಿಂತೆಂದ ಸುಗ್ರೀವ || ೪೧ ||

ರಾಮ ನೀ ರಕ್ಷಿತನು ನಾನೆಲೆ
ಯಾ ಮಹಾತ್ಮನ ಭೃತ್ಯ ನಾನೂ
ಸ್ವಾಮಿಗೆನ್ನ ಸಹಾಯವೆಂಬುದು ವಿನೋದವಲ ||
ಕ್ಷೇಮವನು ಮೂಜಗಕೆ ಮಾಳ್ಪನ
ನಾಮಯನು ನೆರೆ ಮುನಿಯೆ ಲೋಕ
ಸ್ತೋಮವನು ನಿಮಿಷಾರ್ಧದಿಂ ಗೆಲಲಾರನೇ ಯೆಂದ || ೪೨ ||

ನೋಡಿದಡೆ ಬ್ರಹ್ಮಾಂಡ ಕೋಟಿಯು
ಕೂಡೆಯಂಕುರಿಸುವುದುಪೇಕ್ಷೆಯು
ಮಾಡಲೈಸುವುದೊಂದರಕ್ಷಣದೊಳಗೆ ಶತಕೋಟಿ ||
ಗೂಢ ಮಾನುಷನಾದ ಪರಿಯುದೆ
ನಾಡು ಶಿವಶಿವ ಬಹುದೆ ದೈವದ
ಕೂಡೆ ಮುಂಹೆತ್ತಣದು ತನಗೆಲೆ ತಂದೆ ಕೇಳೆಂದ || ೪೩ ||

ಆವನೊಲವಿನದೃಷ್ಟರಹಿತರಿ
ಗಾವ[1]ಗೌ[1] ಮರಹಾಳೆ ವಿಶಯುವು
ಜಾವುಳದ ಜಡನಿದ್ರೆ ಕಾಮಕ್ರೋಧ ಕಲುಷಗಳು ||
ಭಾವಶುದ್ಧ ವಿಹೀನ ವೈರವು
ಜೀವದಲಿ ನಿರ್ದಯನ ಪಿಶುನಭು
ತಾವಮಾನವು ಸೇರುವುದು ಹರಿ ವಿಮುಖರಿಂಗೆಂದ || ೪೪ ||

ಮತ್ತದಾವನ ಕರುಣವುಳ್ಳರೆ
ಸತ್ಯದಯಧಾತೃತ್ವಶಾಂತಿ ವಿ
ರಕ್ತಿ ಭಕ್ತಿ ವಿವೇಕ ಮೃದುನುಡಿ ದಮವು ದಾಕ್ಷಿಣ್ಯ ||
ಚಿತ್ತದಲಿ ನಿಷ್ಕಲುಷ ಸಕಲದಿ
ಮೈತ್ರಿನಿಷ್ಠ ಜ್ಞಾನ ಗುಣ ಸುಚ
ರಿತ್ರವೆಲ್ಲವು ರಾಮನೊಳವುಳ್ಳವರಿಗಹುದೆಂದ || ೪೫ ||

ಅರಸಿ ಕಾಣದು ಯೋಗಿಗಳಮತಿ
ಯೊರಳಿ ಕಾಣವು ವೇದಮಸ್ತಕ
ವರಸಿ ತನ್ನನು ಕರೆದು ತಳುವಿದನೆಂದನೇ ತನ್ನ ||
ಮರೆವನೇ ಕರುಣಾಳುವನು ಕಪಿ
ಯರೆಯನೆಂದೀ ಹೊತ್ತ ಹಮ್ಮಿನು
ಜರೆಯಲೇತಕೆ ಬೇಗ ಹೋಗುವವೀಕ್ಷಣದಲೆಂದ || ೪೬ ||

---

1 [illegible]ಗವು (ಕ)

ದನುಜನಾಂತಂಗೇನು ಗಣ್ಯವು
ವನಚರದಲಹದೇನು ಕಾರ್ಯವು
ಮನುಜನಾಟಕ ಮಹಿಮನೆನುತಿರೆ ನುಡಿದ ಲಕ್ಷ್ಮಣನು ||
ಮನಕೆ ತರಬೇಡಾನು ನುಡಿದಿ
ದ್ದನುಚಿತವಡೀಕ್ಷಣವೆ ಹೋಹವೆ
ಜನಪ ರಾಘವನೊಬ್ಬನೇ ಶೋಕದಲಿಹನು ವನದಿ || ೪೭ ||

ಎಂದಡೇಳೆನು ತೇರಿದರು ಸು
ಸ್ಯಂದನವ ಲಕ್ಷ್ಮಣ ಸಹಿತ ಕಪಿ
ವೃಂದವೊಡನೈತರೆ ಸಮುದ್ರದವೋಲು ಗರ್ಜಿಸುತ ||
ದುಂದುಭಿಯು ಭೇರಿಗಳ ಕಹಳೆಯು
ಗೊಂದಣದ ಬಹುವಾದ್ಯದಬ್ಬರ
ದಿಂದ ದಿಸೆ ಮಾರ್ನೊಳಗೆ ನಡೆದುದು ವೀರ ವಾನರರು || ೪೮ ||

ಸತ್ತಿಗೆಯು ಚಾಮರ ಮರಾಳದ
ವೊತ್ತದೊತ್ತೊತ್ತುಗಳ ವೀಜನೆ
ಹಸ್ತದಲಿ ಕೆಲಕೆಲವು ಕಪಿ ಕರಡಿಗಳು ಮೇಲ್ಮೇಲೆ ||
ಸುತ್ತ ಸುಳಿದಂಗದ ಹನುಮರೊಡ
ನೊತ್ತರಿಸಿ ನಡೆತಂದು ಕಂಡರು
ಚಿತ್ತಸಾಕ್ಷಿಕ ರಾಮಚಂದ್ರನ ದೂರದಿಂದಿದಿರ || ೪೯ ||

ಕಂಡರಾ ಗಿರಿಗುಹೆಯ ಬಾಗಿಲ
ಮುಂಡಿಸಿದ್ದ ಶಿಲಾತಳದಲಾ
ಖಂಡಮಹಿಮನ ಚೀರವಸನ ಶ್ಯಾಮ ಕಾಯನನು ||
ಮುಂಡೆಯಲಿ ಸುತ್ತಿರ್ದ ಜಟೆಗಳ
ಪುಂಡರೀಕದಳಾಭ ನೇತ್ರದ
ಖಂಡ ಕರಕೋಟಿ ಪ್ರಭಾ ಭಾಸಿತ ಮನೋಹರನ || ೫೦ ||

ಚಾರು ಗಾತ್ರದ ಮುದಿತ ವಕ್ತ್ರದ
ಹಾರಸರ್ವಾವಯದ ಶೋಭೆಯ
ಮಾರ ಶತಸನ್ನಿಭದಿ ವೀರಾಸನದ ಮೇಲಿರಲು ||
ನಾರಿಯಗಲಿದ ವಿರಹ ಚಿಂತಾ
ಪಾರವಶ್ಯದವೋಲು ತೋರುತ
ಹಾರಯಿಸುತಿರೆ ಸುತ್ತ ಮೃಗಪಕ್ಷಿಗಳನೀಕ್ಷಿಸುತ || ೫೧ ||

ದೂರದಲಿ ಕಾಣುತ್ತ ರಾಮ ಪ
ದಾರವಿಂದವ ಧಿಗಿಲನಾ ಹೊಂ
ಬೇರನಿಳಿದರು ಭಕ್ತಿಚೇತನ ಚರಣ ಸಭ್ಯುತರು ||
ಧಾರುಣಿಗೆ ವೈಯ್ಯಿಕ್ಯಕ್ಕತ್ರೈತಂ
ದಾ ರಮಾಪತಿಯಂಘ್ರಿಯಲಿ ವಿ
ಸ್ತಾರಿಸುತ್ತೆರಗಿದರು ವರ ಸುಗ್ರೀವ ಲಕ್ಷ್ಮಣರು || ೫೨ ||

ಸಂದವಿಲ್ಲಿಗೆ ಸಂಧಿ ಕೃತಿಗಳ
ಚಂದನೊಡಸಿದ್ಧಂದದಲಿ ಪದ
ಬಂಧವೈವತ್ತೆರಡಿದನು ಭಕುತಿಯಲಿ ಕೇಳಿದಡೆ ||
ಎಂದು ತನ್ನವರೆಂದು ಕರುಣಾ
ಸಿಂಧು ಸರ್ವೇಶ್ವರನು ಸನ್ನುತ
ಬಂಧು ಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹ ಸಲಹುವನು || ೫೩ ||

ಅಂತು ಸಂಧಿ ೩೪ ಕ್ಕೆ ಪದ ೧೫೩೭ ಕ್ಕೆ

ಮಂಗಳ ಮಹಾ ಶ್ರೀ ಶ್ರೀ ಶ್ರೀ ಶ್ರೀ



॥ ಶ್ರೀ ರಾಮಚಂದ್ರಾಯ ನಮಃ ॥



# ಮೂವತ್ತೈದನೆಯ ಸಂಧಿ

## ಸೀತಾನ್ವೇಷಣೆ, ಯೋಗಿನಿ ರಾಮನನ್ನು ಕಂಡಿದ್ದು

ಸೂಚನೆ ॥ ಸಕಲ ವಾನರ ಪಡೆಗಳಾ ಜಾ
ನಕಿಯನರಸುತ್ತೈದಿದರು ಬಿಲ
ಮುಖದಿ ಯೋಗಿನಿ ಬಂದು ಕಂಡಳು ರಾಮನಂಘ್ರಿಗಳ ॥

ಪದ ॥ ಸರ್ವಮಯ ಸರ್ವಾತ್ಮರೂಪನೆ
ನಿರ್ವಿಕಾರನಿರೀಹನದ್ವಯ
ಶರ್ವವಂದ್ಯ ಸುವಸ್ತುವೇ ಸುಖಪೂರ್ಣ ಪರತತ್ವ ॥
ಸರ್ವ ಮುಖದೊಳು ರಹಿತವಾದಾ
ಸರ್ವತೋಕ್ಕ್ಯದಿ ನಾಶವಾಗಿ
ದ್ದುರ್ವ ಬೊಮ್ಮವೆಯಾದ ಪಾದವ ನೆನೆವೆ ಮನದೊಳಗೆ ॥೧॥

ಮತ್ತೆ ಕೇಳೈ ಗಿರಿಜೆ ರಾಘವ
ನೆತ್ತಿ ಸುಗ್ರೀವನನು ತಕ್ಕೈ
ಸುತ್ತೊಡನೆ ಕುಳ್ಳಿರಿಸಿಕೊಂಡುಪಚಾರವನು ಮಾಡಿ ॥
ಸತ್ಯಸಂಧನೆ ನುಡಿದನೆಲೆ ರಘು
ಮತ್ತವಾರಣ ನೋಡು ತನ್ನಿಂ
ದೆತ್ತಿ ಕರೆತಂದೀ ಮಹಾವಾನರರ ಯೂಥಪರ ॥ ೨ ॥

ವರಕುಲಾಚಲ ಮೇರು ಮಂದರ
ಗಿರಿಯಲುಂಟಾದವರು ನಾನಾ
ಪರಿಯ ಸಪ್ತದ್ವೀಪ ಸರವನ ಶೈಲವಾಸಿಗಳು ॥

ಹನುಮಂತನಿಗೆ ರಾಮನಿಂದ ಉಂಗುರ ಪ್ರದಾನ



ಸ್ವಯಂಪ್ರಭೆಯೊಂದಿಗೆ ವಾನರರ ಭೆಟ್ಟಿ



ಹಿರಿದು ಲೆಕ್ಕಿಸಬಾರದಗಣಿತ
ರುರುಪರಾಕ್ರಮ ಪರ್ವತೋಪಮ
ಸುರರ ಪರಮಾಧಿಗಳದೆಲ್ಲರು ಕಾಮರೂಪಿಗಳು || ೩ ||

ಎಲ್ಲರೂ ರಣಪಂಡಿತ ಪ್ರತಿ
ಮಲ್ಲ ಕಪಿಗಳು ವದರೊಳಗು ಕೆಲ
ರಲ್ಲಿಯೂ ಗಜಬಲಗಜಾಧಿಕ ಬಲಗಳಾಯುತದಿ ||
ಘಲ್ಲಿಸಿದ ಬಲರವ್ರಿತ ಬಲರೆದೆ
ದಳ್ಳಳಿಸಿದಂಜನ ಗಿರಿಪ್ರಭ
ರಿಲ್ಲಿ ಕೆಲಬರು ಕನಕಗಿರಿ ಸನ್ನಿಭರು ನೋಡೆಂದ || ೪ ||

ಕೆಲರು ರಕ್ತಸುಲೋಚನರು ಕೆಲ
ಕೆಲರು ಮುಖದಿಂ ರಕ್ತವರ್ಣರು
ಕೆಲರು ಶುದ್ಧ ಸ್ಫಟಿಕಗಾತ್ರರು ಕೃಷ್ಣ ಪಿಂಗಲರು ||
ಕೆಲರು ನೋಡ್ಕೈ ದೀರ್ಘವಾಲರು
ಘುಳುಘುಳಿಸಿ ಗರ್ಜಿಸುತ ಪರಿವೃತ
ಹಳಚಲುದ್ಯೋಗಿಸುವರೆಲ್ಲರು ಕದನ ಕಾಮುಕರು || ೫ ||

ಪ್ರೀತಿಯಿಂ ನಿಮ್ಮಾಜ್ಞೆಯಿಂದಿಹ
ನೀತಿವಂತರಬೆಲ್ಲರೂ ವನ
ಜಾತ ಫಲಪರ್ಣಾಶನರೆ ಭೋಜನಕೆ ಬಳಲಿಸರು ||
ಈತನೀಗಲೆ ಹನುಮನೆಂಬವ
ವಾತಸಂಭವ ಬಲುಪರಾಕ್ರಮ
ದೀತ ತೇಜೋಖ್ಯಾತ ಮಂತ್ರಿಪ್ರವರ ಗುಣಯುತನು || ೬ ||

ಇವನು ಕರಡಿಗಳೊಡೆಯನಹ ಜಾಂ
ಬವನು ಮಂತ್ರಿಶ್ರೇಷ್ಠ ಬುದ್ಧಿಯು
ಲಿವನ ಮಿಗುವವರಿಲ್ಲ ಭಲ್ಲೂಕ ಕೋಟಿಗಳಿಗೊಡೆಯ ||

ಇವನು ನಳನತಿ ಶಿಲ್ಪಿ ಮುಂದಿಹ
ನಿವನು ನೀಲನು ಕದನದಲಿ ಬಲು
ಠವಳಿಯರಿದವ ಗವಯನೀತ ಗವಾಕ್ಷನೆಂಬನಿವ || ೭ ||

ಈತ ಶರಭನು ಗಂಧಮಾಧನ
ನೀತ ಮೈಂಧನು ಗಜನೆನಿಪ್ಪವ
ನೀತ ಕಂಪನು ಹಂಪನೀತನು ಬಲುಮುಖಾಂಹಯನು ||
ಈತ ಶರಮುಖ ಸೇಣನೆಂಬವ
ನೀತ ವೈದ್ಯನು ತಾರನೆಂಬವ
ನೀತ ಕೇಸರಿ ಹನುಮನಯ್ಯ ಮಹಾಪರಾಕ್ರಮನು || ೮ ||

ಇವನು ಕಪಿ ಪಡೆಯೊಳಗೆ ಕೋಟಿ
ಪ್ರವರಕೊಬ್ಬೊಬ್ಬರನು ಮುಖ್ಯರ
ನಿವರಿಸಿದೆನತಿ ಶೌರ್ಯವೀರ್ಯಾದಿ ಶಕ್ರ ಸಮಬಲರು ||
ತವಕೃತಜ್ಞಾಕಾರಿಗಳು ಧಿಟ
ದಿವಿಜರಂಶೀಭೂತರೆಲ್ಲರು
ಬವರದಲಿ ನೆರೆ ನೋಡಬಹುದಿವದಿರ ಬಲಾಢ್ಯತೆಯ || ೯ ||

ಈತನಂಗದನೈಶ್ವರಿಯ ಗುಣ
ಜಾತ ಬಾಲಿಯ ಮಗನಿವನು ಸ
ತ್ವಾತಿಶಯವುಳ್ಳವನು ರಾಕ್ಷಸವನ ದವಾನಳನು ||
ಸೀತೆಯರಸಿಯೆ ನಿನ್ನ ಕಾರ್ಯ
ಕ್ಕೀತಗಳು ಪ್ರಾಣವನೆ ತೊರೆವರು
ಘಾತಿಸಲು ವೈರಿಗಳ ಕದನದಲಧಿಕ ನಿರ್ದಯರು || ೧೦ ||

ಬೆಸಸು ಬೇಗದಿ ರಾಮ ನಿನ್ನಯ
ವಶದಲಿಹರಿವರೆನಲು ಹರ್ಷ
ಪ್ರಸರನೇತ್ರದಲಪ್ಪಿದನು ಸುಗ್ರೀವನನು ಬಳಿಕ ||

ವ್ಯಸನವೆಲ್ಲವ ನೀನರಿದೆ ತಾ
ನುಸುರಲೇತಕೆ ಮತಕೆ ಬಪ್ಪೊಡೆ
ವಸುಧೆಸುತೆಯರಸಲಿಕೆ ಕಳುಹುವುದೆಂದನಾ ರಾಮ || ೧೧ ||

ಎಂದ ರಾಮನ ನುಡಿಗೆ ಹರ್ಷದ
ಲಂದು ಕಪಿಮುಖ್ಯರನು ಕರೆದೊಂ
ದೊಂದು ದೆಸೆಗೆಲ್ಲರನು ಸುತ್ತಲು ಕಳುಹಿ ದಕ್ಷಿಣಕೆ ||
ನಿಂದು ಯೋಚಿಸಿ ಬಲುಬಲಾಢ್ಯರಿ
ಗೆಂದನಾ ಜಾಂಬವಗೆ ಹನುಮಗೆ
ಮುಂದೆಯಂಗದ ನಳ ಸುಷೇಣಗೆ ವಿವಿಧ ಮೈಂದರಿಗೆ || ೧೨ ||

ಕರೆದು ಶರಭಾದ್ಯರಿಗೆ ಕಟ್ಟಲೆ
ಯೊರೆದನಾ ಸುಗ್ರೀವ ರಾಘವ
ನರಸಿ ಸೀತೆಯನರಸು ತಿಂಗಳದೊಳಗೆ ಕಾಣದೊಡೆ ||
ಬರಲಿ ಬೇಕೆತ್ತಾನು ಜಾನಕಿ
ಯಿರವೆ ಕಂಡಡೆ ವೊಂದುದಿನ ತಡ
[1]ದರುತಡೆಯುಬಾರದು ಬಳಿಕಲರೆ[1]ದಿವಸ ಸಹವಾಗಿ || ೧೩ ||

ತಡೆದಡವರಿಂ ಮೇಲೆ ಪ್ರಾಣವ
ಬಿಡುವುದೇ ಬಲುದಂಡ ನಿವಗೆಂ
ದೊಡನೆ ನೇಮವ ಕೊಟ್ಟನತಿಬಲ ವಿಕ್ರಮರಿಗೊಲಿದು ||
ವೊಡೆಯ ರಾಮಂಗೆರಗಿ ಕುಳಿತಿರೆ
ಪಡೆ ಪಯಣಕನುವಾಗೆ ಕಂಡ
ಖ್ಬಡದಿ ನಡೆವಾ ಮಾರುತಿಯ ಕರೆದೆಂದನಾ ರಾಮ || ೧೪ ||

ಕುರುಹ ಕೊಂಡ್ಯೊ ಸೀತೆಗೆನ್ನಯ
ಕರದ ಬೆರಳುಂಗುರವ ನಾಮಾ
ಕ್ಷರವೆರಡ ಬರೆದಿಹುದು ರಾಮಾಭಿಧಾನ ಮದ್ವೈಸರ ||

1 ದಿರಲು ಬಾರದು ಬಳಿಕಲರದಿನ (ಖ)

ಧರಣಿಸುತೆಗೇಕಾಂತದಲಿ ಕೊಡು
ಓರಿದು ಕಪಿನಾಯಕರ ಮಧ್ಯದಿ
ತರುಣ ನೀನೇ ಕಾರ್ಯ ಸಾಧಕನೆಂದನಾ ರಾಮ | ೧೫ ||

ಬಲ್ಲೆ ನಿನ್ನಯ ಸತ್ವವನು ನಿನ
ಗೆಲ್ಲ ಶುಭ ಹೋಗೆಂದು ಲಕ್ಷ್ಮೀ
ವಲ್ಲಭನು ಬೀಳ್ಕೊಟ್ಟನಾಗಳೆ ಹನುಮನನು ಹರಸಿ ||
ಮಲ್ಲರಂಗದ ಮುಖ್ಯರೆದ್ದ
ಲ್ಲಲ್ಲಿ ವಿಂಧ್ಯದ ಗುಹರ ಗಗನದ
ಲೆಲ್ಲರಸಿ ಸೀತೆಯನು ವರ ವರ ಪರ್ವತೋಪಮರು | ೧೬ ||

ಕಂಡರದರೊಳು ಗಿರಿಯಘೋರದ
ಪುಂಡರಕ್ಕಸನೊಬ್ಬನನು ಮೃಗ
ವಿಂಡು ಗಜವನು ಬಾಯೊಳಗೆ ತುರುತುರುಕಿ ನುಂಗುತಿರೆ ||
ಲಂಡ ಕಪಿಗಳು ಗಿಲಿಗಿಲಿಸಿ ತೆರ
ದಂಡವನು ತೋರುತ್ತ ನೋಡದೆ
ದಿಂಡುಗೆಡಹಿದುದವನಿಯಲಿ ರಾವಣನು ನಿವನೆನುತ || ೧೭ ||

ಮುಷ್ಟಿ ಹತಿಯಲಿ ಕೊಂದು ಬಿಸುಟವು
ದುಷ್ಟರಾವಣನಲ್ಲನುತ್ತವೆ
ಬೆಟ್ಟಗಿರಿಗುಹೆಜಾಹು ಜರಿಕೊರೆ ಮುಂಕು ಮುರುಹುಗಳ ||
ಗಟ್ಟ ಬೇಣವನಿರುಬು ಸಿರಿ ಬಿನು
ಕಷ್ಟಕಂಟಕ ಲೋಷ್ಟ ತಾಲುಕ
ದಿಟ್ಟಿಡೆಯಲತಿ ಚಿತ್ತ ಬಿದಿರೆಂದೆನ್ನದರಸಿದವು || ೧೮ ||

ಸಿಕ್ಕದಾಯಿತ್ತುದಕ ಕಪಿಗಳ
ತಕ್ಕಿಸಿತು ಡಗೆಯಲ್ಲಿಗಲ್ಲಿಗೆ
ತುಕ್ಕಿನೋಡಿಯು ಕಾಣದಾಸರು ಹತ್ತಿ ಕಂಗೆಡುತ ||

ಕಿಕ್ಕಿರಲತೆಯಿಂ ಮುಂದೆ ತೃಣ ಗಿಡು
ಮುಕ್ಕು ಮುಸುಕಿರೆ ಗುಹೆಯು ಕಂಡರು
ಪಕ್ಕನಸದಲ್ಲಿಂದ ಹೊರವಡೆ ಕ್ರೌಂಚಹಂಸೆಗಳು ‖ ೧೯ ‖

ಅಂದವನು ಕಂಡಲ್ಲಿ ಜಲವಿಹು
ದೆಂದು ನೋಡುವೆನೆನುತ ಹೊಕ್ಕರು
ಮುಂದೆ ಹನುಮನ ಮಾಡಿಕೊಂಡಾ ಕಪಿಗಳೆಲ್ಲವರು ‖
ಹಿಂದೆಯೊಬ್ಬೊಬ್ಬರು ಸಮೀಪಗ
ಳಿಂದ ಬಾಲನ ಹಿಡಿದು ಗುಹೆಯು ಮ
ಹಾಂಧಕಾರದಿ ದೂರವನು ಹೊಕ್ಕರು ತ್ರಿಷಾತ್ರಿಯಲಿ ‖ ೨೦ ‖

ಮುಂದೆ ಕಂಡರು ಜಲವ ಸುಸ್ಫಟಿ
ಕೇಂದ್ರ ನೀಲೋಪಮವ ದಿಡದಲಿ
ಚಂದ ಕಲ್ಪದ್ರುಮದವೋಲಿರೆ ವೃಕ್ಷನಿಕರಗಳು ‖
ವೊಂದುವೊಂದೂ ದ್ರೋಣಸಮ್ಮಿತ
ದಿಂದ ಮಧುರಸ ಪಕ್ವಫಲದಾ
ನಂದದಾಮ್ರೇಳಿಗಳು ಜಂಬೀರಾದಿ ಫಲಗಳಲಿ ‖ ೨೧ ‖

ಇರಲು ಗುಹೆಗಳಲೆಲ್ಲ ಮಣಿಗಳು
ಪರಿಪರಿಯ ಭೂಷಣ ಸುವಸ್ತ್ರವು
ಪರಮ ಪಾಯಸ ಭಕ್ಷ ಲಡ್ಡುಕಪೂಪವಿಡ್ಡಲಿಗೆ ‖
ಪರಮ ದಿವ್ಯಾನ್ನಗಳು ಸಹಿತವೆ
ಹಿರಿಯ ಕಜ್ಜಾಯಗಳ ರಾಶಿಯು
ಹೊರೆಯಲಾರೂವಿಲ್ಲ ನೆರರದರೊಳಗೆ ವರ್ಜಿತವು ‖ ೨೨ ‖

ಅಲ್ಲಿ ಕಂಡರು ದಿವ್ಯಭವನವ
ಸಲ್ಲಲಿತದಾಸನವನಿಟ್ಟಿರ
ಲೆಲ್ಲರಚ್ಚರಿವಡುತ ನೋಡಲು ಮುಂದೆ ಹೊಳೆಹೊಳೆವ ‖

ಸಲ್ಲಲಿತ ಯೋಗಿನಿಯದೊಬ್ಬಳು
ತಲ್ಲತಧ್ಯಾನದಲಿ ವನದೊಳ
ಗುಳ್ಳ ಚೀರಾಂಬರದಲಿದ್ದಳು ಯೋಗ ನಿಷ್ಠೆಯಲಿ ॥ ೨೩ ॥

ಅಪ್ರಮೇಯನ ಆದಿಸಿದ್ಧನ
ಚಿತ್ಪ್ರಕಾಶಾನಂದ ರೂಪನ
ನಿಷ್ಪ್ರಪಂಚ ನಿರೀಹ ನಿಷ್ಕಳ ನಿಜನಿರಂಜನನ ॥
ಸುಪ್ರಭೇದನ ಸುಜನ ಸೇವ್ಯನ
ನಲ್ಪ ತೇಜನನೇಕನದ್ವಯ
ನಪ್ಪ ಪರಮನ ಭಾವಿಸುವಳನು ಕಂಡುದಾ ಕಟಕ ॥ ೨೪ ॥

ಆ ಮಹಾತ್ಮೆಯ ಕಂಡು ಭಯದಿಂ
ನಾಮವನು ಮಾಡಿದರು ಭಕುತಿಯ
ಲೀ ಮಹಾ ವಾನರರ ನೋಡುತ್ತೆಂದಳಾ ದೇವಿ ॥
ಭೀಮ ವಿಕ್ರಮರಾರು ನೀವೀ
ಕ್ಷೇಮದೆಡೆಯಾಗಿದ್ದ ಸುಸ್ಥಳ
ಭೂಮಿಗಾರಟ್ಟಿದರು ಪೊಡೆಯರದಾರು ನಿಮಗೆನುತ ॥ ೨೫ ॥

ಎನಲು ಕೇಳುತ ಹನುಮನೆಂದನು
ಮನವಲಿದು ಕೇಳಮ್ಮ ಯೋಧ್ಯಾ
ಜನಪ ದಶರಥನಖಿಳ ವಿಶ್ರುತಯಾಪನ ಓರಿಯಮಗ ॥
ಅನುಪಮ ಶ್ರೀ ರಾಮ ವಿಶ್ರುತ
ಜನಪನಾಜ್ಞೆಯ ಪಾಲಿಸಲು ನೆರೆ
ವನಕೆ ಬಂದಲ್ಲಿರ್ದ ಬಹುದಿನ ಸತಿಯನುಜ ಸಹಿತ ॥ ೨೬ ॥

ಸೀತೆಯಾತನ ವನಿತೆಯೊಯ್ದನು
ಪಾತಕನು ರಾವಣನವನ ನೆರೆ
ಘಾತಿಸಲು ನೆರವಾದನಾ ಸುಗ್ರೀವ ರಾಮಂಗೆ ॥

ಪ್ರೀತಿಯಿಂ ಸಖಿಯಾಗಿ ನಮ್ಮನು
ನೀತಿವಿದನರಸಲಿಕೆ ಕಳುಹಿದ
ನೋತು ಬಂದೆವು ನೀನದಾರಲ್ಲಿದ್ದೆ ಹೇಳೆಂದ || ೨೭ ||

ಎನಲು ನೋಡುತ ಹರ್ಷದಿಂದಾ
ವನಿತೆ ನುಡಿದಳು ಬಳಲಿ ಬಂದಿಹಿ
ರಿನಿಬರೂ ಬೇಕನಿತಫಲ ಪಕ್ವಾದಿ ಭೋಜ್ಯವನು ||
ಘನದಮೃತ ಪಾನೀಯವನು ಕೊಂ
ಡನುಪಮರಿರಾ ಬನ್ನಿ ಬಳಿಕೆಂ
ಬೆನು ಮೊದಲುಗೊಂಡೆಲ್ಲ ಮರೆದ್ವೃತ್ತಾಂತ ಸಂಗತಿಯ || ೨೮ ||

ಎಂದಡಸ್ತು ಯೆನುತ್ತ ಕಪಿಗಳ
ವೃಂದವೆಲ್ಲವು ಬೇಗಬೇಗದಿ
ನಿಂದು ಬೇಕಾದನಿತ ತಜ್ಜಲ ಪಾನವನು ಮಾಡಿ ||
ಬಂದಡಾ ಯೋಗಿನಿ ನಿರೀಕ್ಷಿಸು
ತೆಂದಳಾ ಹನುಮಂತನೊಡನಾ
ಸಂದ ವೃತ್ತಾಂತವನು ಕಪಿಬಲವೆಲ್ಲ ಕೇಳುತಿರೆ || ೨೯ ||

ಮುನ್ನ ಹೇಮೆಯೆನಿಪ್ಪವಳು ವರ
ಕನ್ನೆಯಾದಳು ವಿಶ್ವಕರ್ಮಗೆ
ಚೆನ್ನೆ ದಿವ್ಯಾವಯದಿ ನಾಟ್ಯವ ಮಾಡಿ ಭಕುತಿಯಲಿ ||
ಪನ್ನಗಾಭರಣನನು ಮೆಚ್ಚಿಸೆ
ವಹ್ನಿನೇತ್ರನು ಬಳಿಕ ಕೊಟ್ಟನು
ರನ್ನಪುರವಿದನಿಲ್ಲಿ ಬಹುದಿನವಿದ್ದಳಾ ತರಳೆ || ೩೦ ||

ವರುಷವಯುತಾಯುತ ಸಹಸ್ರವ
ನಿರಲವಳು ಯಿಾಪುರದಿ ಯೋಗಿನಿ
ಪರಮ ನಿಷ್ಠೆಯಲವಳ ಸಖಿಯಾಗಿದ್ದ ನನ್ನೊಡನೆ ||

ಪರಮ ಮೋಕ್ಷವ ಬಯಸಿ ವಿಷ್ಣು
ಸ್ಮರಣೆಯನೆ ಮಾಡುತ್ತ ಕಾಲನ
ಕರಕರೆಯ ದೇಹಾಭಿಮಾನವ ತೊರೆಯಲೋಸುಗರ || ೩೧ ||

ತನುವಿಡಿದರಿಂಗಾವ ಸುಖ ಸಂ
ಜನಿತ ಕಾಮಕ್ರೋಧ ಲೋಭದ
ಮನೆಯುಹಾದಿವ್ಯಾಧಿ ಜನಿಮೃತಿ ಹಸಿವು ತೃಷೆ ಭೀತಿ ||
ಅನುದಿನವು ಸಂಕ್ಲೇಶ ಬಿಡದೆಂ
ಬನುವರಿತು ಸಾಕ್ಷಾತ ಹರಿಯೇ
ತನಗೆ ಗತಿಯೆಂದೆಲ್ಲಿಯೂ ಯೋಗಿನಿಯನೊಡನಿರ್ದೆ || ೩೨ ||

ಮುನ್ನ ಗಂಧರ್ವನ ಮಗಳು ತಾ
ನೆನ್ನ ಹೆಸರು ಸ್ವಯಂಪ್ರಭಾಂಹಂಯೆ
ಕನ್ನೆಯರಲತಿ ದಿವ್ಯೆಯಾದರು ವಿಷಯ ಹೇಸಿಕೆಯ ||
ಗನ್ನಗುಳಿಯಲಿ ಬೀಳದಿದ್ದೆನು
ಸನ್ನಿಧಿಯಲಾ ಹೇಮೆಯೆಂಬಳು
ತನ್ನ ನಿಜಪದಕೈದುತೆಂದಳು ಕರುಣದಿಂದೆನಗೆ || ೩೩ ||

ವೊಂದು ಪ್ರಾಣಿಯು ಮಿಲ್ಲವಿದರೊಳು
ನಿಂದಿರಿಲ್ಲಿಯೆ ತಪವ ಮಾಡುತ
ಮುಂದೆ ನಾರಾಯಣನು ತ್ರೇತಾಯುಗದಿ ದಶರಥಗೆ ||
ಕಂದನಾಗಿರ್ದವನಿ ಭಾರದ
ದಂದುಗವ ಪರಿಹರಿಸೆ ವನಕೈ
ತಂದಪನು ಕಳುಹುವನು ಭಾರ್ಯೆಯನರಸೆ ಕಪಿಪಡೆಯ || ೩೪ ||

ಆ ಪಡೆಯ ಪೂಜಿಸಿ ಬಳಿಕ ನೀ
ನಾಪಥದಲೇ ಹೋಗಿ ರಾಮನ
ಶ್ರೀಪದವ ಕಂಡೊಲಿದು ಸಂಸ್ತುತಿಸೈ ಭಕುತಿಯಿಂದ ||

ದೀಪಿಸುವ ವೈಕುಂಠವೈದು ಮ
ಹಾ ಪುರುಷರೈದುವ ಸನಾತನ
ಲೋಪವಿಲ್ಲದ ಪದವನೆಂದೈದಿದಳು ನಿಜಪದಕೆ ॥ ೩೫ ॥

ನಾನು ರಾಮನ ಬಳಿಗೆ ಬೇಗದಿ
ಸಾನುರಾಗದಿ ಹೋಹೆನಕ್ಷಯ
ಪಾನಭೋಜ್ಯವನುಂಡು ಸುಖದಿಂ ಹೋಗಿ ನೀವೆನಲು ॥
ವಾನರರು ಬಳಿಕುಂಡು ದಣಿದು
ಸ್ವಾನದಿಂ ಮುನ್ನಿರ್ದು ಹೋದಾ
ಕಾನನಕ್ಕೈತಂದು ಕುಳಿತಿರ್ದುದು ಕಪಿಸ್ತೋಮಾ ॥ ೩೬ ॥

ಅವಳು ಗುಹೆಯನು ಬಿಟ್ಟು ಬೇಗದಿ
ರವಿಕುಲೇಶ್ವರನೆಡೆಗೆ ಬಂದಾ
ಯುವತಿ ಕಂಡಳು ರಾಮನನು ಸುಗ್ರೀವ ಲಕ್ಷ್ಮಣರ ॥
ಅವನಿಯಲಿ ನಮಿಸುತ್ತ ಬಲಬಂ
ದವನತಾನನೆ ಹರ್ಷಗದ್ಗದ
ಲವದಲೂರೇ ರಾಮಪುಳಕಿತಗಾತ್ರೆ ಜಲನೇತ್ರೆ ॥ ೩೭ ॥

ದಾನಿ ನಾನಿನಗೆಲೆ ರಘೂದ್ವಹ
ವಾಸವಾಗಿಯೆ ಗುಹೆಯಲೇ ಬಹು
ಸಾಸಿರಾಬ್ದವ ಕಳಿವುತಿದ್ದೆನು ತಪದಿ ನಿಮ್ಮಡಿಯ ॥
ನಾ ಸಮಕ್ಷದಿ ಕಾಣಬಂದೆನು
ವಿೂಸಲಿನ ಜಪತಪದ ಸುಕೃತದ
ರಾಶಿಗಳು ಫಲಿಸಿದವಲಾ ನಿಜಚರಣ ದರುಶನದಿ ॥ ೩೮ ॥

ಆದಿ ಮಾಯಾ ಶಕ್ತಿಯಿಂ ನರ
ನಾದ ಸಕಲ ಜಗಂಗಳೊಳ ಹೊರ
ಗಾದಿಯಾಗಿಹ ಸರ್ವಭೂತಕ ಲಕ್ಷ್ಯವಾಗಿಪ್ಪ ॥

ಸಾಧಿಸುವ ಸುಜ್ಞಾನಸಿಸ್ಮರಿ
ಗೈದೆ ಕಾಣದ ಬೊಮ್ಮ ಮಾಯೋ
ಪಾಧಿಯಿಂ ಜವನಿಕೆಯ ಮನುಜತೆವಿಡಿದೆ ಲೀಲೆಯಲಿ || ೩೯ ||

ಅವತರಿಸಿದೆಯಲಾ ಮಹಾ ಭಾ
ಗವತರಿಚ್ಛೆಯ ರೂಪ ಧರಿಸಿ
ದ್ದವನಿಪರವೋಲಾನಳ್ಳೆ ತಾ ನಿನ್ನನರಿಯಲಿಕೆ ||
ಶಿವ ಶಿವಾ ತಾಮಸದ ಹೀನರಿ
ಗೆವಗೆ ನಿಜತತ್ವವದು ಗೋಚರಿ
ಸುವುದೇ ಭಾಪುರೆ ಭಕ್ತಹಿತ ವಿಗ್ರಹನೆ ರಘುನಾಥ || ೪೦ ||

ದೇವ ನಿನ್ನಂಘ್ರಿಗಳ ದರುಶನ
ವೇ ವಿಕುಂಠದ ಮೋಕ್ಷದರುಶನ
ಭಾವಿಸಲು ನಿಜರೂಪದೆನ್ನೊಳಗಗಲದಿರಬೇಕು ||
[1]ಭಾವೆ[1] ಧನಯುತ ಮುಖ್ಯದರ್ಪಿತ
ಜೀವರಿಗೆ ನೀ ಸುಲಭನಲ್ಲಲೆ
ಯಾವ ಸಂಗವನುಳಿದ ಕಿಂಚನರಿಂಗೆ ಧನ ನೀನೆ || ೪೧ ||

ರಾಮ ನಿಜಸುಖಪೂರನಾತ್ಮಾ
ರಾಮ ನಮೋನಮೊ ಸಗುಣ ನಿರ್ಗುಣ
ಧಾಮ ಮಹದೀಶಾನ ಮಧ್ಯಾದ್ಯಂತ ವಿರಹಿತನೆ ||
ಕ್ಷೇಮಿ ಸರ್ವ ಸಮಾನನಾಗಿ
ಪ್ಪೀ ಮನುಷ್ಯರು ಡಂಭ ಚೇಷ್ಟಿತ
ಶ್ರೀಮೊ ಯಾರೂ ತಿಳಿಯಲಾದಿಪುರಾಣಪೂರುಷನ || ೪೨ ||

ನಾರಿಯೊಬ್ಬಳ ಬಿಡಿಸೆ ಕೊಲುವಡೆ
ವೈರಿಯೊಬ್ಬನೆ ನಿನಗೆ ಮಾಯಾ
ಚಾರಣೆಯ ಲೀಲೆಗಳಿದೆಲ್ಲಾ ಅಬ್ಜಭವನಿಂಗೆ ||

---

1 ಭಾವೆ (ಖ)

ಕಾರಣನು ನೀ ನಿನ್ನ ಮನುಜವ
ತಾರ ನಟನೆಯು ಜನ್ಮಕರ್ಮವ
ನಾರರಿಯರೀ ಜಗಕೆ ಸುಕಥಾಶ್ರವಣಕರವೆಂದು ‖ ೪೩ ‖

ಕೆಲರು ಕೌಸಲೆ ಹಿಂದೆ ತಪದಿಂ
ಒಲಿಸೆ ಜನಿಸಿದನೆಂದು ಕೆಲರೀ
ಖಳರ ಬಾಧೆಯಲವನಿ ಕುಸಿಯಲು ದನುಜರನು ಕೊಲಲು ‖
ಇಳಿದನೆಂಬರು ಕೆಲರು ದಶರಥ
ನೊಲವಿಗೆಂಬರು ಕೆಲರು ಭಕ್ತರ
ಸಲುಗೆಗೆಂಬರು ಕೆಲರಜನು ಬೇಡಿದ ಗುಣದಲೆಂದು ‖ ೪೪ ‖

ನಿನ್ನ ಚರಣವ ಕಂಡು ಕೆಲಬರು
ನಿನ್ನ ಮಹಿಮೆಯ ಕೇಳಿ ಕೆಲಬರು
ನಿನ್ನ ನಾಮವ ಪಾಡಿ ಕೆಲಬರು ಭವ ಮಹಾಂಬುಧಿಯ ‖
ಹರ್ಣವವ ಕಳಿವರು ಗಡಾ ನೆರೆ
ನಿನ್ನನರಿವನೆ ಗುಣ ವಿಹೀನನು
ನಿನ್ನ ಮಾಯಾ ಬದ್ಧ ನಿನ್ನನು ಹೊಗಳಿ ಮೆಚ್ಚಿಸಲು ‖ ೪೫ ‖

ನಮಿಸುವೆನು ರಘುಕುಲ ಲಲಾಮನ
ನಮಿಸುವೆನು ಶರಚಾಪಧಾರಿಗೆ
ನಮಿಸುವೆನು ಸುಗ್ರೀವ ಸೌಮಿತ್ರೀ ಸಮೇತಂಗೆ ‖
ನಮಿಸುವೆನು ಸುಜನಾರ್ತಿಹಾರಿಗೆ
ನಮಿಸುವೆ ಖಳಧೂರ್ತವೈರಿಗೆ
ನಮಿಸುವೆನು ಸಂಪೂರ್ಣ ಚೈತನ್ಯಾತ್ಮರೂಪಂಗೆ ‖ ೪೬ ‖

ಈ ಪರಿಯ ನುತಿಸಲಿಕೆ ಶರಣ ಹೃ
ತ್ತಾಪಹರ ನಗುತೆಂದ ಬಾರೇ
ನೌಪಚಾರವೆ ಯೋಗಿನಿಯೆ ಮದ್ಭಕ್ತಜನಕುಳ್ಳ ‖

ದೀಪಿತೇಚ್ಛೆಯ ಹೇಳೆನಲಿಕಾ
ಶ್ರೀ ಪದಾಂಬುಜಕೆರಗಿ ನುಡಿದಳು
ಗೌಪಿತವ ರಘುನಾಥ ಭಕುತಿಯನೀವುದೆನಗೆನುತ ॥ ೪೭ ॥

ಆವ ಯೋನಿಯಲಾವ ಜಾತಿಯ
ಲಾವ ದೇಶದಿ ತನಗೆ ಕರ್ಮವ
ಶಾ ವಿಶಿಷ್ಟದಿ ಜನಿಸಿದಡು ನಿಶ್ಚಲಿತೆಯಿಂದೊಲಿದು ॥
ದೈವ ನಿನ್ನಯ ಭಕುತ ಜನರನು
ಸೇವಿಸುವ ವರವಿತ್ತು ದೂರಾವ
ದೈವವುಳ್ಳ ದುರಾತ್ಮರೊಡನಿರದಂತೆ ರಘುನಾಥ ॥ ೪೮ ॥

ನನ್ನ ನಾಲಿಗೆ ರಾಮ ರಾಮಾ
ಪನ್ನ ವತ್ಸಲಯೆನುತಿರಲಿ ಬೇ
ಕೆನ್ನ ಕಿವಿ ನಿಜಗುಣ ಚರಿತ್ರವ ಕೇಳುತಿರಬೇಕು ॥
ನಿನ್ನ ಮೂರ್ತಿಯ ಕರವು ಪೂಜಿಸು
ತೆನ್ನ ಶಿರವೆರಗುತ್ತಿರುತ ಸಂ
ಪನ್ನ ಮೂರ್ತಿಯು ಹೃದಯದನುದಿನ ನೆನೆವುತಿರಬೇಕು ॥ ೪೯ ॥

ನೀಲಮೇಘನಿಭಾಂಗ ಸೀತಾ
ಬಾಲೆ ಲಕ್ಷ್ಮಣ ಸಂಯುತದ ವನ
ಮಾಲೆಯ ಶ್ರೀವತ್ಸ ಕೌಸ್ತುಭಹಾರ ಝಳವಟೆಯ ॥
ಲೋಲ ಮಣಿಕುಂಡಲದ ತಾಂಡವ
ಭಾಳರಂಜಿತ ನಸುನಗೆಯ ಸುವಿ
ಶಾಲ ಧರ ಪಲ್ಲವದರುಣ ಬಿಂಬೋಷ್ಠ ದೀಧಿತಿಯ ॥ ೫೦ ॥

ಮಿಸುಪ ತಾರಾದಂತೆ ಪಂಙ್ಕ್ತಿಯ
ನೊಸಲ ತಿಲಕದ ಚೆಲುವ ಭ್ರೂಲತೆ
ಯಸೆಳುಗಂಗಳ ತುರುಗೆವೆಯ ಸುಳಿಗುರುಳು ಮಾರ್ಪೊಳೆವ ॥

ಕುಸುರಿಗೆಲಸದ ಸೂರ್ಯ ಕೋಟಿ
ಪ್ರಸರ ಮಣಿಗಣ ಮಕುಟ ಖಚಿತದ
ಕುಸುಮ ರಾಜಿಯ ಬಳಲು ಮುಡಿಯನು ನೆನೆವುತಿರಬೇಕು || ೫೧ ||

ಕರಯುಗದ ಕಂಕಣದ ತೋಳ್ಬಳೆ
ಬೆರಳ ಮುದ್ರಿಕೆ ಜೂಳೆಗಡಗದ
ಶರಧನುವ ಧರಿಸಿರ್ದ ಭಕುತರಿಗಭಯವನು ಕೊಡುವ ||
ಉರದ ತ್ರಿವಲಿಯು ನಿಮ್ನನಾಭಿಯು
ತರತರದ ವರರೋಮರಾಜಿಯ
ವರನಿತಂಬದ ಪೀತವಸನಾಲಂಕೃತದ ಹರಿಯ || ೫೨ ||

ಮಣಿಗಣದ ಕಾಂಚೀ ಕಳಾಪದ
ರಣತ ರತುನೂರುಗಳ ಕರಿಕರ
ದೆಣಿಕೆಗಳ ದರ್ಪಣದ ಜಾನುದ್ವಯದ ಜಂಘೆಗಳ ||
ಸೆಣಸು ಹಾಹೆಯದೊಡರು ಗುಲ್ಫದ
ಘಣಘಣಿಸುವಂದಿಗೆಯ ದಿವಿಜ
ಪ್ರಣತ ಮುಕುಟ ವಿರಾಜಿತದ ಶ್ರೀ ಪಾದ ಪಂಕಜವ || ೫೩ ||

ಇಂದು ನಭ ಮಂಡಲದ ಪವಳದ
ವೃಂದಲತೆವೆರಳುಗಳಡಿಯಲರ
ವಿಂದ ಝುಷ ಯವಲತೆಯ ಲಾಂಛನದಿಂದ ರಂಜಿಸುವ ||
ಇಂದಿರೆಯ ಮೋಹಿಸುವ ಮುನಿ ಹೃ
ನ್ಮಂದಿರದಿ ಬೆಳಬೆಳಗುತಿಪ್ಪೀ
ಚಂದ ಮೂರ್ತಿಯ ನೆನೆವುತಿರಬೇಕೆನಗೆ ಹೃದಯದಲಿ || ೫೪ ||

ಈ ಪರಿಯ ರೂಪೆನ್ನ ಹೃದಯದಿ
ದೀಪಿಸಲು ಬೇಕನವರತ ನೆನ
ಗೀ ಪರಿಯ ವರವೆಂದಡಾಗಲಿ ಕೊಟ್ಟೆನಂಜದಿರು ||

ರೂಪವತಿ ನೀ ಬದರಿಕಾಶ್ರಮ
ತೋಪಿಗೈದಲ್ಲಿನ್ನ ಭಾವಿಸು
ತಾ ಪರಮಋಷಿ ನಿವಹದೊಡನಿದ್ದೀ ಕಳೇವರವ || ೫೫ ||

ಚಿನ್ಮಯನಾಗಿರ್ದ ನನ್ನನೆ
ಧನ್ಯೆ ಕೊಡುವೆನೆನಲಮೃತ ಸಮ
ದುನ್ನತೋಕ್ತಿಯ ಕೇಳಿ ಭಕುತಿಯಲೆರಗಿ ಬೀಳ್ಕೊಂಡು ||
ಚೆನ್ನೆ ಬದರಿಷಂಡವನ ಸಂ
ಪನ್ನ ತೀರುತದಳಕನಂದಾ
ಸನ್ನಿಧಿಗೆ ಬಂದಿದ್ದಳಾ ರಾಮನನೆ ನೆನೆವುತ್ತ || ೫೬ ||

ಬಳಿಕ ಕಾಯವ ಬಿಟ್ಟು ಪುಣ್ಯ
ಸ್ಥಳದಲ್ಲೈದಿದಳಾದು ಭಾವವ
ಕಳಿದು ತತ್ವಾವಳಿಯ ಸಮ್ಮಂಧವನು ನೆರೆ ಮೀರಿ ||
ಅಳಿಯದುದಿಸದ ಸತ್ಯಸನ್ಮಯ
ದಲಘು ಸಾಕ್ಷಾದ್ವಿಷ್ಣು ಪದದಾ
ಸ್ಖಲಿತ ಪರಮಾನಂದ ನಿಜಪರಿಪೂರ್ಣಮಯೆಯಾಗಿ || ೫೭ ||

ಸಂಧಿ ಮೂವತ್ತೈದು ಪದಗಳು
ಸಂದವುಚ್ಚನ್ನವದ ಸಂಖ್ಯದ
ಲೊಂದಧಿಕವಿದನೋದಿ ಕೇಳಿದಡಘ ವಿನಾಶನವು ||
ದ್ವಂದ್ವವಳಿದಾತ್ಮಾನುಭವದಲಿ
ನಿಂದು ತನ್ಮಯನಾಗಿ ಪರಮಾ
ನಂದಗುರು ನಿತ್ಯಾತ್ಮಲಕ್ಷ್ಮಿನೃಸಿಂಹನೊಲವಹುದು || ೫೮ ||

ಅಂತೂ ಸಂಧಿ ೩೫ ಕ್ಕೆ ಪದ ೧೫೫೫ ಕ್ಕೆ
ಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ



॥ ಶ್ರೀ ರಾಮಚಂದ್ರಾಯ ನಮಃ ॥



# ಮೂವತ್ತಾರನೆಯ ಸಂಧಿ

## ವಾನರರು ಪಕ್ಷಿರಾಜ ಸಂಪಾತಿಯನ್ನು ಕಂಡಿದ್ದು

ಸೂಚನೆ ॥ ಋಕ್ಷವಾನರರರಸಿ ಸೀತೆಯ
ದಕ್ಷಿಣಾಬ್ಧಿಯ ತೀರಕೈತರೆ
ಪಕ್ಷಿರಾಜನ ಕಂಡರಾ ಸಂಪಾತಿಯೆಂಬವನ ॥

ಪದ ॥ ಶುದ್ಧ ಬುದ್ಧಿ ವಿಬುದ್ಧನದ್ವಯ
ಬುದ್ಧರಹಿತ ನಿರಂಜನಾತ್ಮಕ
ಅದ್ವಯಿತ ಪರವಸ್ತು ತಾನಾಗಿದ್ದು ತೋರುತಿಹ ॥
ಬದ್ಧವಾಗಿಯೆ ತೋರದಿಹ ತಾ
ಸಿದ್ಧರರಸಿಯು ಕಾಣದಿರುತಿರೆ
ಅದ್ವಯಿತ ಪರಬೊಮ್ಮ ರಾಮ ಪದಾಬ್ಜವನು ನೆನೆವೆ ॥ ೧ ॥

ಮತ್ತಕಾಶಿನಿ ಕೇಳು ಕಪಿಪಡೆ
ಯೆತ್ತ ವನದಲಿ ವೃಕ್ಷ ಷಂಡದಿ
ಹೊತ್ತ ಚಿಂತಾ ಮೋಹದಲಿ ಕಲುಷಿತ ಶರೀರಗಳು ॥
ಎತ್ತಲರಸಿಯು ಕಾಣೆ ಸೀತೆಯ
ನುತ್ತ ಬಳಿಕಂಗದನು ವಾನರ
[illegible]

ಅರಸಿ ವನದಲಿ ತಿರುಗಿ ಕಿಂಚಿತು
ಕೊರತೆ ತಿಂಗಳು ಆಯಿತಿನ್ನೂ
ಬರಿದೆಯಲ್ಲದೆ ಸೀತೆಯಿರವನು ಕಂಡುದೇ ಯಿಲ್ಲ ||
ಅರಸಿನಾಜ್ಞೆಯ ಮಾಡದಾದೆವು
ಮರಳಿದರೆ ಕಿಷ್ಕಿಂದಿಗುಂಟೇ
ಹರಿಯುದುಳಿಯನು ಜೀವವನೆ ಸುಗ್ರೀವನೆಲ್ಲರಿಗೆ || ೩ ||

ಶತ್ರು ಸುತನಲಿ ನಾನವಗೆ ಕೊಲ
ಲಿತ್ತ ದಯೆ ಸುಗ್ರೀವಗೆನ್ನನು
ಸತ್ಯನಿಧಿ ರಾಘವನು ರಕ್ಷಿಸಲಿದ್ದೆ ರಾಘವನ ||
ಉತ್ತಮಾಂಗನೆಯರಸಿ ಕಾರ್ಯವ
ನಿತ್ತ ಸಾಗಿಸದಾಯಿತಾ ದು
ರ್ವೃತ್ತನಾಜ್ಞೆಯಲಳಿವುದೇನತಿ ಶಿವಶಿವಾಯೆಂದ || ೪ ||

ಘಾತಿಸದೆ ಬಿಡದೆನ್ನನಾಳಿಗೆ
ಭ್ರಾತೃ ಪತ್ನಿಯ ಮಾತೃ ಸಮೆಯನು
ಪಾತಕಿಗೆ ದಯವಿಲ್ಲವಾತನ ಕೈಯ್ಯ ಸಾವುದರಿಂ ||
ಪೋತನನ ಬಳಿಗೈದದೇ ನಾ
ವೀ ತೆರದಲೆಲ್ಲವರು ಸಾವವು
ಯೇ ತೆರದಲಾದರ್ರು ಯೆನುತ ಕಣ್ಣೀರ ಸೂಸಿದನು || ೫ ||

ಕೇಳಿ ಕಪಿಗಳು ಕಂಗಳುದಕದ
ಬಾಲಿಪುತ್ರಂಗೆಂದರಕಟಾ
ಬೀಳುಗೊಡು ಶೋಕವನು ನಿನ್ನ ಪ್ರಾಣ ರಕ್ಷೆಯನೆ ||
ಪಾಲಿಸುವೆವಾವೆಲ್ಲ ಗುಹೆಯಲಿ
ಲೀಲೆಯಿಂದಿಹ ಸಕಲ ಸೌಖ್ಯದ
ಜಾಲದಿಂದ ಪುರೋಸಮವು ಭಯವೇಕೆ ನಿನಗೆತುತ || ೬ ||



ಜಾಂಬವಂತನಿಂದ ಸಾಗರ ದಾಟಲು ಹನುಮನಿಗೆಪ್ರೇರಣೆ



ಸಂಪಾತಿಯೊಂದಿಗೆ ವಾನರರ ಸಮಾಗಮ

ಅದನು ಕೇಳ್ದಾ ಹನುಮ ಮೆಲ್ಲನೆ
ಮುದದಿ ತಕ್ಕಿಸಿಯಂಗದನ ನಯ
ವಿದನು ನುಡಿದನು ನಿನಗದೇಕೀ ದುರ್ವಿಚಾರವಿದು ||
ಮೊದಲೆ ಸುಗ್ರೀವಂಗತಿಪ್ರಿಯ
ವದರವೋಲಾ ರಾಮ ಲಕ್ಷ್ಮಣ
ರೆದೆಯ ಜೀವದ ಪೋಲು ಕಂಡಿಹರನುದಿನವು ನಿನ್ನ || ೭ ||

ರಾಮಗಾ ಸುಗ್ರೀವಗಿಮ್ಮಡಿ
ಪ್ರೇಮ ನಿನ್ನಲ್ಲುಂಟು ಹತ್ತಿರೆ
ನಾ ಮುದವ ಮಾಡುತ್ತಿಹೆನು ಸಂದೇಹ ಬೇಡಿದಕೆ ||
ಈ ಮಹಿಯ ಗುಹೆಯೊಳಗಿರುವವೆಂ
ದೀ ಮರಳು ವಾನರರು ನುಡಿದರೆ
ರಾಮಬಾಣಕಭೇದ್ಯದೆಡೆಯುಂಟೇ ಜಗತ್ರಯದಿ || ೮ ||

ಹೇಳಿದೆನು ನಿನ್ನೊಡನೆ ತಾವನು
ಕೂಲದಿಂದಿಹೆವೆಂದು ಹುಸಿಯದು
ನಾಳೆ ನಿಲುವವೆ ಬಿಟ್ಟು ಮನೆಮಕ್ಕಳನು ಹೆಂಡಿರನು ||
ಗಾಳಿಗೊಡ್ಡಿದ ಸೊಡರಿನಂದದಿ
ಳಾಳ ಮತ್ತೊಂದತಿ ರಹಸ್ಯದ
ಮೂಲಗೌಪ್ಯವ ಮಗನೆ ಮನದಲಿ ತಿಳಿದುಕೊಳ್ಳೆಂದ || ೯ ||

ರಾಮ ಮಾನವನಲ್ಲ ತ್ರಿಜಗ
ಸ್ವಾಮಿ ನಾರಾಯಣನು ನಿತ್ಯನು
ಭೂಮಿಸುತೆ ಭಗವತಿ ಜಗಸೃಷ್ಟ್ಯಂತಕಾರಣದ ||
ಆ ಮಹಾಮೂಲ ಪ್ರಕೃತಿ ಕಣ
ಯಾ ಮಹೀಯಾಂತೀರ್ದ ಫಣಿಪತಿ
ನಾಮದಿಂ ಲಕ್ಷ್ಮಣನು ಪಮರಂಶಿಗಳು ನಾವೆಂದ || ೧೦ ||

ಅಜನು ಬೇಡಲು ಮನುಜನಾಗೀ
ತ್ರಿಜಗರಕ್ಷಿಸಲಿಳಿದ ನೀ ಗಡ
ಕುಜನ ರಾಕ್ಷಸ ಶಿಕ್ಷೆಗೋಸುಗ ವಾದಿವಹ ವಿಷ್ಣು ||
ಭಜಕ ಪಾರ್ಷದರಾವು ಸರ್ವರು
ನಿಜದಿ ಮುನ್ನ ವಿಕುಂಠ ನವಗೀ
ಸುಜನ ಸೇವ್ಯನ ಸೇವಿಸಲು ಕಪಿರೂಪವಾಗಿಹೆವು || ೧೧ ||

ಈಗ ಸೇವಕರಾಗಿ ಸೇವಿಸಿ
ಯೋಗಿದೂರನ ಬಳಿಕವೆಲ್ಲರು
ಹೋಗಿ ವೀವೈಕುಂಠಪತಿ ಸುಖವಿಹವು ವೊದಲಂತೆ ||
ಭೋಗಿಶಯನನ ಸೇವೆ ಜನ್ಮದ
ನೀಗುವಾತಂಗಲ್ಲದಸುದೇ
ರಾಗ ಲೋಭದ ಹಮ್ಮಿನಿಂ ಮೂಢಾತ್ಮರಿಂನೆಂದ || ೧೨ ||

ತನುವನೇ ತಾನೆಂದಿರದ ಸುಖ
ಜನಿಸಲಿಚ್ಛಿಸಿ ದುಃಖಜಾಲವ
ನನುವದಿಸಿ ಜರೆಮರಣವಾದಿವ್ಯಾಧಿ ತಾಪಗಳು ||
ಅನುದಿನವು ಭೋಗಿಸುತೆ ಪಾಪವ
ತನುವಿನಿಚ್ಛೆಗೆ ಮಾಡಿ ಮರಮರ
ದನುಭವಿಸುವರು ನರಕವನು ಹರಿಭಕುತಿ ವಿರಹಿತರು || ೧೩ ||

ಕಾಕ ಗೃದ್ಧ್ರಶ್ವಾನ ಭೋಜ್ಯದ
ಬೀಕಲೊಡಲಲಹಂಕರಿಸುತ ವಿ
ವೇಕದಿಂ ದೇಹವನೆ ಲಕ್ಷಿಸಿ ತತ್ಸತೀ ಸುತರ ||
ಬಾಕುಳತ್ವದಲಲ್ಪ ವಿಷಯದ
ಕಾಕುವಾಸನೆ ಹಿಡಿದು ತನ್ನ ವಿ
ವೇಕಿಸದೆ ಮರೆದಿಹುದು ನಿಜವನು ಮೂಢಜನವೆಂದ || ೧೪ ||

ಮುನ್ನ ತಾನೂ ತಾನೆ ಪರಮನ
ನೆನ್ನನನ್ವಯ ಶುದ್ಧ ಕೇವಲ
ಚಿನ್ಮಯನಹ ವಿಂಸದಾಸದ ಸದ್ವಿಭೇದದಲಿ ||
ಭಿನ್ನ ಪುರುಷ ಪ್ರಕೃತಿ ತೋರಲು
ಸನ್ನಿಧಿಯು ಮಹಹಮ್ಮು ಮೂವರು
ತ್ಪನ್ನವಾಯಿತು ಮೂರುಗುಣದಿಂ ಬಳಿಕ ಜಗವಾಯ್ತು || ೧೫ ||

ಸತ್ವದಲಿ ವೈಕಾರಿಕದ ಮನ
ವೃತ್ತಿ ರಾಜಸ ತೈಜಸದಲೂ
ದ್ವೃತ್ತನಿಂದ್ರಿಯ ತಾಮಸದ ಭೂತದಲಿ ಭೂತಗಳು ||
ವೊತ್ತ ಮೂರೇ ಮೇಳವಡೆಯಲು
ಭಿತ್ತರದ ತನುವಾಯ್ತು ಚೇತನಿ
ಕರ್ತೃವಾದನು ಜೀವನಾ ದೇಹೇಂದ್ರಿಯಂಗಳಿಗೆ || ೧೬ ||

ಉಳ್ಳ ನಿಜವನು ಮರೆದುದೇಹದ
ಬಳ್ಳಿದೊಡಕನು ಸಿಕ್ಕಿ ವಿಷಯದ
ಖುಲ್ಲದಾಶಾವಶದ ತತ್ಸಮ್ಮಂಧಿ ಬಾಂಧವರ ||
ಕೊಳ್ಳದಲಿ ತೊಳಲುತ್ತ ನಿಜ ಬೇ
ರಿಲ್ಲೆನುತಯಚ್ಚುತನ ಪದಯುಗ
ಪಲ್ಲವದ ಭಕುತಿಯನುಳಿದು ವೈರಾಗ್ಯವಳಿವಡದೆ || ೧೭ ||

ಮರಳು ಮಾನವ ಮುದ್ದ ಮುದ್ದಾ
ಪರಿಯ ಹೆಬ್ಬುಲಿಯಾಗಿ ಹರುಗಣೆ
ಯರಿಯದಾ ಚೋಹದಲೆ ತೊಳಲುವವೋಲದಾತುಮನು ||
ಹರಿಯ ಮಾಯಾವಶದಿ ಪರಮನು
ಬೆರಸಿಜೀವತೆಯಾದ ಜೀವನು
ಪರಿಪರಿಯ ವಿಷಯದಲಿ ತಿರ್ಯಗ್ಜನನ ಬರುತಿಹುದು || ೧೮ ||

ಈ ಪರಿಯ ಜೀವತ್ವ ಹಮ್ಮಿನ
ಕಾಪಥವ ಕಳೆದತುಳ ಸೌಖ್ಯಃ
ಶ್ರೀ ಪದವನೈದುವಡೆ ಸೇವೆಯು ಮುಖ್ಯ ಮುರಹರನ ||
ಭಾಪುರೇ ನಾಮಾಮುಕುಂದ ಸ
ಮೀಪದ ಪರಿ ದುಃಖಗೊಂಬರೆ
ತೋಪನವಗೆತ್ತಣದೆನುತ್ತಂಗದನ ತಿಳುಹಿದನು || ೧೯ ||

ಎನುತವನನಾಶ್ವಾಸಿಸುತ್ತಾ
ಹನುಮ ಮುಖ್ಯರು ವಿಂಧ್ಯಗಿರಿಕಾ
ನನದಿ ಸೀತೆಯನರಸಿ ಕಾಣದೆ ದಕ್ಷಿಣಾಂಶದಲಿ ||
ವನಧಿತೀರ ಮಹೇಂದ್ರ ಪರ್ವತ
ಕನುಪಮರು ನಡೆತರಲು ಕಂಡರು
ಘನಭಯಂಕರ ಸಾಗರವನುಲ್ಲೋಲದಾಗರವ || ೨೦ ||

ಮೇಲು ಮೇಲುಪ್ಪರಿಸಿ ತೆರೆತೆರೆ
ಮಾಲೆಗಳಲುಕ್ಕುಕ್ಕಿ ಘೂರ್ಮಿಸಿ
ವೇಲೆಯನು ಗಬ್ಬರಿಸಿ ನೆರೆ ಡಿಂಡೀರ ತುಂತುರಿನ ||
ಭೀಳಗಾಧದ ಚಕ್ರನಕ್ರ ಕ
ರಾಳ ತಿಮಿತಿಮಿಗಳಲಿ ನೋಡುವ
ಡಾಲಿ ಭಯಗೊಳೆ ಕಪಿಬಲಾಂಬುಧಿ ನಿಂತುದೀ ತಡಿಗೆ || ೨೧ ||

ತಡೆದು ಬಲ ಕಂಗೆಟ್ಟು ಚಿಂತೆಯ
ಹಡಪಿನಿಂ ತಮ್ಮೊಳಗೆ ಯುಕ್ತಿಯ
ನೊಡನೊಡನೆ ಯೋಚಿಸುತ ಬಲುಭುಜರಂಗದಾದಿಗಳು ||
ನುಡಿದರಕಟಾ ಮಾತು ತೀರಿ
ತ್ತೊಡತಿ ಸೀತೆಯ ಕಾಣೆ ರಾವಣ
ದಡಿಗನೆಲ್ಲಿಹನರಿಯಬಾರದು ಶರಧಿ ಬಲುಹಾಯ್ತು || ೨೨ ||

ಹೋದಡುಂಟೇ ಮರಳಿ ಜೀವವ
ಸೇರಿಸುವ ಸುಗ್ರೀವನದರಿಂ
ದಾದ ಪರಿಯಿಂದಿಲ್ಲಿ ಮರಣವ ಮಾಳ್ಪೆವೆಂದೆನುತ ||
ಮೇದಿನಿಯ ಮೇಲಿಕ್ಕಿ ದರ್ಭೆಯ
ನಾದರದಿ ನಿಶ್ಚೈಸಿ ರಾಮನ
ಪಾದವೇ ಗತಿಯೆನುತ ಕುಳಿತುದು ರಾಯ ಕಪಿಕಟಕ || ೨೩ ||

ಆ ಸಮಯದಿ ಮಹೇಂದ್ರ ಪರ್ವತ
ವಾಸಿ ಗುಹೆಯಿಂ ಗೃಧ್ರನೊಂದತಿ
ಭೀಷಣದ ಗಿರಿಯಂತೆ ಹೊರವಡುತವರ ನುಡಿಗೇಳಿ ||
ತೋಷದಲಿ ನೋಡುತ್ತ ನುಡಿವನು
ದೀ ಸಮೂಹವ ಕ್ರಮದ ತಾನುದ
ರಾಶನವ ಮಾಡುವೆನೆನುತ್ತವೆ ಮೆಲ್ಲನಿಳಿದುದದು || ೨೪ ||

ಕೇಳಿ ಗೃಧ್ರನ ನುಡಿಯ ಕಪಿಗಳ
ಜಾಳ ಭಯದಿಂದೆಂದವಕಟಾ
ಸ್ಥೂಲಗೃಧ್ರನು ನುಂಗದುಳಿಯನು ನಮ್ಮನೆಲ್ಲರನು ||
ಬಾಳು ವಿಫಲದಿ ರಾಮಕಾರ್ಯದ
ಮೇಳಕಿಲ್ಲದೆ ವೊಡೆಯನಾಜ್ಞೆಯ
ಪಾಲಿಸದೆ ಹೋಯ್ತೆಂದು ಹದ್ದಿನ ತುಂಡ ತುತ್ತಾಗಿ || ೨೫ ||

ಸುಡಲಿ ನಮ್ಮ ಜಟಾಯುವೇ ನಿ
ನ್ನೊಡಲು ವಿಡಿದುದು ಸಫಲವಾಯಿತು
ಕಡುಗಲಿಯೆ ಭಾಪಹುದು ನೀನಾ ರಾಮಗೋಸುಗರ ||
ಮಡಿದು ಮೋಕ್ಷವ ಯೋಗಿಗಳಿಗೂ
ಪಡೆಯ [1]ಪದ[1]ವೈದಿದೆಯಲಾ ಯೆನೆ
ಪಡೆಯ ಮಾತಿಗೆ ಹರ್ಷದಲಿ ಸಂಪಾತಿಯಿಂತೆಂದ || ೨೬ ||

---

1 ದುದ (ಖ)

ಆರು ನೀವಮೃತೋಪಮೋಕ್ತಿಯ
ಸಾರದೀ ಮದ್ಭ್ರಾತೃ ವಾರ್ತೆಯ
ನಾರಯಿದು ನಿಮ್ಮೊಳಗೆ ನುಡಿದಿರಿ ನಷ್ಟ ದೆಸೆಯಿಂದ ||
ಕ್ರೂರ ಭಯ ಬೇಡಿನ್ನಿರೈ ಕಪಿ
ವೀರರಿರ ತನಗೆನಲು ಬಳಿಕಾ
ಧೀರನಂಗದನೆಂದನಾ ಸಂಪಾತಿಗುತ್ತರವ || ೨೭ ||

ದಶರಥನ ಮಗ ರಾಮನನುಜನ
ಹೆಸರು ಲಕ್ಷ್ಮಣಸೀತೆ ಸಹಿತವ
ವಸತಿಯಾಗಿರೆ ವನದಿ ಮೃಗಯಾವ್ಯಸನಕೊಂದು ದಿನ ||
ಶಶಿಮುಖಿಯಯುಳಿದ್ದೈದೆಯುವರೊ
ಬ್ಬಸುರ ರಾವಣ ಕದ್ದನವಳನು
ದೆಸೆಗೆ ಬ್ಯಾಬಿಡತ್ತೈದಿದಳು ಹಾ ರಾಮ ರಾಮೆನುತ || ೨೮ ||

ಆದನು ಕೇಳಿ ಜಟಾಯುವೆಂಬವ
ನದುಭುತದ ಬಲವಂತವೀರ್ಯನು
ಸುದತಿಯನು ಬಿಡು ಪಾಪಿಯಲ್ಲದಡಿದಿರು ನಿಲ್ಲೆನುತ ||
ಕದನಗಲಿ ಕಾದಿದನು ಬಹುವಂ
ಗದಲಿ ರಾಮಾರ್ಥದಲಿ ಕಾಯುವ
ಬಿದಿರಿ ಬಿದ್ದನು ಬಳಿಕ ಕಪಟಿಯು ಖಡುಗ ಹತಿಯಿಂದ || ೨೯ ||

ಸುತ್ತಿ ಸೀತೆಯನರಸಿ ರಾಮನು
ಸತ್ತ ಪಕ್ಷಿಯ ಸುತ್ತವಂಗೊಲಿ
ದಿತ್ತ ತನ್ನಯ ನಿಜವ ಸುಗ್ರೀವನಲಿ ಸಖ್ಯವನು ||
ಸತ್ಯ ಶಪಥವನಗ್ನಿ ಸಾಕ್ಷಿಯ
ಲಿತ್ತು ಬಾಲಿಯ ಕೊಂದು ಕಪಿಗಳ
ನೊತ್ತಕೊಡೆಯನ ಮಾಡಿದನು ಸುಗ್ರೀವನನು ರಾಮ || ೩೦ ||

ಬಳಿಕ ಸೀತೆಯುಲರಸಲೆಮ್ಮನು
ಕಳುಹಿದನು ಸುಗ್ರೀವ ತಿಂಗಳ
ದೊಳಗೆ ಸೀತೆಯ ಕಂಡು ಬಾರದದೊಡಲನಳಿವಂತೆ ||
ಕೊಲುವೆನೆಂದಡೆ ನಾವು ದಿಸೆಯನು
ತೊಳಲಿ ಕಾಣದೆ ಬಂದೆವಿಲ್ಲಿಗೆ
ಕಳಿಯಿತ್ತಿಲ್ಲಿಗೆ ಮಾಸ ಚಿಂತೆಯಲಿಲ್ಲಿ ಕುಳಿತಿಹೆವು || ೩೧ ||

ಬರಿದೆ ಮರಳಿಧಡೆಮ್ಮನುಳುಹನು
ತೊರೆದು ದುಸ್ತರ ಮುಂತೆ ಹೋಹಡೆ
ಚರಸಿ ಸೀತೆಯು ಕಾಣದೀಗಾವೆಲ್ಲವೊಂದಾಗಿ ||
ಮರುಗಿ ದೇಹವ ಬಿಡಲು ಯೋಚಿಸು
ತಿರಲುತ್ತೈದಪೆಯುಬುಧಿ ತೀರದ
ಲರುಹು ಸೀತಾಪಥದಲರಿತಡೆ ವಿಹಗ ನೀನೆಂದ || ೩೨ ||

ಕೇಳಿಯಂಗದ ವಚನವನು ಹೀ
ಹಾಳಿಸುತ್ತಾ ವಿಹಗನೆಂದನು
ಬಾಳು ವಾನರ ಭ್ರಾತೃವೆನಗೆ ಜಟಾಯುವೆಂಬುವನು ||
ಕಾಲ ಹಲ ಸಾಹಸ್ರವಾಯಿತು
ಕೇಳದಾತನ ವಾರ್ತೆಯನು ನಾ
ನೇನ ಮಾಳ್ಪೆನು ಯೆನುತ ಯೋಚಿಸಿ ಹಾಯ ಮಾತ್ರವನು ||೩೩||

ಭ್ರಾತಗುದಕಾಂಜಲಿಯ ನೀಡಲು
ಪೂತಿ ಜಲವಂತಿಕಕೆ ನನ್ನನು
ನೀತಿವಂತರಿರ್ೈದಿಸಿದಡಾ ಮೇಲಣಸ್ಥಿತಿಯ ||
ನಾ ತಿಳಿದುದನು ಪೇಳ್ವೆನೆನಲು
ತ್ಕಾಥೆಯಿಂದಾತನನು ಪ್ಲವಹಾ
ವ್ರಾತ ಹೊತ್ತೊಯ್ದಿಳುಹಿದವು ಜಲನಿಧಿಯ ತೀರದಲಿ || ೩೪ ||

ಮಿಂದವನು ಜಲಧಿಯಲಿ ಭ್ರಾತೃವಿ
ಗೆಂದು ಕೊಡಲು ಜಲಾಂಜಲಿಯ ನೆರೆ
ತಂದವನ ಮಗುಳಿಳುಹಿದವು ಕಪಿವರನು ತಾ ಮುನ್ನ ||
ಸಂದ ಸುಕ್ಕಳದಲ್ಲಿ ಬಳಿಕವ
ನೆಂದನಾ ವಾನರರಿಗಧಿಕಾ
ನಂದದಲಿ ಸಂಪಾತಿ ರಾಘವ ಭೃತ್ಯ ಸುಪ್ರೀತ || ೩೫ ||

ಶರಧಿಯಲಿ ಲಂಕೆಯು ತ್ರಿಕೂಟದ
ಗಿರಿಯ ಶಿರದಲ್ಲಿಹುದಶೋಕಾ
ತರುವನದ ಮಧ್ಯದಲಿ ದಾನವಿಯರ ಸುರಕ್ಷಣದಿ ||
ಧರಣಿಸುತೆಯಿಹಳಲ್ಲಿಗದು ತಾ
ನಿರುತ ಶತಯೋಜನಗೆ ವಿಸ್ತರ
ದಿರವು ಕಾಂಬುದು ಲಂಕೆ ಸೀತಾದೇವಿ ಸಹವಾಗಿ || ೩೬ ||

ಗೃಧ್ರ ದೃಷ್ಟಿಯು ದೂರ ಕಾಂಬುದು
ಬದ್ಧ ಸಂಶಯ ಬೇಡವಾವನು
ವಾರ್ಧಿಯನು ಲಂಘಿಸುವನಾತನು ಸೀತೆಯನು ಕಂಡು ||
ಯಿದ್ದೆಡೆ ಗೆಬಹ ನಾನೆ ಧಿಟ ಕೊಲು
ತಿದ್ದನಾ ರಾವಣನ ಪಕ್ಕವು
ಬಿಷ್ಟು ಹೋಯಿತು ವೈರಿಯಲಿ ಮದ್ಭ್ರಾತೃಘಾತಕನು || ೩೭ ||

ಲಂಘಿಸಿಯೆ ಶತಯೋಜನವ ಸೀ
ತಾಂಗನೆಯನೊಳಹೊಕ್ಕು ಕಂಡವ
ಳಿಂಗಿತದಿ ಮಾತಾಡಿ ಶರಧಿಯ ದಾಂಟಿ ಮರಳಿ ಬಹ ||
ಸಿಂಗರವದಾರ್ಗುಂಟು ನಿಮ್ಮೊಳು
ಹಿಂಗದೆಲ್ಲರು ಯೋಚಿಸುವುದಾ
ಹೆಂಗಳೊಯ್ದನ ಬಳಿಕ ರಾಮನು ಕೊಲುವ ಧಿಟಕೆಂದ || ೩೮ ||

ನಾನು ನಿಮಿಷಕೆ ಹೋಗುತಿದ್ದೆನ
ದೇನ ಹೇಳಲಿ ಪಕ್ಕಹೋದವು
ವಾನರರಿರ ನೀಂ ಕೇಳಿ ಮದ್ವೃತ್ತಾಂತ ಸಂಗತಿಯ ||
ಸಾನುಜರು ನಾನೂ ಜಟಾಯುವ
ನೂನ ಯವ್ವನ ಬಲದಿ ದರ್ಪಿತ
ಮಾನಿಗಳು ಪೂರ್ವದಿ ಖಗೇಶ್ವರರಾಗಿ ಜನಿಸಿದೆವು || ೩೯ ||

ಗಣಿಸೆ ನಮ್ಮೊಳು ಬಲವದಿಬ್ಬರು
ಪಣವ ಮಾಡಿಯೆ ಹಾರಿದೆವು ದಿನ
ಮಣಿಯ ಮಂಡಲ ತನಕ ಬಹುಯೋಜನ ಸಹಸ್ರವನು ||
ತೃಣವೆನುತ ಲಂಘಿಸಲು ತೀಷ್ಣೋ
ದ್ಘಣಿಗ ರವಿಕರಸುಡಲು ಮೋಹದ
ಕುಣಿಕೆಯಿಂದ ಜಟಾಯುವನು ರಕ್ಷಿಸಲು ಮರೆಯಾದೆ || ೪೦ ||

ಮುಚ್ಚಿದೆನು ಪಕ್ಕದಲವನ ತ
ನ್ನೊಚ್ಚ ಸುಟ್ಟಿತು ರವಿಕಿರಣ ಬಲು
ಕಿಚ್ಚಿನಿಂದಾಕ್ಷಣಕೆ ರಟ್ಟೆಗಳುರಿದು ತನು ಕೆಳಸೆ ||
ಬಿಚ್ಚಿ ವಿಂಧ್ಯದ ಗಿರಿಯ ಶಿರದಲಿ
ಮೂರ್ಛೆಯಿಂ ಕೆಡಹಿತ್ತು ದಿನ ಮೂ
ರೊಚ್ಚತರಿಯದೆ ದಗ್ಧ ಪಕ್ಷದಲಿದ್ದೆ ತಾನೆಂದ || ೪೧ ||

ಮೆಲ್ಲನಲ್ಲಿಂ ಪ್ರಾಣ ಬಂದಿ
ತ್ತಿಲ್ಲ ಪಕ್ಷವು ದೇಶಗಿರಿ ತಾ
ನೆಲ್ಲಿಯುಸ್ಥಳವೆಂದರಿಯದೇ ಭ್ರಾಂತ ಮನನಾಗಿ ||
ತಳ್ಳಳಿಸುತವೆ ಮೆಲ್ಲ ಮೆಲ್ಲನೆ
ನಿಲ್ಲಿಯೊಂದಾಶ್ರಮವ ಕಂಡೆನು
ಸಲ್ಲಲಿತವಾದುದನು ತತ್ಸಾಮಿಪ್ಯದೊಳಗೆಂದ || ೪೨ ||

ಚಂದ್ರಮಾಂಹಯು ಮುನಿಪ ನೋಡು
ತ್ತಿಂದನೆನ್ನೊಡ ನೀನಿದೇನೈ
ಕಂದ ಬಾ ಸಂಪಾತಿ ಪಕ್ಷದಿ ಪಾತವೇಕಾಯ್ತು ||
ಇಂದು ರೂಪವಿಕಾರವಿಂತಾ
ರಿಂದ ಬಂದುದು ನಿನ್ನುವಸು ನಾ
ಹಿಂದೆ ಬಲ್ಲೆನು ಲೋಕದಲಿ ಬಲವಂತನಾಗಿಹುದ || ೪೩ ||

ಅಕ್ಕಟಾ ಪ್ರಾರಬ್ಧವೆಂತೋ
ಧಿಕ್ಕರಿಸಿದುದು ರೂಪವಂತನ
ಪಕ್ಕ ಹೊತ್ತಿದ ಪರಿಯ ಹೇಳೆನಲೆನ್ನ ಬಹಡೆನಲು ||
ದುಕ್ಕಿಸುತ್ತಾ ನಾನು ಚರಿಸಿದ
ಮುಕ್ಕಳಾಟಿಕೆಯೆಂದೆನ[1]ತಿ[1]ಡಗೆ
ಯುಕ್ಕಿ ಮುನಿಶಾರ್ದೂಲ ನೊಡನೆನ್ನಂತರವ್ಯಥೆಯು || ೪೪ ||

ಎಂತು ಜೀವವ ಧರಿಸಿಕೊಂಡಾ
ನೆಂತು ಚರಿಸುವೆ ಪಕ್ಕವಿಲ್ಲಡ
ಕೆಂತು ಯುವ್ವನವಿನ್ನು ತನಗಿನ್ನೇನು ಗತಿಯೆನುತ ||
ಚಿಂತಿಸುತ್ತಾ ಮುನಿಪನೆರಗಿರೆ
ಶಾಂತ ಚೇತನ ದಯಕೃಪಾದ್ರ್ರಾ
ಕ್ರಾಂತಲೋಚನ ನೋಡಿ ಮಗುಳಿಂತೆಂದನೆನ್ನೊಡನೆ || ೪೫ ||

ಸಾಧು ಜನ ದರ್ಶನದಲೀತನು
ಬಾಧೆ ವಿಷಯದ ಬಾಧೆ ಕ್ಷುದ್ಭಯ
ಬಾಧೆ ಕಾಮಕ್ರೋಧ ಲೋಭಾದಿಗಳರಿಯ ಬಾಧೆ ||
ಆದಿ ದೈವಿಕ ಆದಿ ಭೌತಿಕ
ವಾದಿಯಾತ್ಮಕವೆಲ್ಲ ಕೆಡುವುದು
ನಾ ದಯಾನಿಧಿಯಲ್ಲಿ ಕಂಡೆನು ಕೇಳಿ ಕಪಿಗಳಿರ || ೪೬ ||

---

1 ಲು (ಖ)

ಎಂದು ಚಂದ್ರಮ ಮುನಿಪ ಬೋಧೆಯ
ನೆಂದಪನು ಯೆಂಬಲ್ಲಿ ಮುಗಿದುದು
ಸಂಧಿ ಮೂವತ್ತಾರು ಪದವಾ ಸಂಖ್ಯೆ ಗಿರಿದಾಯ್ತು ||
ಮುಂದಧಿಕವಿದನೋದಿ ಕೇಳಿದ
ಜೊಂದೆ ಮನದಿಂದವರನಾಶ್ರಿತ
ಬಂಧು ಗುರು ನಿತ್ಯಾತ್ಮ ಲಕ್ಷ್ಮಿನೃಸಿಂಹ ಸಲಹುವನು || ೪೭ ||

ಅಂತೂ ಸಂಧಿ ೩೬ ಕ್ಕೆ ಪದ ೧೬೪೨ ಕ್ಕೆ
ಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ



|| ಶ್ರೀ ರಾಮಚಂದ್ರಾಯ ನಮಃ ||



# ಮೂವತ್ತೇಳನೆಯ ಸಂಧಿ

## ಚಂದ್ರಮುನಿಪ ಹೇಳಿದ ದೇಹೋತ್ಪತ್ತಿಯ ವಿಚಾರ

ಸೂಚನೆ || ಚಂದ್ರಮಾಖ್ಯ ಮುನೀಂದ್ರ ಪೂರ್ವದ
ಲೆಂದ ದೇಹೋತ್ಪತ್ತಿಯನು ಕಪಿ
ವೃಂದಕಭಿವರ್ಣಿಸಿದನಾ ಸಂಪಾತಿ ಸುಖಯಾತಿ ||

ಪದ || ನೀಲ ಮೇಘ ನಿಭಾಂಗ ಕಾಂತಿಯ
ಮೇಲೆ ರಂಜಿಪ ಹಾರದಿಂಗಳ
ಮಾಲೆ ಕೌಸ್ತುಭರತ್ನ ಝಣತ್ಕೃತಿ ಬಾಹುಕಂಕಣದ ||
ಸಾಲು ಪಡೆದಿಹ ಬೆರಳ ಮುದ್ರಿಕೆ
ಜಾಳಿಯಿಂ ಗದೆ ಶಂಖಧರಯುತ
ಪಾಲ ಭಕುತರ ದೇವ ರಾಘವ ಸಲಹು ನಮ್ಮನು ||೧||

ಕೇಳಿರೈ ಕಪಿಗಳಿರ ಪರಮ ಕೃ
ಪಾಳು ಚಂದ್ರಮ ಮುನಿಪ ದಯದಲಿ
ಪೇಳಿದನು ದುಃಖಿಸುವೆ ಯಾರಿಗೆ ಮಗನೆ ದೇಹವಿದು ||
ಮೂಲ ದುಃಖಕೆ ದೇಹ ದೇಹದ
ಮೂಲ ಸಂಗದ ಕರ್ಮ ಕರ್ಮದ
ಕೀಲು ಕಾಣಾ ಹಮ್ಮುವಿಡಿದಾ ಬುದ್ಧಿಪೂರುಷನು ||೨||

ಹಮ್ಮನಾದಿಯ ವಿದ್ಯೆಯಿಂತಾ
ನೊಮ್ಮೆಯಿಂ ಜಡವಾದರೆಯು ಪರ
ಬೊಮ್ಮದಂಶದ ಚಿಚ್ಛಕತಿಯಿಂ ತಪ್ತದಾಯಸದ ||
ಧರ್ಮದಂತರಿವಾಗಿ ಕಾಂಗಾ
ಹಮ್ಮು ದೇಹ ತದಾತ್ಮಭಾವದಿ
ನೊಮ್ಮೆ ದೇಹವು ಚೇತನದ ಪರಿ ಕಾಣುತಿಹುದೆಂದ || ೩ ||

ದೇಹವೇ ತಾನೆಂದು ಹಮ್ಮಿನ
ಮೋಹಬಲದಿಂ ದುಃಖಸುಖದ ಸ
ಮೂಹವನುಭವಿಸುತ್ತವದರಿಂ ಜೀವನೆನಿಸುವನು ||
ಮೋಹ ರಹಿತನು ನಿರ್ವಿಕಾರಿ ನಿ
ರೀಹ ಬರಿದೆ ತದಾತ್ಮವಡೆದೀ
ದೇಹ ನಾ ಜಡಕರ್ಮಿ ಬಂಧನೆನುತ್ತ ಬಗೆದಿಹನು || ೪ ||

ಜೀವ ತಾನೆಂದೆನುತ ಕರ್ಮದ
ದಾವಿನಲಿ ಬಿಗಿವಡೆದು ತಳ ವೋ
ಲಾವಗಂ ತತ್ಫಲವನುಣಿ ತೊಳಲುತ್ತ ಪುಣ್ಯದಲಿ ||
ದೇವನಾಗುವ ಪಾಪದಲಿ ನರ
ಕಾವಳಿಯನೆನುಭವಿಪ ಬಯಸೆನು
ಭಾವಿ ನರಕಸ್ವರ್ಗವನು ಬಯಸುತ್ತಲಿಹನೆಂದ || ೫ ||

ನಾನು ಯಜಿಸಿದೆ ದಾನವಿತ್ತೆನು
ತಾನು ಸ್ವರ್ಗದ ಸುಖವನುಂಬೆನು
ತಾನೆನಿಪ ಸಂಕಲ್ಪ ಬಲದಿಂ ಪುಣ್ಯವಶದಿಂದ ||
ತಾನು ನೆನೆದಾಧ್ಯಾಸ ಬಲದಿಂ
ತಾನವಾಗೀ ಸ್ವರ್ಗಸುಖದಲಿ
ಸಾನುರಾಗದಲಿಹನು ಪುಣ್ಯವು ತೀರುವನ್ನವರ || ೬ ||

ತೀರೆ ಪುಣ್ಯವು ಕೆಳಗೆ ಕರ್ಮ
ಪ್ರೇರಿತದಲುರುಳುವನು ಚಂದ್ರನ
ಸಾರ ಕಿರಣ ತುಷಾರದೊಡನವನೀಯ ಧಾನ್ಯದಲಿ ||
ಸೇರಿ ತದ್ಧಾನ್ಯವನು ಜನನ ವಿ
ಕಾರ ನಾಲುಕು ತೆರನವಹುದದ
ನಾರಿ ಪೂರುಷರುಣಲು ರೇತೋರಕುತವೆನಿಸುವನು || ೭ ||

ಪುರುಷ ನಾರಿಯ ರಮಿಸೆ ಯೋನಿಯು
ಲುರುಳೆ ರೇತವು ಸತಿಯರಕುತವ
ಬೆರಸಿ ನೆಲಸಿ ಜರಾಯು ಮಧ್ಯದಿ ಪೊಂದು ರಾತ್ರಿಯಲಿ ||
ಹೊರವುದಾಗಳೆ ಕಲಿಲ ನೆತ್ತರ
ಬೆರಕೆಯಲಿ ರೂಢತ್ವವಾಗು
ತ್ತಿರಲು ಪಕ್ಷಕೆ ಪೇಶವಾಗಿದ್ದಂಡವಹುದೆಂದ || ೮ ||

ಪಂಚವಿಂಶತಿ ರಾತ್ರಿಗಂಕುರ
ಕಿಂಚಿತಹುದಾ ಮಾಸವೊಂದಕೆ
ಸಂಚದಿರ ಶಿರಪೃಷ್ಠ ಕಂದಗ್ರೀವುರಗಳೈದು ||
ಚಂಚು ತೋರ್ಪುದು ಕ್ರಮದಿ ಪಾಣಿಯು
ಮುಂಚೆ [1]ಪಾಣಿಯು ಪಾದ[1] ಕಟಿ ಜಾ
ನುಂಚ ಗುಲ್ಫಗಳೆರಡು ತಿಂಗಳಿನೊಳಗೆ ಕೇಳೆಂದ || ೯ ||

ಅಂಗ ಸಂಧಿಗಳಹವು ಮೂರೇ
ತಿಂಗಳೊಳಗಹವಪ್ಪವೀ ಸ
ರ್ವಾಂಗುಲಿಯು ಸಹ ನಾಲ್ಕು ತಿಂಗಳಿಗೈದು ತಿಂಗಳಿಗೆ ||
ಕಂಗಳೂ ಶ್ರೋತ್ರಗಳು ನಾಸಿಕ
ಲಿಂಗದಾ ನಖದಂತ ಮೂಲೋ
ತ್ತುಂಗ ಪಂಙ್ತಿಯು ರೂಹುಪಿಡಿವವು ಯೆಂದನಾ ಮುನಿಪ || ೧೦ ||

1 ಪಾದವು ಪಾಸ್ವ (ಖ)

ಆರು ತಿಂಗಳದೊಳಗೆ ಕರ್ಣ
ದ್ವಾರ ಛಿದ್ರಗಳಹವು ಪಾಯುವಿ
ಕಾರ ಮೇಢ್ರೋಪಸ್ಥನಾ ಶಿರರೋಮಗಳು ಸಹಿತ ||
ತೋರುಗೇಳರದೆಂಟರಲಿ ಸಾ
ಕಾರವೊಂದೊವುಳಿಯವಪ್ಪವು
ಸೇರಿಹುದು ಜೀವತ್ವ ಚೇತನ ಪಂಚಮಾಸದಲೇ || ೧೧ ||

ಎನ್ನಲೇನಾ ಜೀವ ಚೇತನ
ಕನ್ನರಸ ತಾನುಂಡುದೊದಗೂ
ದುನ್ನತದ ವರನಾಭಿನಾಳದ ಸೂತ್ರದಿಂದೊಳಗೆ ||
ಇನ್ನು ಪಂಚಮ ಮಾಸದಿಂ ಮೇ
ಲುನ್ನಯಿಸಿ ಕೆಡದಲ್ಲಿ ಬೆಳೆವುದು
ತನ್ನ ಕರ್ಮದ ಶಕ್ತಿಯಿಂದಲೆ ವಿಹಗ ಕೇಳೆಂದ || ೧೨ ||

ಅಲ್ಲಿ ಪೂರ್ವಾರ್ಜಿತದಕರ್ಮವ
ನೆಲ್ಲ ನೆನೆವಸು ಜಡರ ಪಾವಕ
ಘೊಲ್ಲಿಸುತ್ತಿರಲುಬ್ಬಸದ ಢಗೆಯಿಂದ ಕಳವಳಿಸಿ ||
ಸೊಲ್ಲಿಸುವ ತನ್ನೊಳಗೆಯಕಟಾ
ಯೆಲ್ಲ ಯೋನಿ ಸಹಸ್ರ ಜನನದ
ಲೆಲ್ಲ ಜನಿಸಿಯು ಮತ್ತದೀ ವಿಧಿ ಬಿಡದಲಾ ಯೆಂಬ || ೧೩ ||

ಪುತ್ರ ಪಶು ಗೃಹದಾರ ಬಾಂಧವ
ಯರ್ಥಿಯಾಗಿ ಕುಟುಂಬ ಕೋಟಿಯು
ವರ್ಧ ಹೊರದೇ ನ್ಯಾಯುವನ್ಯಾಯಾರ್ಜಿತದ ಧನದಿ ||
ಚಿತ್ತದಲಿ ತೂಷ್ಣಾಖ್ಯೆ ಮುಸುಕಿ
ದ್ವೃತ್ತ ಮಾತ್ಮಹಿತಾರ್ಥದರುಹಿಸ
ದತ್ತಲೆನ್ನಸು ಕೆಡಹಿದಳಲಾ ಶಿವ ಶಿವಾ ಯೆಂಬ || ೧೪ ||

ಬಂದ ಸುಖದುಃಖವನು ಉಣುತಲಿ
ದ್ವಂದ್ವ ಭೇದಾಭೇದವಿಲ್ಲದೆ
ಹಿಂದೆ ನೆನೆಯದೆ ಮುಂದೆ ಬಯಸದೆ ಲೌಕಿಕವ ಬಿಡದೆ ||
ಒಂದು ಸಂಕಲ್ಪವನು ಮಾಡದೆ
ಇಂದಿರಾಪತಿ ರಾಮ ರಾಮ ಮು
ಕುಂದ ಯೆನುತಾಶಬ್ಧವುಳಿದನೆ ಶಿವಶಿವಾ ಯೆಂಬ || ೧೯ ||

ಬಂದತಾನೀಗರ್ಭವಾಸದ
ದಂದುಗವ ಹೊರವಂಟೆನಾದರೆ
ಮುಂದೆ ಮತ್ತೀ ನರಕವಾಸಕೆ ಬಹನೆ ಹರಿಪದವ ||
ವೊಂದೆ ಮನದಲಿ ಭಜಿಸುವೆನು ತಾ
ಯೆಂದೆನುತ್ತಿರೆ ಸೂತಿಸಮಯವು
ಬಂದಡುರುಳುವನಾಗ ಜನನೀ ಯೋನಿಯಿಂದೊಗದು || ೨೦ ||

ಪೂತಿಮೇಧ್ಯವ್ರಣರಕುತ ನಿ
ರ್ಘಾತ ಯೋನೀಯಂತ್ರ ಪೀಡಾ
ಪಾತದಿಂ ಹೊರಳುತ್ತ ನೆರಳುತ ಕ್ರಿಮಿಯ ತೆರನಲ್ಲಿ ||
ಈ ತೆರದ ಬಾಲಾದ್ಯವಸ್ಥಾ
ವ್ರಾತ್ಯತ ಯವ್ವನ ದುಃಖ ಸಹಿತನು
ಭೂತವಲ್ಲ್ಲೈ ನಿನಗೆ ವರ್ಣಿಸಲೇಕೆ ತಾನೆಂದ || ೨೧ ||

ಈ ಪರಿಯ ಪ್ರತ್ಯಕ್ಷ ನರಕದ
ರೂಪದೇಹದಲಭಿನಿವೇಶದಿ
ತಾಪಗೊಂಬನು ಕರ್ಮಜೀವದ್ವಯದ ಹಮ್ಮಿಂದ ||
ಲೋಪವಾಗದೆ ಸ್ಥೂಲ ಸೂಕ್ಷ್ಮಾದಿ
ಕಾಪಥದ ವಿಷಯೇಚ್ಛೆಯಿಂದವೆ
ಲೇಪ ತಡೆದನ ಹಮ್ಮಿನಿಂ ನಿರ್ಲೇಪನಹ ಜೀವ || ೨೨ ||

ತ್ರಿಗುಣದಿ ದೇಹದ್ವಯೋಜೆಯು
ರಚಿಸಿದು ನಾನಾಪ್ರಕೃತಿ ಭಾವವ
ಬಿಡಿಸು ದೇಹೇಂದ್ರಿಯ ಮನೋಭಾವಂಗಳನು ತೊರೆದು ॥
ಮರೆತಿಹ ಜಾಗ್ರಾದ್ಯವಸ್ಥೆಯ
ನರಸಿ ನೋಡದೆ ಸತ್ಯಸನ್ಮಯ
ಚಿದಾತ್ಮನಾನೆಂದಾತ್ಮ ತಾನೆಂದರಿದು ನಿಲಬೇಕು ॥ ೨೩ ॥

ನಿತ್ಯ ಶುದ್ಧ ವಿಬುದ್ಧ ಸತ್ಯ
ಮುಕ್ತಿ ನಿರ್ಮಲ ಶಾಂತನಕ್ರಿಯ
ವಿಸ್ತಾರ ಪರಾತ್ಮ ಪರಮಾಕಾಶ ನಿರ್ಗುಣದ ॥
ವಸ್ತು ತಾನೆಂದರಿದು ಮೋಹವ
ಕತ್ತರಿಸಿ ದೇಹಾದಿ ಭಾವವ
ಸ್ವಸ್ಥನಾಗಿರಬೇಕು ಬಳಿಕಾರಬ್ಧವಿದದನ್ನೆ ॥ ೨೪ ॥

ಬರಲಿ ಸುಖವೇ ಮೇಣು ದುಃಖವೆ
ಇರಲಿ ಪೋಗಲಿ ದೇಹವಿದರಲಿ
ಮರುಳುಗೊಂಬರೆ ಯೆಸುತವಲ್ಲಾ ಧಿಟ ವಿಚಾರಿಸಲು ॥
ತೊರಿಸಿ ದೇಹವ ಇರು ಸುಖದಿ ತನು
ಬರಿಪ್ರಪಪ್ರಾರಬ್ಧ ವಶದಲಿ
ತೆರೆಯು ಸರ್ಪನು ಬಿದ್ದ ಪರಿ ಬಳಿಸಂದನಾ ಮುನಿಪ ॥ ೨೫ ॥

ಅಂತರಿದು ಸಂಪಾತಿ ಬಿಡು ನೀ
ಚಿಂತೆಯನು ಮತ್ತೊಂದ ಕೇಳ
ನ್ನಂತ ಹಿತವನು ನಿನಗೆ ಹೇಳುವೆ ತ್ರೇತೆಯಲಿ ವಿಷ್ಣು ॥
ಸಂತಸದಿ ದಶರಥಗೆ ಮಗನಾ
ಗಂತಮಿತನು ರಾವಣನ ಕೊಲೆ
ಕಾಂತೆಯನುಜರು ಸಹಿತ ವನಕೈದಿಹನು ದಂಡಕಕೆ ॥ ೨೬ ॥

ರಾಮನಿಲ್ಲದ ಹೊತ್ತು ರಾವಣ
ಭೂಮಿಜೆಯ ಕದ್ದೊಯ್ಯಲಂಸು
ತ್ತಾ ಮಹಾತ್ಮನು ಮಾಡುವನು ಸುಗ್ರೀವ ಸಖ್ಯವನು ||
ಪ್ರೇಮದಿಂ ಕಪಿಪಡೆಯ ಕಳುಹುವ
ನಾ ಮಹಾತ್ಮನ ಸತಿಯನರಸು
ತ್ತೀ ಮಹೇಂದ್ರಾಚಲದ ಶರಧಿಯ ತಡಿಗವರು ಬಹರು || ೨೭ ||

ಅವರೊಳಗೆ ಕಾರಣದಿ ಸಂಗತಿ
ಭವಿಸುವುದು ನಿನಗಿಲ್ಲ ಸಂಶಯ.
ವವನಿಸುತೆಯಿದ್ದಿರವನರುಹೆ ಯಥಾರ್ಥ ವಾಕ್ಯದಲಿ ||
ರವಿಯ ಕಿರಣದಿ ಬೆಂದ ಪಕ್ಕವು
ಜವಳಿ ಮಗುಳುತ್ಪನ್ನವಹುದೈ
ನವವೆನಿಸಿ ಬಳಿಕೆಂದನಾ ಮುನಿರಾಯನೆನಗೊಲಿದು || ೨೮ ||

ಕಾಡ ಮಾತೇ ಮುನಿಯ ವಚನವು
ನೋಡಿರೈ ಕಪಿಗಳಿರ ಪಕ್ಕವು
ಮೂಡಿತದೆ ಕೋಮಲ ಸುನೂತನವಾಗಿ ತನಗಿಂದು ||
ನಾಡೊಳಚ್ಚರಿ ಸ್ವಸ್ತಿ ನಿಮಗಾ
ರೂಢಿಸುತೆ ಗೋಚರಿಸುವಳು ಧಿಟ
ಮಾಡಿ ಯತ್ನವ ಲಂಘಿಸಲು ದುರ್ಲಂಘ್ಯ ಸಾಗರವ || ೨೯ ||

ರಾಮ ನಾಮಸ್ಮರಣೆ ಮಾತ್ರದಿ
ಪಾಮರರು ದುರ್ಜನರು ಸಹಿತೀ
ಭೀಮ ಭವಸಾಗರವ ಕಳಿದೆಂದೆಂದು ಶಾಶ್ವತದ ||
ಕ್ಷೇಮ ವೈಷ್ಣವಪದಕೆ ಸಲುವರ
ದಾ ಮಹಾತ್ಮರು ಮರ್ಮ ಲೋಕವ
ನೀ ಮುದದಿ ಪಾಲಿಸುವ ದೈವವಲಾ ಶಿವಾ ಯೆಂದ || ೩೦ ||

ಎಂದ ಯುವರಾಜನ ನುಡಿಗೆ ಕಪಿ
ವುಲುಕದೆ ಸುಮ್ಮನಿದ್ದುದು
ಯೊಬ್ಬೊಬ್ಬರನು ನೋಡುತ್ತಪ್ಪರೊಳು ಮರಳೆ ||
ಂಗದನೆನ್ನಿರೆಲ್ಲರು
ಂ ಪೌರುಷವ ಬೇರ್ಜೇ
ಎವೆನೆನಲ್ಕೆ ನುಡಿದರು ತಮ್ಮ ನಿಜ ಬಲವ || ೩೫ ||

ಕತ್ತು ಯೋಜನಕೆಂದನೊಬ್ಬಿ
ಹಾರುವೆನೆಂದನಾ ಮೂ
ಾರುವೆನೆಂದನನ್ಯನು ನುಡಿದನ್ಯೆವತ್ತ ||
ಘುವೆನು ಯೋಜನವನೆ
ಹಾರುವೆನೆಂದನಾನೆಂ
ಂಭತ್ತೆಂಟನೆಲ್ಲರ ನೂರರಿಚ್ಛೆಯಲಿ || ೩೬ ||

ೂರರೊಳಗೇ ನುಡಿದ ಜಾಂಬವ
ಗತಿ ಮುಪ್ಪು ಬಂದುದು
ಯ ವಾಮನನಳೆವದಿನ ಸಪ್ತ ಧರಣಿಯನು ||
ಎ ತ್ರೀಪದವ ವಿಧಿಯಿಂ
ಎಂದೆನು ಬಲವನೇಳನು
ೋಯಿತು ಶಕ್ತಿ ಜರೆಗೀಗಿಲ್ಲ ತನಗೆಂದ || ೩೭ ||

ಂದಡಂಗದ ನಾನು ದಾಂಟುವೆ
ನು ಮರಳುವಡೆ ಕುಶಲತೆ
ಯುಂಟೋ ಯಿಲ್ಲವೋ ಯೆನಲೆಂದ ಜಾಂಬವನು ||
ೊಡೆಯ ನಿಯಾಮಕನು ನೀ
ದಾಂಟು ಸಮರ್ಥನಾದಡು
ಾವೆಲ್ಲೂಳಿದು ನೀ ಹೋಗುವುದು ಮತವಲ್ಲ || ೩೮ ||

ಎನಲಿಕಂಗದನೆಂದನಾದಡೆ
ಯಿನಿಬರೂ ದರ್ಭಾಸನದಿ ಮು
ನ್ನಿನ ಪರಿಯೆ ಗತಿಯಿಲ್ಲದುಳಿವಡುಪಾಯವಿಲ್ಲೆನಲು ॥
ಅನುವರಿತು ಜಾಂಬವನು ನುಡಿದನು
ನಿನಗೆ ತೋರುವೆನೀತನೊಬ್ಬನು
ಯೆನಿತು ಕಾರ್ಯವನಾದರೂ ಮಾಡುವ ಪರಾಕ್ರಮಿಯು ॥ ೩೯ ॥

ಇಂತೆನುತ ಜಾಂಬವನು ಹನುಮನ
ಮುಂತೆ ಕುಳಿತಿರೆ ಹನುಮ ನುಡಿದನು
ಸಂತಸದಲೇಕೈ ನುಡಿಯೆ ನೀ ಕಾರ್ಯಗೌರವವ ॥
ಪಂಥದಲಿ ಸಾಮರ್ಥ್ಯವುಳ್ಳವ
ಶಾಂತ ಮುನಿಯಂತಿಹೆಯದೇಕೆ ದಿ
ಗಂತ ವಿಶ್ರುತ ಕೀರ್ತಿಯಾಗಲಿ ತೋರು ನಿಜ ಬಲವ ॥ ೪೦ ॥

ವಾಯುಪುತ್ರನು ನೀನು ತತ್ಸಮ
ದಾಯತಮಿತ ಪರಾಕ್ರಮಿಯು ನಾ
ರಾಯಣನ ಕಾರ್ಯಾರ್ಥಕವತರಿಸಿದ ಮಹಾತ್ಮನಲ ॥
ಬಾಯ ಮಾತೇ ಜನಿಸಿದಾಗಳು
ರಾಯನುಳಿದಾಕಾಶ ಮಾರ್ಗದಿ
ಹಾಯಿದೆಯಲಾ ಹಣ್ಣೆನುತ ಭಕ್ಷಿಸಲು ದಿನಕರನ ॥ ೪೧ ॥

ಹಾರಿ ಮೇಲಕ್ಕೈದಿ ನೀನೈ
ನೂರು ಯೋಜನದಿಂದಲವನಿಗೆ
ಜಾರಿ ಬಿದ್ದೀಪರಿ ಪರಾಕ್ರಮವದನು ವರ್ಣಿಸಲು ॥
ಆರು ಶಕ್ತರು ನಿನ್ನ ಮಹಿಮಾ
ಪಾರಧಿಯೆ ಸಾಕೇಳು ರಾಮನ
ಕಾರಿಯವ ಕೈಗೊಳಿಸುವಾ ಸುವ್ರತನು ನೀನೆಂದ ॥ ೪೨ ॥

ಇನಿತು ಜಾಂಬವನೆನಲು ಕೇಳ್ದಾ
ಹನುಮನತಿ ಹರುಷದಲಿ ಸಿಂಹ
ಧ್ವನಿತದಿಂ ಗರ್ಜಿಸಿದನಾ ಬ್ರಹ್ಮಾಂಡ ಬಿರಿವಂತೆ ||
ಕನಕಗಿರಿಯಂದದಲಿ ಬೆಳೆದಿ
ರ್ದನೆಯ ವೀರ ತ್ರಿವಿಕ್ರಮನೆವೋ
ಲನುಪಮನು ಮಗುಳೆಂದನೆಲ್ಲರು ಕೇಳುವಂದದಲಿ || ೪೩ ||

ಕಡಲ ನಾನಿದ ದಾಂಟಿ ಲಂಕೆಯ
ಸುಡು ವಿಭೂತಿಯ ಮಾಡಿ ನಿಮಿಷಕೆ
ಮುಡುಹಿ ರಾವಣಕುಲ ಸಹಿತ ಜಾನಕಿಯ ಕರೆತಹೆನು ||
ಹಿಡಿದು ರಾವಣನನ್ನು ಕೊರಳಿಗೆ
ತೊಡಿಸಿ ಹಗ್ಗವ ಕಟ್ಟಿ ತಹೆನೆಂ
ದೆಡದ ಹಸ್ತದಿ ಚಿತ್ರವೆನಗೆಂದಾಗ ಗರ್ಜಿಸಿದ || ೪೪ ||

ಮತ್ತೆ ಸೀತೆಯ ಕಾಣದಡೆ ತಾ
ಕಿತ್ತು ಲಂಕಾಪರ್ವತವ ಸಹಿ
ತಿತ್ತ ತಂದಿರಿಸುವೆನು ರಾಮನ ಮುಂದೆ ವಹಿಲದಲಿ ||
ತೊತ್ತು ರಾವಣನಾವಗಣ್ಯವೆ
ನುತ್ತಿರಲು ಹನುಮಂತನಾಡಿದ
ಶಕ್ತಿಯನು ಕೇಳುತ್ತ ಮಗುಳಿಂತೆಂದ ಜಾಂಬವನು || ೪೫ ||

ಸೀತೆ ಸುಖದಿಂದಿಹಳು ಹೋಗೈ
ವಾತಸಂಭವ ಕಂಡು ಮರಳೀ
ಖ್ಯಾತಿಯಿಂ ಬಾ ನಿನಗೆ ಮಂಗಳವಾಗಲೈ ಬಳಿಕ ||
ವೋತು ರಾಘವ ಸಹಿತ ಹೋಗಿ ಮ
ಹಾತಿಶಯ ಪೌರುಷವನೆಲ್ಲವ
ನೀತಿಯಿಂದವ ತೋರಬಹುದೆಲೆ ವೀರ ನೀನೆಂದ || ೪೬ ||

ನಿನಗೆ ಮಂಗಲವಾಗಲೇಕೈ
ಹನುಮ ಹೋಗು ವಿಹಾಯುಸದಲೀ
ಲನಿಲ ಕೂಡೆ ಸಹಾಯುವಾಗಲಿ ರಾಮಕಾರ್ಯಕ್ಕೆ ||
ಯೆನುತ ಯೋಚಿಸಿ ಹರಸಿ ಕಳುಹಿದ
ಡನುಪಮನು ಬೀಳ್ಕೊಂಡು ಕಪಿಗಳ
ನನುನಯಾದ್ಭುತ ರೂಪದಿಂ ಗಿರಿಮಸ್ತಕಕೆ ನೆಗೆದ || ೪೭ ||

ಅಪ್ರತಿಮನಾದಾ ಮಹಾತ್ಮ ಗಿ
ರಿಪ್ರದೇಶ ಮಹೇಂದ್ರ ಶಿಖರದಿ
ಸುಪ್ರಸನ್ನ ಮುಖಾಬ್ಜ ಚಾರು ಸುವರ್ಣ ಪರ್ಣದಲಿ ||
ಸರ್ಪರಾಜೋಪಮದ ವಾಲ ಸು
ದೀಪ್ತ ನೇತ್ರದಿ ವಾಯುನಂದನ
ನೊಪ್ಪಿದನು ನೋಳ್ಪಖಿಳ ಜನಕತಿ ಮುದವನೀವುತ್ತ || ೪೮ ||

ತ್ರಿಂಶಸಪ್ತಕ ಸಂಧಿಯಲಿ ಪದ
ಶಂಸೆ ನಾಲ್ವತ್ತೆಂಟು ರಘುಕುಲ
ವಂಶ ಚರಿತದಿ ಮುಗಿದುದೀ ಕಿಷ್ಕಿಂಧಿಕಾಂಡವಿದು ||
ಭ್ರಂಶಹರ ಸುಂದರವ ಕಾಂಡವ
ನಂಶಹರ ಗಿರಿಸುತೆಗೊರೆವ ಪರ
ಹಂಸ ಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹನೊಲವಿನಲಿ || ೪೯ ||

ಅಂತೂ ಸಂಧಿ ೩೭ ಕ್ಕೆ ಪದ ೧೬೯೧ ಕ್ಕೆ

ಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ

## ಕಿಷ್ಕಿಂಧಾಕಾಂಡ ಸಮಾಪ್ತವು

ಸ್ವಸ್ತಿ ಪ್ರಜಾಭ್ಯಃ ಪರಿಪಾಲಯನ್ತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ |
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವಂತು ॥ ೧ ॥

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ |
ದೇಶೋಽಯಂ ಕ್ಷೋಭರಹಿತಃ ಸಜ್ಜನಾಃ ಸಂತು ನಿರ್ಭಯಾಃ ॥೨॥

ಅಪುತ್ರಾಃ ಪುತ್ರಿಣಃ ಸನ್ತು ಪುತ್ರಿಣಃ ಸನ್ತು ಪೌತ್ರಿಣಃ |
ಅಧನಾಃ ಸಧನಾ ಸನ್ತು ಜೀವನ್ತು ಶರದಾಂ ಶತಮ್ ॥ ೩ ॥

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ |
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥ ೪ ॥

ಯದಕ್ಷರ ಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ |
ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ॥ ೫ ॥





# ಅಧ್ಯಾತ್ಮ ರಾಮಾಯಣ

## ಸುಂದರಕಾಂಡ



ಯಧ್ಯಾನನಿರ್ಧೂತ ವಿಯೋಗವಹ್ನಿರ್ವಿದೇಹಬಾಲಾ ವಿಬುಧಾರಿವನ್ಯಾಂ |
ಪ್ರಾಣಾನ್ದಧೇ ಪ್ರಾಣಮಯಂ ಪ್ರಭುಂ ತಂ ಶ್ರೀಜಾನಕೀಜೀವನಮಾನತೋಽಸ್ಮಿ ||

# ॥ ಶ್ರೀ ರಾಮಚಂದ್ರಧ್ಯಾನಮ್ ॥

ರಾಮಾಯ ರಾಮಭದ್ರಾಯ ರಾಮಚಂದ್ರಾಯ ವೇಧಸೇ ।
ರಘುನಾಥಾಯ ನಾಥಾಯ ಸೀತಾಯಾಃ ಪತಯೇ ನಮಃ ॥ ೧ ॥

ವೈದೇಹೀ ಸಹಿತಂ ಸುರದ್ರುಮತಲೇ ಹೈಮೇ ಮಹಾಮಂಟಪೇ
ಮಧ್ಯೇಪುಷ್ಪಕಮಾಸನೇ ಮಣಿಮಯೇ ವೀರಾಸನೇ ಸುಸ್ಥಿತಮ್ ।
ಅಗ್ರೇ ವಾಚಯತಿ ಪ್ರಭಂಜನಸುತೇ ತತ್ತ್ವಂ ಮುನಿಭ್ಯಃ ಪರಂ
ವ್ಯಾಖ್ಯಾತಂ ಭರತಾದಿಭಿಃ ಪರಿವೃತಂ ರಾಮಂ ಭಜೇ ಶ್ಯಾಮಲಮ್ ॥ ೨ ॥

ವಾಮೇ ಭೂಮಿಸುತಾ ಪುರಶ್ಚ ಹನುಮಾನ್ ಪಶ್ಚಾತ್ ಸುಮಿತ್ರಾಸುತಃ
ಶತ್ರುಘ್ನೋ ಭರತಶ್ಚ ಪಾರ್ಶ್ವದಲಯೋರ್ವಾಯ್ವಾದಿಕೋಣೇಷು ಚ ।
ಸುಗ್ರೀವಶ್ಚ ವಿಭೀಷಣಶ್ಚ ಯುವರಾಟ್ ತಾರಾಸುತೋ ಜಾಂಬವಾನ್
ಮಧ್ಯೇ ನೀಲಸರೋಜಕೋಮಲರುಚಿಂ ರಾಮಂ ಭಜೇ ಶ್ಯಾಮಲಮ್ ॥ ೩ ॥

ರಾಮಂ ರಾಮಾನುಜಂ ಸೀತಾಂ ಭರತಂ ಭರತಾನುಜಮ್ ।
ಸುಗ್ರೀವಂ ವಾಯುಸೂನುಂ ಚ ಪ್ರಣಮಾಮಿ ಪುನಃ ಪುನಃ ॥ ೪ ॥

ನಮೋಽಸ್ತು ರಾಮಾಯ ಸ ಲಕ್ಷ್ಮಣಾಯ
ದೇವ್ಯೈ ಚ ತಸ್ಯೈ ಜನಕಾತ್ಮಜಾಯೈ ।
ನಮೋಽಸ್ತು ರುದ್ರೇಂದ್ರ ಯಮಾನಿಲೇಭ್ಯೋ
ನಮೋಽಸ್ತು ಚಂದ್ರಾರ್ಕಮರುದ್ಗಣೇಭ್ಯಃ ॥ ೫ ॥

ಚರಿತಂ ರಘುನಾಥಸ್ಯ ಶತಕೋಟಿಪ್ರವಿಸ್ತರಮ್ ।
ಏಕೈಕಮಕ್ಷರಂ ಪ್ರೋಕ್ತಂ ಮಹಾಪಾತಕನಾಶನಮ್ ॥ ೬ ॥

ವಾಲ್ಮೀಕಿಗಿರಿ ಸಂಭೂತಾ ರಾಮಸಾಗರಗಾಮಿನೀ ।
ಪುನಾತು ಭುವನಂ ಪುಣ್ಯಾ ರಾಮಾಯಣ ಮಹಾನದೀ ॥ ೭ ॥

ಶ್ಲೋಕಸಾರಸಮಾಕೀರ್ಣಂ ಸರ್ಗಕಲ್ಲೋಲಸಂಕುಲಮ್ ।
ಕಾಂಡಗ್ರಾಹಮಹಾಮೀನಂ ವಂದೇ ರಾಮಾಯಣಾರ್ಣವಮ್ ॥ ೮ ॥

|| ಸ್ವಸ್ತಿ || ಶ್ರೀ ಗುರುಗಣೇಶಾಯ ನಮಃ || ಶುಭಮಸ್ತು ||
|| ನಿರ್ವಿಘ್ನಮಸ್ತು || ಶ್ರೀ ಗೋಪಾಲಕೃಷ್ಣಾಯ ನಮಃ ||
|| ಶ್ರೀ ರಾಮಚಂದ್ರಾಯ ನಮಃ ||

# ಅಧ್ಯಾತ್ಮ ರಾಮಾಯಣ



## ಸುಂದರಕಾಂಡ

### ಮೂವತ್ತೆಂಟನೆಯ ಸಂಧಿ

**ಹನುಮಂತನು ಲಂಕಾಪುರಕ್ಕೆ ಹಾರಿಹೋದದ್ದು**

ಸೂಚನೆ || ವಾಯುಪುತ್ರನು ರಾಮ ಭೃತ್ಯನು
ಆಯುರಸೆಯುದರದಲಿ ಪೊಕ್ಕಾಗಿ
ದಾಯತದಿ ಪರ್ವತವ ಲಂಕಿಣಿ ನುಡಿಸಿ ವೊಳಪೊಕ್ಕ ||

ಪದ || ಪುಂಡರೀಕದಳಾಕ್ಷ ಸನ್ನಿಭ
ಖಂಡಲಾದ್ಯ ಮುನೀಂದ್ರಮನ ಕೋ
ದಂಡವಾಗಿಯೆ ಕಾಣದಾದಾಖಂಡ ಚಿನುಮಯನ ||
ಪಂಡಿತರು ಯೆಡಬಿಡದೆ ನೆನೆಯಲು
ಚಂಡವಿಕ್ರಮ ರೂಪನೆನಿಸಿ
ದ್ದಂಡಲವ ಭಕುತರನು ರಕ್ಷಿಪ ರಾಮ ತನ್ನುವನು || ೧ ||

ಹನುಮನಂಜನೆಯಾತ್ಮಸಂಭವ
ಘನ ಮಹಾಬಲ ವಾಯುನಂದನ
ಚಿನುಮಯಜ್ಞಾ ರಾಮನಿಷ್ಠನು ಫಲುಗುಣನ ಸಖನು ||
ವಿನಯ ಪಿಂಗಲನಮಿತವಿಕ್ರಮ
ವನಧಿಯುತ್ಕ್ರಮಿಸೀತ ಶೋಕಾ
ಪನಯ ಲಕ್ಷ್ಮಣ ಪ್ರಾಣದಾತ ದಶಾಸ್ಯ ದರ್ಪಘ್ನ || ೨ ||

ಇಂತು ದ್ವಾದಶನಾಮದಿಂದ ದಿ
ಗಂತ ವಿಶ್ರುತನಾಗಿ ನೆನೆವವ
ರಂತರಂಗವ್ಯಥೆಯ ಕೆಡಿಸಿ ಸುಬುದ್ಧಿ ವಿದ್ಯೆಯನು ||
ಶಾಂತಿ ಬಲವಾರೋಗ್ಯ ಸಿರಿಯಶ
ಮುಂತೆ ನಿರ್ಭಯವೀವ ಹರ ಹನು
ಮಂತನನು ಬಲಗೊಂಬೆನೀವುದು ಮತಿಗೆ ಮಂಗಲವ || ೩ ||

ಸಕಲಲೋಕಾಧೀಶನಮರ
ಪ್ರಕರ ನತನುತ ಮಹಿಮನದ್ವಯ
ಶಕುತಿ ಸೇವಿತ ಪಾದ ವರ ಕಲ್ಯಾಣ ಗುಣನಾಮ ||
ಮುಕುತಿಕಾಂಕ್ಷೆಯನುಳ್ಳ ತನ್ನಯ
ಭಕುತರಿಗೆ ಹಿತವಾಗಿ ಶಿವ ತಾ
ಪ್ರಕಟಿಸಿದನಾ ರಾಮಚರಿತದ ಕಾಂಡ ಸುಂದರವ || ೪ ||

ಗಿರಿಜೆ ಕೇಳ್ಕೆ ಮಾರುತಾತ್ಮಜ
ಹರುಷ ಸಂದೇಹದಲಿ ಹೆಚ್ಚುತ
ಸರಸಿಯನು ಶತಯೋಜನದ ಮಕರಾಲಯವನದನು ||
ಭರದಿ ದಾಂಟಿ ಪರಾತ್ಮ ರಾಮನ
ಚರಣವನು ಭಾವಿಸುತ ನುಡಿದನು
ವರ ಕಪೀಶ್ವರರೆಲ್ಲ ನೋಡುವುದೆನ್ನ ಸಾಹಸವ || ೫ ||

ಅಂಬರದಲೀ ಹೋಹೆ ರಾಘವ
ನೆಂಬು ತಾನೇ ವ್ಯರ್ಥವೇ ಲವ
ಣಾಂಬುಧಿಯನುತ್ತರಿಸಿ ಕಾಂಬೆನು ಯಿಂದು ಜಾನಕಿಯ ||
ಹಂಬಲಿಸದೇ ಮರಳಿ ರಾಮ ಪ
ದಾಂಬುಜವ ನಾ ಕಂಡು ದೇಹಾ
ಡಂಬರದಿ ಕೃತಕೃತ್ಯನಹೆನು ಕೃತಾರ್ಥನಹೆನೆಂದ || ೬ ||

ಮರಣಕಾಲದಿ ರಾಮನಾಮ
ಸ್ಮರಣೆಯಿಂ ಪಾಪಿಗಳು ಸಹಿತು
ತ್ತರಿಸಿ ಭವವಾರಿಧಿಯನುತ್ತಮ ಮುಕುತಿವಡೆವರೆನೆ ||
ಅರರೆ ಯಾತನ ದೂತ ನಾ ತತ್
ಸ್ಮರಣೆಯಿಂ ತನ್ಮುದ್ರಿಕೆಯ ನೆರೆ
ಧರಿಸಿ ಶರಧಿಯ ಕಳಿವುದೆನಗೆ ವಿಚಿತ್ರವಲ್ಲೆಂದ || ೭ ||

ಎಂದು ಮೇರುವಿನಂತೆ ಗಿರಿಯನು
ಮುಂದೆ ಕರದಲಿ ಗಬ್ಬರಿಸಿ ಪದ
ದಿಂದ ಹಿಂದಕ್ಕಲುಹಿ ಬಾಲವನೆತ್ತಿ ಮೇಲ್ಮೊಗಕೆ ||
ಸಂದ ದೃಷ್ಟಿಯ ನೆಗೆದ ರಜುಗೊರ
ಳಿಂದವನಿ ತಳ್ಳಳಿಸೆ ಹಾರಿದ
ನಂದು ದಕ್ಷಿಣಕಮರರಭ್ರದಿ ನೋಡಿ ಬೆರಗಾಗೆ || ೮ ||

ಅನಿಲವೇಗದಲೈದುತಿರಲಾ
ಹನುಮ ನಭದಿಂ ನೋಡಿ ದಿವಿಜರು
ದನುಜಪುರವನು ಹೊಗುವ ಶಕ್ತಿ ಪರಾಕ್ರಮವದಿವಗೆ ||
ಜನಿಸುವುದೊ ಮೇಣಿಲ್ಲವೋ ಯಂ
ಬನುವನರಿಯೆ ಪರೀಕ್ಷಣಾರ್ಥದಿ
ಘನ ಸುರಸೆಗಿಂತೆಂದರಮರರು ನಾಗಮಾತೃವಿಗೆ || ೯ ||

ಹೋಗು ಕಿಂಚಿತ್ ವಿಘ್ನವೆಸಗೈ
ಯಾಗರುವನಲಿ ಬುದ್ಧಿ ಶಕ್ತಿಯ
ಬೇಗರಿದು ಬಾ ಯೆನಲರಕ್ಷಣಕವಳು ಮಾರುತಿಯ ||
ತೂಗಿನೋಡಳು ಬಂದು ನುಡಿದಳು
ಬಾ ಗರುವ ಹನುಮಂತ ಹೊಟ್ಟೆಗೆ
ಹೋಗು ಕೊಟ್ಟರು ದಿವಿಜರೆನಗಾಹಾರವನು ನಿನ್ನ || ೧೦ ||

ಹಸಿವು ಘನವೆನಗೆಂದಡೆಂದನು
ವಸುಧೆಸುತೆಯನು ಕಂಡು ರಾಘವ
ಗುಸುರಿ ವಾರ್ತೆಯ ದೂತಕೃತ್ಯವ ಮಾಡಿ ನಾ ಮರಳಿ ||
ಬಸುರ ಹೊಗುವೆನು ತಾಯೆ ನಿನ್ನಾ
ಗಸದ ಮಾರ್ಗವನೆನಗೆ ಕೊಡು ಬೇ
ಗುಸುರಬೇಡಾ ಸುರಸೆ ನಮೊನಮೊ ಯೆಂದನಾ ಹನುಮ || ೧೧ ||

ಆಗದಾ ಹಸಿದಿಹೆನು ಹೊಟ್ಟೆಗೆ
ಹೋಗಿ ನೀ ಮರಳಲ್ಲದಿದ್ದಡೆ
ಈಗ ನುಂಗುವೆವೆಂದಡೆಂದನು ಹನುಮ ವದನವನು ||
ಬೇಗ ತೆರೆ ಹೊಕ್ಕೈದುವೆನು ಯೆಂ
ದಾಗ ಯೋಜನ ಬೆಳೆಯೆ ಸುರಸೆಯು
ಮೇಗೆ ತೆರೆದಳು ಬಾಯನಾಕ್ಷಣ ಪಂಚಯೋಜನಕೆ || ೧೨ ||

ಹತ್ತು ಯೋಜನ ಬೆಳೆದ ಮಾರುತಿ
ವಕ್ತ್ರವಿಪ್ಪತ್ತೈದನೊಡೆವಳು
ಮತ್ತೆ ತ್ರಿಂಶದ್ಯೋಜನವ ಹನುಮಂತ ಬೆಳೆವುತಿರೆ ||
ತುತ್ತಿಗಿಂಬನು ತೆರೆದಳವಳೈ
ವತ್ತ ಬಳಿಕನಿಲಜನು ಹೊಕ್ಕನು
ವಕ್ತ್ರವನು ಉಂಗುಷ್ಠಮಾತ್ರಾಕಾರದಿಂದೊಳಗೆ || ೧೩ ||

'ಲ್ಕಡಲ ಹೊರವಂಟಿದಿರಲವ
ಎಗಿದೆಂದನಾ ನಿಜ
ಬಂದೆನೆನೆ ಕಂಡೆಂದಳಾ ಸುರಸೆ ||
ನಹುದು ಹೋಗ ಮ
› ನಿನ್ನ ಬಲವನು
'ಳುಹಿದರು ನೀನತಿ ವೀರ ಕಪಿಯಹುದು || ೧೪ ||

ಚೆಯು ಕಂಡೈದಿ ರಾಮನ
ನೆನುತವಳು ಹೋದಳು
ಎರುತಜನು ಬಳಿಕತಿ ವಾಯುವೇಗದಲಿ ||
ವೋಲು ಹಾರು
ವಾಕಾಖ್ಯ ಗಿರಿಗಾ
ನು ಬೇಗ ಹನುಮನ ಬಳಿಗೆ ಹೋಗೆಂದ || ೧೫ ||

ರು ನನ್ನುಂಟುಮಾಡಿಹ
ಜನು ರಾಮ ತ
ಾರ್ಯಾರ್ಥಕೈದುವ ಹನುಮನೆಂಬವನು ||
ವಿಶ್ರಮಿಸೆ ನೀ
ಯಲ್ಲಿದ್ದು ನಿಲ್ಲೆನ
ಹನುಮ ಹಾರುವ ಮಧ್ಯದೊಳಗೆದ್ದ || ೧೬ ||

ಯ ಮಣಿ ಶೃಂಗದೋಪರಿ
ತೆಂದ ಹನುಮಗೆ
ನಿನಗೆ ವಿಶ್ರಮಿಸಲಿಕೆ ಬೇಕಾದ ||
ಕ್ಷವನು ಮೆಲ್ಲ
ಮೈನಾಕನೆಂಬವ
ಪ್ರದಿ ಬಹುದೆನೆ ಹನುಮನಿಂತೆಂದ || ೧೭ ||

ವೇಗದಿಂ ನಾ ರಾಮ ಕಾರ್ಯಕೆ
ಹೋಗುವವ ನಾ ಶ್ರಮಿಸುತೀ ಫಲ
ಭೋಗವುಂಬುದು ಯೋಗ್ಯವಲ್ಲೆಂದಾ ಗಿರಿಯ ಶಿಖರವ ||
ತಾಗಿಸುತ ಹಸ್ತದಲಿ ಮುಂದಕೆ
ಹೋಗೆ ಕಿಂಚಿದ್ದೂರ ಹಿಡಿದುದು
ಮೇಗಣಚ್ಛಾಯೆಯನು ಛಾಯಾಗ್ರಹವು ಕೇಳಲ್ಲಿ || ೧೮ ||

ಸಿಂಹಿಕಾ ನಾಮಾಖ್ಯ ಘೋರದ
ಸಂಹ ದುರ್ಗಹವಾರದಾಗಲಿ
ಸಿಂಹ ಮಾರ್ಗದಲ್ಲೈದುವವದಿರ ಛಾಯೆ ಕೆಳಗಿಳಿಯೆ ||
ಗ್ರಂಹೆಯನು ಮಾಡುವುದು ಸೆಳೆದು ನೃ
ಸಿಂಹ ಭೃತ್ಯನ ಛಾಯೆ ಬೀಳಲು
ರಂಹದಂದದಿ ತಡೆಯೆ ಮಾರುತನಿಂತು ಬೆರಗಾದ || ೧೯ ||

ಆರು ತಡೆದರು ತನ್ನ ವೇಗದ
ದಾರಿಗಟ್ಟಿದರೆನುತ ನೋಡುತ
ವೀರ ಮಾರುತಿ ಸುತ್ತ ಕಾಣದೆ ಕೆಳಗೆ ನೋಡುತಿರೆ ||
ಘೋರಕಾಯದ ಸಿಂಹಿಕೇಯು ವಿ
ಕಾರ ರೂಪವ ಕಂಡು ಘುಮುಕಿಸ
ಮಿೂರ ಅವಳನು ಮೆಟ್ಟಿ ಕೊಂದುಪ್ಪರಿಸಿದನು ಮೇಲೆ || ೨೦ ||

ಮತ್ತೆ ವೇಗದಿ ಮುನ್ನಿನಂದದ
ಲಿತ್ತ ದಕ್ಷಿಣ ಮುಖದಿ ಹೋಗಿ ಮ
ಹತ್ತರದ ದಿಡಕೈದಿ ಕಂಡನು ಫಲಕುಸುಮದಿಂದ ||
ಸುತ್ತ ಕಲ್ಪದ್ರುಮದ ಖಗಮೃಗ
ವೆತ್ತ ನೋಡಲು ಶೋಭಮಾನದ
ಲಾ ತ್ರಿಕೂಟ ಗಿರೀಂದ್ರ ಮೂರ್ಧಿಯಲಿಳಿದನನಿಲಭವ || ೨೧ ||

ಸುತ್ತಲೂ ಪ್ರಾಕಾರ ಪಂಕೆಯ
ಚತ್ವರದ ಮೇಗೋಟೆ ತೆನೆಗಳ
ಕೊತ್ತಳದ ಕಾಹುಗಳವಂಕದ ರಂಕೆ ಡೆಂಕೆಯದ ||
ಮತ್ತೆ ವಜ್ರಕವಾಟ ಮೊಟನ
ಹತ್ತದೋಜೆಯ ಲಾಳವಿಂಡಿಗೆ
ಯತ್ತನೋಡಲು ಹೇಮಮಯದಟ್ಟಾಲ ಗೋಪುರವು || ೨೨ ||

ಎಂತು ಹೊಗುವೆನೆನುತ್ತ ಮಾರುತಿ
ಚಿಂತಿಸುತ ತನ್ನೊಳಗೆ ರಾತ್ರಿಯು
ಬಂತದಾದರೆ ಸೂಕ್ಷ್ಮರೂಪಿಂದೊಳ ಪೊಗುವೆನೆನುತ ||
ನಿಂತನಲ್ಲಿಯೆ ಹಗಲು ಸವೆಯಲಿ
ಕಾಂತ ಸೂಕ್ಷ್ಮವು ರೂಪವನು ಬಲ
ವಂತನೊಳಗೈದಲಿಕೆ ಮತ್ತೊಂದಾಯ್ತು ಕೇಳೆಂದ || ೨೩ ||

ಆ ಪುರದ ವರಲಂಕೆ ರಕ್ಕಸಿ
ರೂಪವಾಗಿಹದಲ್ಲಿ ಹೊಗುತಿರ
ಲೀ ಪವನನಂದನಗೆ ನುಡಿದಳು ಗಜರಿ ಗರ್ಜಿಸುತ ||
ಪೋಪೆ ಯೆಲ್ಲಿಗೆ ಚೋರ ನೀ ಕಪಿ
ರೂಪದಿಂ ತನ್ನಾದರಿಸದರಿ
ಯಾ ಪುರದ ಲಂಕಿಣಿಯ ರಾತ್ರಿಗತಾರ ಭಕ್ಷಿಣಿಯ || ೨೪ ||

ಗರ್ಜಿಸುತ ತಾಮ್ರಾಕ್ಷಿಯಿಂ ಬರೆ
ದುರ್ಜನೆಯ ಹನುಮಂತ ಹೊಡೆದನು
ವಜ್ರಮುಷ್ಟಿಯಲಿಳೆಗೆ ಕೆಡೆದಳು ರಕುತವುಗುಳುತ್ತ ||
ಲಜ್ಜಿಸುತ್ತವಳೆದ್ದು ನುಡಿದಳು
ಸಜ್ಜನಾಗ್ರಣಿ ಹೋಗು ಜಯಿಸಿದೆ
ನಿರ್ಜರಾರಿಯ ಲಂಕೆಯನು ಮಾಂಗಲ್ಯ ನಿನಗೆನಲು || ೨೫ ||

ಸೃಷ್ಟಿಲಜನಿಸಗೆಂದನಾದಿಯ
ಇಷ್ಟ ಪೀರದ ಯುಗಕೆ ತ್ರೇತೆಯಲ್
ಹುಟ್ಟುವನು ದಶರಥಗೆ ವಿಷ್ಣುವೆ ರಾಮ ಸಂಜ್ಞೆಯಲಿ ||
ಸೃಷ್ಟಿನಾ ವರ ಯೋಗಮಾಯೆ ವಿ
ಶಿಷ್ಟ ಜನಕನ ಮಗಳೆ ಹಳುವೊಡ
ಬಿಟ್ಟು ರಾಮನು ಸತಿಯನುಜ ಸಹ ಕಾನನಕೆ ಬಹನು || ೨೬ ||

ರಾವಣನನಾ ಕೊಲಲು ಬೇಡಿ
ದೇವ ವರವ ಸಲಿಸಲಿಕೆ ಮಾಯಾ
ದೇವಿ ಸೀತೆಯು ಮಾಡೆ ದಶಶಿರನವಳ ಕೊಂಡೊಯ್ಯೆ ||
ಗಾವಿಲನ ಪುರಕೊಬ್ಬ ಕಪಿಯನು
ದೇವನಟ್ಟಲು ರಾತ್ರಿಯಲಿ ಬಹ
ನಾವರಿಸಿ ನೀ ಗಜರೆ ಕೊಲುವನು ಹೊಡೆದವನು ನಿನ್ನ || ೨೭ ||

ಆಗ ನೀ ವ್ಯಥೆಬಡುವೆನೆಂದಿಗೆ
ಯೋಗರೆಯ ಮಾತಲ್ಲ ರಾವಣ
ನಾಗಮನವೆಂದಿಹನು ಬೊಮ್ಮನು ಹಿಂದೆ ತನಗೆಂದು ||
ಸಾಗಿತದು ನೀ ಗೆಲ್ದೆ ಲಂಕೆಯ
ಯೋಗಿಗೊಳಗೆ ನಡುಪುರದಿ ರಾವಣ
ನಾಗಿಸಿಪ್ಪುದ್ಯಾಗಿಹುವುದದು ಹಲವು ವೃಕ್ಷದಲಿ || ೨೮ ||

ಅಲ್ಲಶೋಕಾವನವಿಹುದು ಮ
ತ್ತೆಲ್ಲರಿಂ ಮಿಗಿಲಾದ ಶಿಂಶಪ
ಪುಲ್ಲಿಸಿತ ಮರನಡಿಯ ರಾಕ್ಷಸಿಯರ ಹೊರಹಿನಿಂದ ||
ವಲ್ಲಭನ ಹಂಬಲಿಸುತಿಪ್ಪಳು
ತಳ್ಳಿಸುತವೆ ಸೀತೆ ಹೋಗೈ
ಬಲ್ಲಿದನೆ ಕಂಡರುಹು ಬೇಗದಿ ಮರಳಿ ರಾಘವಗೆ || ೨೯ ||

ಧನ್ಯೆಯಾದೆನು ಪೂರ್ವಕೃತ ಸಂ
ಪನ್ನೆಯಾದನು ರಾಮನ ಸ್ಮೃತಿ
ತನ್ನ ಸುಕೃತದಿ ಬಂದುದಿದು ಭವಪಾಶಮೋಚನದ ||
ನಿರ್ಣಯವು ತದ್ಭಕ್ತಸಂಗದ
ಲೆನ್ನ ಕಲ್ಮಷ ಹೋಗಿ ಹರಹಿ
ತ್ತಿನ್ನುದಿನ ಹೃದಯದಲಿ ರಾಘವನೆಗಲಬೇಡೆನಗೆ || ೩೦ ||

ಆವ ಯೋನಿಯಲಿರಲಿ ಮತ್ತಾ
ವಾವ ಚೇಷ್ಟೆಯನೆಸಗಿ ಕೆಟ್ಟಿರ
ಲಾವನಾಗಲಿ ಹರಿಶರಣಜನಸಂಗ ಮಾತ್ರದಲಿ ||
ಬೇವುದೆಲ್ಲಾ ಪಾಪ ತಕ್ಷಣ
ವೇ ವಿವೇಕವು ಬಹುದಲಾ ರಾ
ಜೀವನಾಭನದಾವ ಕರುಣೆಯೊ ಭಕುತರೊಳಗೆನ್ನು || ೩೧ ||

ಮರೆದು ನೆನೆದರೆ ತನ್ನನೇ ನೆರೆ
ತೆರುವ ಕರುಣಾನಿಧಿಯನೆಂತೋ
ಮರೆವರಕಟಾ ಮೂಢಮಾಯಾ ವಿಷಯ ಲಂಪಟರು ||
ಕುರಿಗಳಿಂದತಿ ಕಷ್ಟರಲ್ಲಾ
ಕುರಿಗಳಿಗೆ ಸಹ ಮೇಲನುತ್ತಮ
ಕುರಿಯದುಂಟದರಿಂದ ಕಷ್ಟವು ಮೂಢ ಜನರಿವರು || ೩೨ ||

ಏ ದಯಾನಿಧಿ ರಾಮ ತನಗೀ
ಸಾಧುಸಂಗವ ನಿನ್ನ ನಿಶ್ಚಯ
ಲಾದರಿಸಿದ್ದೈ ತನ್ನ ಭಕ್ತಾಭೀಷ್ಟ ವಿಗ್ರಹನೆ ||
ಮೇದಿನೀ ಸುತೆಗಲ್ಲ ಭೃತ್ಯನ
ನಾದರದಿ ಕಳುಹಿದುದು ಮಾಯಾಂ
ಬೋಧಿ ಪತಿತರ ಕಾಯ ನೀನವತಾರ ಕಾರಣವು || ೩೩ ||

ಆಡಿ ಕೆಲಬರನೊಲಿದು ಕರುಣದಿ
ನೋಡಿ ಕೆಲಬರ ಕೆಲರ ಭೃತ್ಯರ
ಮಾಡಿ ಕೆಲಬರ ವೈರದಿಂ ಹಲಕೆಲರನೀ ಪರಿಯ ||
ಗೂಢ ಗುಣಗಣದಿಂದ ಪಾವನ
ಮಾಡುವಗ್ಗದ ದೈವವೇ ತಾ
ಬೇಡುವೆನು ತನಗೀವುದೀ ನಿಜ ದಾಸ್ಯ ದಾಸ್ಯತೆಯ || ೩೪ ||

ನೆನೆವುತನುದಿನ ನಿನ್ನ ಮೂರ್ತಿಯ
ಮನದಿ ನಮಿಸುತ ನಿನಗೆ ಶಿರದಿಂ
ದನವರತ ಕೀರ್ತಿಸುತ ನಾಮಾವಳಿಯ ಗುಣಗಣವ ||
ಬಿನುಗು ವಿಷಯದಿ ಬೀಳದಂದದಿ
ಜನುಮಯನೆ ಕೃಪೆ ಮಾಡೆನುತ್ತಿರೆ
ಹನುಮ ಬೀಳ್ಕೊಂಡವಳ ಹೊಕ್ಕನು ಲಂಕೆಯೊಳಯಿಂಕೆ || ೩೫ ||

ಹನುಮನಬುಧಿಯ ದಾಂಟಿ ಲಂಕೆಯ
ಲನುಪಮನು ಹೊಗಲತ್ತ ಸೀತೆಗು
ದನುಜ ರಾವಣನಿಂಗೆ ಕುಣಿದೆಡದಕ್ಷಿ ಭುಜಮೂರು ||
ಘನ ಮಹಿಮ ರಘುರಾಮಚಂದ್ರಗೆ
ಮನಕೆ ಸಂತಸವಾಗಲಪ್ಪಂ
ದನವು ತೋರಿತು ಬಲದ ಕಡೆಯಲಿ ಬಾಹುನೇತ್ರದಲಿ || ೩೬ ||

ಬಳಿಕ ಪಾರ್ವತಿ ಕೇಳು ಲಂಕೆಯ
ನೊಳಗೆ ಹೊಕ್ಕನು ಹನುಮ ಶೋಭಾ
ವಳಿಯವನು ರಾತ್ರಿಯಲಿ ಸೂಕ್ಷ್ಮ ರೂಪವನು ಧರಿಸಿ ||
ತೊಳತೊಳಲಿ ಪುರಪುರಿಕೆಯಂಗಡಿ
ಗಳಲಿ ನಾನಾ ಕೇರಿ ಕೇರಿಗ
ಳೊಳಗೆ ಕಾಣದೆ ಜನಕಜೆಯ ಹೊಕ್ಕನು ನೃಪಾಲಯವ || ೩೭ ||

ಅದರೊಳೆಲ್ಲಿಯು ಕಾಣದೇ ಹಾ
ಶೋಕಾವನಕೆ ಲಂಕಿಣಿ
ಹೇಳಿದ ಕುರುಹ ನೋಡುತ ಶೀಘ್ರದಿಂದೈದಿ ||
ಲಾ ವನಲಕ್ಷ್ಮಿ ನಾನಾ
ಫಲ ಪಕ್ವಾಮ್ರ ಶಾಖಾ
ಸುಶೋಭನ ಸೀತಳಾಮೋದದಲಿ ರಂಜಿಸುತ || ೩೮ ||

ಕಲ್ಪ ಭೂರುಹ ಲತೆವನೆಯುಲವು
ತಾಪದ ಮಣಿ ಚರಿತ ನಾ
ಪ್ರಕಾರದ ವಾಪಿಗಳ ಸೋಪಾನ ಸೌಭಗದ ||
ೋನ್ನತ ಗೋಪುರದಲೆಸ
ನಾನಾಖಗ ಮೃಗಾಳಿಯು
ಉದ್ಯಾನದ ಮಹಾವಿಭವವನು ನೆರೆ ಕಂಡ || ೩೯ ||

ಅದರೊಳೂ ಪ್ರತಿ ವೃಕ್ಷಗಳು ತ
ನಿರೀಕ್ಷಿಸಿ ಕಾಣದಿರೆ ಮುಂ
ನೋಡಿದನೊಂದು ಶಿಂಶಪವನು ಲತಾರ್ಜಿತವ ||
ಕಾಣದು ಸ್ವರ್ಣ ಪರ್ಣದ
ಳದ ಪಕ್ಷಿಗಳೆ ತುಂಬಿಹು
ಡಿಯು ದನುಜೆಯರರೊಡನಿರೆ ಕಂಡನವನಿಜೆಯ || ೪೦ ||

ದಾನವೀಯರ ಮಧ್ಯದಲಿ ಕುಶ
ಯಾಗಿರಲೇಕವೇಣಿಯು
ನದಲಿಳಿವಶ್ರುಜಲ ಮಲಿನಾಂಬರಂಗಳಲಿ ||
ನದೇವತೆಯುವನಿಗಿಳಿದಂ
ತಪ್ರಿಯ ರಾಮ ರಾಮಾ
ನಿನೀ ಬಗೆದೊರದಲಾ ಯೆನುತೊರಲುತಿರೆ ಕಂಡ || ೪೧ ||

ಜನನಿಯೇ ಹೋ ಸಾಗಿ ಉಂಟದೆ
ತನುನನಿದು ಕಾಷ್ಠದವೊಲಿರಲಾ
ಹನುಮನಾಶ್ವಾದಿಸುತ ಶಾಖೆಯ ವೃಕ್ಷದಗ್ರದಲಿ ||
ಜನಕ ಸುತೆಯನು ಕಂಡು ಭಾಷೆಂ
ದನು ಕೃತಾರ್ಥ ಕೃತಾರ್ಥನಾದೆನು
ಘನ ಸುಕೃತವಹ ರಾಮಕಾರ್ಯವ ಸಾಧಿಸಿದೆನೆಂದ || ೪೨ ||

ಅಷ್ಟರೊಳಗೇ ಕಿಲಕಿಲಾರವ
ಮುಟ್ಟಿ ಕೇಳಿತು ಪುರದ ಹೊರಗದ
ನಿಟ್ಟಿಸುತ ಮಾರುತಿಯದೇನೆನುತಿರಲು ರಾವಣನು ||
ಹೆಟ್ಟುಗೆಯರೊಡನೈತರುತ್ತಿರೆ
ದುಷ್ಟ ನೀಲಾಂಜನದ ಗಿರಿಯಿಂ
ದಷ್ಟದಶದಿಂದೆರಡಧಿಕ ಕರ ದಶಶಿರಂಗಳಲಿ || ೪೩ ||

ವಾತಜನು ವಿಸ್ಮಯದಿ ವೃಕ್ಷಾ
ವ್ರಾತಷಂಡದಲಡಗಿದನು ರಘು
ನಾಥನನೆ ರಾವಣನು ಚಿಂತಿಸುತಿಪ್ಪನನವರತ ||
ಸೀತೆಯನು ತಂದೇಸುದಿನ ವ್ಯಾ
ತೀತಕಿನ್ನೂ ಬಾರ ರಾಮನು
ಘಾತಿಸಲು ತನ್ನನು ಪುಣ್ಯವಿಹೀನ ನಾನೆಂದ || ೪೪ ||

ನೆವದಲಲ್ಲದೆ ಬಾರದೆಂದಾ
ನವನಿಸುತೆಯನು ತಂದೆನೆಲ್ಲಾ
ದಿವಿಜರೂ ಮೊರೆಯಿಡಲು ರಾಘವನೆಂದು ಸದೆಬಡಿದೆ ||
ನವ ಸುದೂರ್ವದಳಾಂಗ ಕೋಮಲ
ರವಿ ಶತದ್ಯುತನಪ್ರಮೇಯನ
ಶಿವ ಶಿವಾ ನಾನೆಂದು ಕೂಡುವೆನೆಂದು ಭಾವಿಸುವ || ೪೫ ||

ಆವ ವೇದಾಂತಗಳಿಗಾತ್ಮನು
ಜೀವನು ನ್ಯಾಯತರಿಗನಲನು
ಭಾವಿ ಹೋತೃಗಳಿಗೆ ವಿಪಕ್ಷನು ಸೌರರಿಗೆ ಮೇಲೆ ||
ದೇವಿ ಶಾಕ್ತಿಗೆ ಪೂರ್ಣ ಸಾಂಖ್ಯೆಗೆ
ಸೇವ್ಯ ಭಕುತಗೆ ವಿಷ್ಣು ಶಿವ ತಾ
ಕೇವಲದ ಶೈವರಿಗೆ ಯಾವನಸಾರರಿವನೆಂಬ || ೪೬ ||

ಎನುತಲನುದಿನ ಯೋಚಿಸುವನಾ
ನನದಶನುವಾ ರಾತ್ರಿಯೊಳು ತಾ
ಕನಸ ಕಂಡನು ರಾಮನೊಬ್ಬ [1]ಕಪೀಶ್ವರನ[1] ಕಳುಹೆ ||
ವನಕೆ ಬಂದಿರೆ ಸೀತೆಯಿದ್ದಾ
ವಿನುತ ವೃಕ್ಷಾಗ್ರದಲಿ ತೋರಿರ
ಲನುಪಮಾಂಗದಿ ಮತ್ತೆ ನೋಢಲಿಕಡಗಿದುದ ಕಂಡ || ೪೭ ||

ಏನಿದದ್ಭುತ ಸ್ವಪ್ನವೆಂದಾ
ದಾನವನು ತನ್ನೊಳಗೆ ಚಿಂತಿಸಿ
ತಾನು ನುಡಿದನು ಕೆಲವು ಸಪ್ನವು ಸತ್ಯವೇ ಯಹುದು ||
ಯೇನದಾಗಲಿ ಬೇಗ ಹೋಗಿಯೆ
ನಾನು ಸೀತೆಯ ಗಜರಿ ಧಿಟ್ಟಿಸಿ
ನಾನವಿಧದಿಂದವಳು ಧುಃಖಿಸುವಂತೆ ಮಾಡುವೆನು || ೪೮ ||

ಅದನು ವಾನರ ಹೋಗಿ ಹೇಳಲಿ
ಸುದತಿಯುಳುವುದ ಕಂಡು ರಾಮಗೆ
ತದಪಿ ಕಾರ್ಯವ ಕಾಂಬೆವೆಂದನು ಬರುತ ಸಹವಾಗಿ ||
ಮುದಮುಖನು ಭ್ರುತಿಫಲು ಧ್ವನಿಸಿತು
ಪದದ ನೂಪುರ ಕಂಕಣವ ಕೇ
ಳ್ದನು ಭಯದಲಿ ಸೀತೆ ತಲೆಯನು ಬಾಗಿಯುಡುಗಿದಳು || ೪೯ ||

---

1 ಕಪೀಂದ್ರನನು (ಖ)

ಧರಣಿಯನು ನೋಡುತ್ತ ನಯನದಿ
ಸುರಿವ ಜಲದಲಿ ರಾಮ ಚರಣದ
ಲಿರಿಸಿ ಮತಿಯನು ಸೀತೆಯಿರೆ ಕಂಡೆಂದ ರಾವಣನು ॥
ತರುಣಿ ನಾ ಬರಲುಡುಗಿಕೊಳುತಿರೆ
ಚಿರಿದು ರಾಮಗೆ ಕೀಡುವೈ ವನ
ಚರರ ಮಧ್ಯದಲಾತ ಸಾನುಜ ಸಹಿತಲಿಹನೆಂದ ॥ ೫೦ ॥

ಒಮ್ಮೆ ತೋರುವನೊಮ್ಮೆ ತೋರನು
ಹಮ್ಮಯಿಸಿ ನೋಡಿದರು ಸುತ್ತಲು
ನಮ್ಮ ದೂತರನೇಕ ಮಂದಿಯ ಕಳುಹಿ ನೋಡಿದೆನು ॥
ರಮ್ಮನೀತಕೆ ನಿಸ್ಪೃಹನು ನೀ
ನೊಮ್ಮೆಯೂ ಬಿಡದಪ್ಪಿದಡು ಬರು
ಹೆಮ್ಮೆಯಲ್ಲದೆ ಮನವು ನಿತ್ತೊಳಗಿಲ್ಲವಂಗೆಂದ ॥ ೫೧ ॥

ರೂಪವಿಲ್ಲಿಂದ್ರಿಯ ವಿಹೀನನು
ಪ್ರೋಪಚಾರಿಕವಲ್ಲ ಗುಣ ವಿ
ಲೋಪಳೆನ್ನವಳೆಂಬುದಿಲ್ಲಾ ಚಿಂತೆ ಮುನ್ನಿಲ್ಲ ॥
ಈ ಪರಿಯ ನೀ ಭೋಗವೆಸಗಿದ
ಡಾ ಪರಿಯಲೂ ವುಂಡು ವುಣ್ಣದ
ಲಾ ಪರಿಯಲದ ಮರೆದು ಬಿಡುವ ಕೃತಘ್ನನವನೆಂದ ॥ ೫೨ ॥

ತಂದು ತಾ ನಿನ್ನೇಸು ದಿನವಾ
ಯ್ತಿಂದು ನಾಳೆಯು ಬಾರನಾತನಿ
ಗೊಂದು ಶಕ್ತಿಯುಮಿಲ್ಲ ಮೂಢನು ಚಂಡಿ ನಿಸ್ಸತ್ವ ॥
ಸಂದ ನರಚಾತುರ್ಯವೇ ನಿ
ಲ್ಲಿಂದದರಿಂದಿಂ ನಾನು ನಿನ್ನಲಿ
ನಿಂದ ಮನದವನೊಲಿಸಬಾರದೆ ಸುಮ್ಮನೆನ್ನುವನು ॥ ೫೩ ॥

ತೊತ್ತಿಯರ ಮಾಡುವೆನು ದಿವಿಜ ಕು
ಲೋತ್ತಮಾಂಗನೆಯರನು ಗಂಧ
ರ್ವೋತ್ತಮೆಯರನು ನಿನಗೆ ಹೇಳಿದ ಬೆಸನ ಮಾಳ್ಪಂತೆ ||
ಎತ್ತಲಾನೂ ತನಗೊಲಿದಡೆಂ
ದತ್ಯಧಿಕವೆನೆ ನೋಡುತಿದ್ದನು
ಮತ್ತೆ ಚತುರೋಪಾಯದಿಂ ಮಾಯಾ ಮಹೇಶ್ವರಿಯ || ೫೪ ||

ಸಂಧಿ ಮೂವತ್ತೆಂಟು ಪದಗಳ
ವೃಂದ ರುದ್ರರು ಬಾಣ ಹಸ್ತರು
ಯೆಂದೆನಿಪ ಗಣನೆಯಲಿ ಹನುಮನು ದಾಂಟಿದಬುಧಿಯನು ||
ಮುಂದೆ ಲಂಕೆಯ ಹೊಕ್ಕಶೋಕಾ
ವೃಂದದಲ್ಲಿದ್ದುದನು ಕೇಳಿ ಮು
ಕುಂದ ಗುರು ನಿತ್ಯಾತ್ಮ ಲಕ್ಷ್ಮಿನೃಸಿಂಹ ಸಲಹುವನು || ೫೫ ||

ಅಂತು ಸಂಧಿ ೩೮ ಕ್ಕೆ ಪದ ೧೭೪೬ ಕ್ಕೆ
ಮಂಗಳಮಹಾ ಶ್ರೀ ಶ್ರೀ ಶ್ರೀ



|| ಶ್ರೀ ರಾಮಚಂದ್ರಾಯ ನಮಃ ||



# ಮೂವತ್ತೊಂಭತ್ತನೆಯ ಸಂಧಿ

## ಸೀತೆಗೆ ಉಂಗುರ ಪ್ರದಾನ. ವನಭಂಜನ

ಸೂಚನೆ || ಸೀತೆಗುಂಗುರವಿತ್ತು ಕ್ಷುಧ್ರಹಿನ
ಮಾತನರಿದಾ ವನವ ಮುರಿವುತ
ಭೀತಿಸದೆ ದಾನವರ ಕೊಂದನು ವೀರ ಹನುಮಂತ ||

ಪದ || ಎಳೆ ತಮಾಲದ ಕಾಯ ಕಾಂತಿಯ
ನಳಿನದಳ ಸನ್ನಿಭದ ನೇತ್ರದ
ಸುಳಿಗುರುಳ ಶೋಭಿತ ವಿಲಾಸದ ಶೋಭನದ್ಯುತಿಯ ||
ಗಳದ ಹಾರದ ಜನ್ನಿವಾರದ
ತಿಳಿವಸುರ ಸುಳಿನಾಭಿ ಕೆಳಗಿಳಿ
ದಿಳಿವ ಪೀತಾಂಬರದಿ ರಂಜಿಪ ರಾಮನನು ನೆನೆವೆ || ೧ ||

ಕೇಳು ಪಾರ್ವತಿ ಸೀತೆ ರಾವಣ
ಖೂಳ ವಚನ ವ್ಯಥೆಗೆ ರೋಷ ಕ
ರಾಳದಿಂದೀಕ್ಷಿಸುತವನಿಯ ಧೋಮುಖದಿ ತೃಣವ ||
ಬಾಲೆ ಮಧ್ಯದಲಿರಿಸಿ ನುಡಿದಳು
ಗಾಳುಗೆಡೆ ಬಂದುದನು ನಾಲಿಗೆ
ಹೇಳಲುಂಟೆಲೆ ಹೂಹೆ ನಿನಗಂಜುವನೆ ರಾಘವನು || ೨ ||

ಹನುಮಂತನಿಂದ ಸೀತಾದೇವಿಗೆ ಉಂಗುರ ಪ್ರದಾನ



ರಾವಣನಿಂದ ಸೀತಾದೇವಿಗೆ ಪ್ರಲೋಭನೆ



ಲಕ್ಷ್ಮಣನು ಸಹ ರಾಮನಗಲಿರೆ
ಭಿಕ್ಷು ವೇಷದಿ ನಾಯಿ ಬಂದೊಳ
ಹೊಕ್ಕು ಹವಿಯನು ತುಡುಕುವಂದದಿ ತಂದೆ ತಸ್ಕರನು ||
ದಕ್ಷನಹೆ ಬಗುಳುವಡೆ ಮನೆಯಲಿ
ತಕ್ಕಿಸುವುದೆನ್ನಳಲು ನಿನ್ನವ
ವಕ್ಷವನು ರಾಮಾಸ್ತ್ರ ಘತಿಯಿಂ ನೀಸುದುಳುವಾಗ || ೩ ||

ತೊಂಡ ನೀ ರಾಘವಗೆ ಗಣ್ಯವೆ
ಕಂಡು ಬಾರಾನನನ ಬಲುಹನು
ದಿಂಡುಗೆಡಹನೆ ನಿನ್ನ ಶಿರಧಿಯ ಕಟ್ಟಿ ಶರದಿಂದ ||
ಚಂಡ ಲಕ್ಷ್ಮಣ ಸಹಿತ ನಿನ್ನನು
ಖಂಡಿಸುವ ಬಲು ಪುತ್ರರನು ಸಹ
ಕೊಂಡುಹೋಹನು ಬಿಡಿಸಿ ನನ್ನಯ ಸೆರೆಯ ನಿಜಪುರಕೆ || ೪ ||

ಎನಲು ಸೀತಾ ಪರುಷ ವಚನವ
ದನುಜಪತಿ ಕೇಳುತ್ತ ರೌದ್ರಾ
ನನ ಭಯಂಕರನೆದ್ದು ಕೋಪಾಟೋಪದಲಿ ಜಡಿದು ||
ತನು ನಡುಗಿ ಸೆಳೆದಾಗ ಖಡ್ಗವ
ಮೊನೆಯಲಿರಿಯಲಿಕ್ಕೈದೆ ತಡೆದಳು
ವನಿತೆ ಮಂಡೋದರಿ ಮಹಾಸತಿ ತಿಳುಹಿ ರಾವಣನ || ೫ ||

ಬಿಡು ಬಿಡವಳನು ದೀನೆ ದುಃಖಿತೆ
ಕಡು ಕೃಪಾಂಗಿ ಮನುಷ್ಯೆ ನೀ ಧಿಟ
ಬಡವನೇ ಗಂಧರ್ವ ಸುರನಾಗಾಂಗನೆಯರೈದಿ ||
ವೊಡನೆ ಮದವಿಂಹಲೆಯರೀ ನಿ
ನ್ನೆಡೆಯ ಹಾರುತ್ತಿರಲಿವಳು ತಾ
ಪಡಿಯೆ ಯೆಂದಡೆ ಬಳಿಕ ನುಡಿದನು ದಾನವಿಯರಿಂಗೆ || ೬ ||

ಎಲೆಲೆ ವಿಕೃತಿ ವಿರೂಪಿ ಜೇಷ್ಟಿತೆ
ತಿಳುಹಿರೌ ಸೀತೆಯನು ಸನ್ಮತಿ
ಪೊಳೆಯುವೆಂತನ್ನೊಳಗೆ ತರ್ಜನ ಭರ್ಜನೆಗಳಿಂದ ॥
ಕಳೆವು ಬಿಡಬೇಡೆನ್ನ ರಾಕ್ಷಸ
ಕುಲದ ಭಾಗ್ಯವಸುಣಲಿ ಯಲ್ಲದ
ಡುಳುಹನೇ ತಿಂಗಳಿಂ ಮೇಲರಿಯಬಹುದೆಂದ ॥ ೭ ॥

ಬಳಿಕಿವಳ ಮೋಹವೆ ಯೆನುತ್ತಾ
ಲಲನೆಯರು ಸಹ ಹೋದನಾ ನಿಜ
ನಿಳಯದಂತಃಪುರಕೆ ಸೀತೆಯನಿತ್ತ ದನುಜೆಯರು ॥
ಹಲವುಪರಿ ತರ್ಜಿಸುವಳೊಬ್ಬಳು
ಖಳಗೆ ಹೆಂಡತಿಯಾಗಲಾರದೆ
ಕಳಿವರೇ ಯವ್ವನವ ವ್ಯರ್ಥದಲೆನುತ ಮತ್ತೊಬ್ಬ ॥ ೮ ॥

ಒಬ್ಬಳೆದ್ದಳು ಕಡಿಯೆ ಖಡ್ಗದ
ನೊಬ್ಬ ನುಂಗಲು ಬಂದಳೀಪರಿ
ಸರ್ಬರೆಲ್ಲರು ಬಾಧಿಸುತ್ತಿರೆ ತ್ರಿಜಟೆಯೆಂಬವಳು ॥
ಹಬ್ಬಿಯುವಳನು ವೃದ್ಧೆ ನುಡಿದಳು
ಗಬ್ಬಿಗಳಿರಂಜಿಸುವಿರೇತಕೆ
ಯುರ್ಬಿಜೆಗೆ ನಮಿಸುವುದು ನೀವೆನ್ನುಕ್ತಿಯನು ಕೇಳಿ ॥ ೯ ॥

ಕಂಡೆನೀಗ ಸ್ವಪ್ನವನು ನಾ
ಪುಂಡರೀಕದಳಾಕ್ಷ ರಾಘವ
ಮಂಡಿಸಿದ್ದೈರಾವತಾಂಹಯ ಶುಭ್ರ ಮದಗಜವ ॥
ಚಂಡ ಲಕ್ಷ್ಮಣ ಸಹಿತ ಬಂದೀ
ಪುಂಡ ದನುಜರ ಕೊಂದು ಲಂಕೆಯ
ಕೆಂಡನಾಗಲು ಸುಟ್ಟು ಸೀತೆಯ ಸೆರೆಯ ಬಿಡಿಸಿದನು ॥ ೧೦ ॥

ಅಂಕದಲಿ ಸೀತೆಯನು ಕುಳಿರಿಸಿ
ಲಂಕರಿಸಿದುದ ಕಂಡೆ ರಾವಣ
ಕೆಂಕಮುಖದಲ್ಲೇರಿ ಕತ್ತೆಯ ಬತ್ತಲೆಣ್ಣೆಯನು ||
ಮುಂಕುಳಿಸಿ ಮೈಗುದ್ದಿಗೊಳುತೆಡ
ವಂಕ ಪುತ್ರಸಪೌತ್ರರಯ್ದುತ
ಮಂಕು ಮರಡಿಯ ಮಾಲೆಯಿಕ್ಕಿದ ಪರಿಯದನು ಕಂಡೆ || ೧೧ ||

ಇರಲು ರಾಮನ ಬಳಿಯ ಸೇವೆಯ
ಭರದಿ ಮಾಡುತ ಸುಖದಿ ವಿಭಿಷಣ
ಪರಮ ಶೋಭನನಾಗಿ ಕಂಡೆನು ಬೆಳಗು ಜಾಮದಲಿ ||
ನಿರುತ ತಪ್ಪದು ಸಪುನ ರಾವಣ
ದುರುಳರನು ರಘುನಾಥ ಕೊಂದೀ
ದೊರೆತನದ ಪಟ್ಟವನು ಪಾಲಿಸುವನು ವಿಭೀಷಣಗೆ || ೧೨ ||

ಸೀತೆಯನು ನೆರೆ ಬಿಡಿಸಿಯಂಕದ
ಲೋತಿವಳ ಪುರಕೊಯ್ವನೆನಲಾ
ಮಾತ ಕೇಳ್ದಾ ತ್ರಿಜಟೆಯೆಂದುದ ಭಯದಿ ದನುಜೆಯರು ||
ಕಾತರಿಸಿ ಬಿಟ್ಟೋರಗಲವರ ವಿ
ಘಾತಿಗಂಜಿದ ಜನಕಸುತೆ ತಾ
ನೇತರಿಂ ಜೀವಿಸುವೆನೆಂದಳಲುತ್ತ ಕುಳ್ಳಿಹಳು || ೧೩ ||

ಬಾಳೆ ನೆಯನಾಶ್ರುಗಳಲೆಬಂಳು
ನಾಳೆ ತಿಂಬರು ತನ್ನ ದೈತೆಯ
ರಾಳುದನು ತನೆಗಿಲ್ಲದೀಗಳೆ ಯಾವ ಪರಿಯಿಂದ ||
ಜಾಳ ದುಃಖದ ತನುವ ಬಿಡುವೆನು
ಮೇಲೆ ರಾಮನೆ ಗತಿಯೆನುತ್ತವೆ
ಘೋಳಿಡುತ ಕಂಠದಲಿ ವೃಕ್ಷವ ಹಿಡಿದು ಹಲುಬುವಳು || ೧೪ ||

ಜೀವಿಸುವ ಮನವಿಲ್ಲ ತನಗಾ
ದೇವ ರಾಮನನುಳಿದು ದೈತ್ಯೇ
ಯಾವಳೀ ಮಧ್ಯದಲಿ ಮರಣಕುಪಾಯವೆಂತೆನುತ ॥
ಭಾವೆ ತನ್ನಯ ದೀರ್ಘ ವೇಣಿಯು
ದಾವಿನಿಂ ತಾ ಬಿಗಿದು ಕೊರಳನು
ಸಾವೆನೆಂದಿರೆ ನಿಶ್ಚಯವಲದ ಕಂಡನಾ ಹನುಮ ॥ ೧೫ ॥

ಮರನ ಕೊನೆಯಲ್ಲಿದ್ದು ನೋಡುತ
ಧರಣಿಜೆಯ ಪರಿಭವವ ಯೋಚಿಸಿ
ನಿರಿದು ಕಾಣದವೊಲು ಸೂಕ್ಷ್ಮದಿಂದ ಜಾನಕಿಗೆ ॥
ನಿರುತ ಕರ್ಣಕ್ಕೀಳವಂದದ
ಲೊರೆದ ಮೆಲ್ಲನೆ ಸೂರ್ಯವಂಶ
ಕ್ಕರಸೆನಿಸುವಿಕ್ಷ್ವಾಕುವಂಶೋದ್ಭವನು ದಶರಥನು ॥ ೧೬ ॥

ನೃಪನಯೋಧ್ಯಾಪುರಕವನ ಸುತ
ರಪರಿಮಿತ ವಿಕ್ರಮನು ರಾಮನು
ನಿಪುಣ ಲಕ್ಷ್ಮಣ ಭರತ ಶತ್ರುಘ್ನಾದ್ಯರನಿಬರಿಗೆ ॥
ಗಃಪುತ ರಾಮನು ಹಿರಿಯ ತಂದೆಯ
ಶಪಥವನು ಪಾಲಿಸಲು ಭರದಿಂ
ಕೃಪೆಯಲಡವಿಗೆ ನಡೆದಲಂಗನೆ ಲಕ್ಷ್ಮಣರು ಸಹಿತ ॥ ೧೭ ॥

ಗೌತಮೀತಟ ಪಂಚವಟಿಯಲಿ
ಸೀತೆ ಸಹಿತಿರೆ ರಾಮ ಲಕ್ಷ್ಮಣ
ರೋತು ಮೃಗಯೊದದಲಿ ಹೋಗಿರೆ ಸತಿಯ ರಾವಣನು ॥
ಕಾತರಿಗನೊಯ್ಯಲಿಕೆ ನೆರೆ ರಘು
ನಾಥ ದುಃಖಿಸಿಯರಸಿ ಗಾಯದಿ
ಪೋತವಾದ ಜಟಾಯುವನು ಕಂಡಿತ್ತ ನಿಜಗತಿಯ ॥ ೧೮ ॥

ಅರಸುತ್ತೈದಲು ಋಷ್ಯಮೂಕದ
ಗಿರಿಯಲಾ ಸುಗ್ರೀವನಾಳಾ
ಗಿರಲವನ ಸತಿಯಾಳ್ದ ಬಾಲಿಯು ಕೊಂದ ರಾಘವನು ॥
ಅರಸುತನವವಗಿತ್ತಡವ ವನ
ಚರರನರಸಲು ಸುತ್ತ ಕಳುಹಲು
ನೆರೆದ ಕಪಿಗಳೊಳೊಬ್ಬ ನಾನೀ ದಕ್ಷಿಣಕೆ ಬಂದೆ ॥ ೧೯ ॥

ಕೇಳಿ ಸಂಪಾತಿಯು ಮುಖದಿ ಮಕ
ರಾಲಯುವ ಶತಯೋಜನವ ಕಳಿ
ದಾಳುದನ ಕಾರ್ಯಕ್ಕೆ ಲಂಕೆಯು ಹೊಕ್ಕು ನಾ ಬಂದು ॥
ಆಲಿಗಳಲರಸರಸಿ ಕಾಣದೆ
ಮೇಲಶೋಕಾವನದಿ ಶಿಂಶಪ
ಮೂಲದಲ್ಲೊರಳುವಳ ಕಂಡೆನು ರಾಮನಂಗನೆಯ ॥ ೨೦ ॥

ಇಂದು ನಾ ಕೃತಕೃತ್ಯನಾದೆನು
ಯೆಂದು ಮಾರುತಿ ಸುಮ್ಮ[1]ನಿ[1]ರಲರ
ವಿಂದಮುಖಿ ಬೆರಗಾಗಿ ಕೇಳುತ ನೋಡೆ ಕಾಣದಿರೆ ॥
ಸಂದ ಗಗನವ ಶಬುದವೋ ಮೇ
ಲೆಂದುದೊಬ್ಬರ ಕಾಣೆ ಸಪ್ನವೊ
ಬಂದುದಿಲ್ಲದು ನಿದ್ರೆ ದುಃಖಿಸುತಿದ್ದೆಸಿನ್ನವರ ॥ ೨೧ ॥

ಕರ್ಣಪೀಯೂಷವನು ತನ್ನಲಿ
ವರ್ಣಿಸಿದ ಹಿತವಂತರಿದ್ದರೆ
ತನ್ನ ಮುಂದೇ ಬರಲೆನಲ್ಕದ ಕೇಳಿ ಮರುತಜನು ॥
ಉನ್ನತದ ಶಾಖಾಗ್ರದಿಂದಿಳಿ
ದನ್ನು ಕಳವಿಂಕ ಪ್ರಮಾಣದ
ವರ್ಣ ಸೀತದಿ ರಕ್ತ ಮುಖದಿಂ ಮುಂದೆ ನಮಿಸಿದನು ॥ ೨೨ ॥

---

1 ಗಿ (ಕ)

ಕರಯುಗವ [1]ಮುಗಿ[1]ದೆರಗಿ ನಿಂದಿರೆ
ಧರಣಿಸುತೆ ಶಂಕಿಸುತ ರಾವಣ
ದುರುಳ ತನ್ನನು ಮೋಹಿಸಲು ಬಂದನೊ ಕಪಟದಿಂದ ||
ನಿರುತವೆನುತವೆ ಹಣುಗಿ ತಲೆಯನು
ಹಿರಿದು ಭಯದಿಂ ಸುಮ್ಮನಿರಲಾ
ದರದಲೆಂದನು ತಾಯೆ ಶಂಕಿಸಬೇಡ ನೀವೆನುತ || ೨೩ ||

ದಾಸ ನಾ ಶ್ರೀರಾಮಚಂದ್ರಗೆ
ಭಾಸುರದ ಸುಗ್ರೀವ ಸಚಿವನು
ಬೀಸುವಾತನ ಮಗನು ಕಳುಹಿದ ರಾಮನಿಲ್ಲಿಗೆನೆ ||
ಸಾಶಯದಲೆಂದಳು ಕಪಿಯೆ ವಿ
ಶ್ವಾಸ ನರವಾನರರಿಗೆಂತೆನೆ
ವಾಸುದೇವನ ಭೃತ್ಯನೆಂದನು ಸೀತೆಗುತ್ತರವ || ೨೪ ||

ದೂರ ಕೈಮುಗಿದೆಂದ ರಾಘವ
ನಾರಯಿವುತವೆ ನಿಮ್ಮ ಬಂದನು
ನಾರಿ ಶಬರಿಯ ಮಾತಿನಿಂ ಋಷಿಮೂಕ ಪರ್ವತಕೆ ||
ಧೀರರಿಬ್ಬರ ಕಂಡು ಬೆದರುತ
ದಾರಿಗೆನ್ನನು ನೋಡ ಕಳುಹಲು
ವೀರ ಸುಗ್ರೀವಾಂಕ ವಟುರೂಪಾಗಿ ನಾ ಹೋದೆ || ೨೫ ||

ಅವರ ನಾನುಪಚರಿಸಿ ಹೆಗಲನು
ಭುವನ ಮಧ್ಯರ ಹೊತ್ತು ಬಂದೆನು
ತವಕದಲಿ ಸುಗ್ರೀವನೆಡೆಗೈತಂದು ಸಖ್ಯವನು ||
ಕವಲುವೋಗದೆ ಮಾಡಿದಾಕ್ಷಣ
ಯುವತಿಯಾಳಿದ ಬಾಲಿಯನು ರಾ
ಘವನ ಕೈಯಲಿ ಕೊಲಿಸಿದನು ಸುಗ್ರೀವನೆಂಬವನು || ೨೬ ||

---

1 ಮುಂ (ಕ)

ಬಳಿಕ ಸುಗ್ರೀವಂಗೆ ಪಟ್ಟವ
ಸಲಿಸಲಾ ಸುಗ್ರೀವ ದಶದೆಸೆ
ಗಳಿಗೆ ನಿಮ್ಮುವನರಸಿ ಕಪಿಗಳ ಕಳುಹುತಿರೆ ನನ್ನ ||
ಬಳಿಗೆ ರಾಘವ ಕರೆದು ಕರದಂ
ಗುಲಿಯು ನಿಜ ಮುದ್ರಿಕೆಯನಿತ್ತನು
ತಿಳಿದು ನನ್ನಯ ಶಕ್ತಿಯನು ನಿಜನಾಮದಂಕಿತವ || ೨೭ ||

ಹನುಮ ಸೀತೆಯನರಸಿ ಪಿಂಗೆ ಕಂ
ಡನುಜ ಸಹ ನಾ ಸುಖದಲಿಹೆನೆಂ
ದನುಸರಿಸಿ ಜಿಜ್ಞಾಸುಗೀ ಮುದ್ರಿಕೆಯನೊಲಿದಿತ್ತು ||
ತನಯ ಬೇಗದಿ ಬಾ ಯೆನಲು ತಂ
ದೆನು ಮಹಾಯತ್ನದಲಿ ಕೊಳ್ಳಾ
ಜನನಿ ನೀನಂಜದಿರೆನುತ್ತಾ ಮುದ್ರಿಕೆಯನಿತ್ತ || ೨೮ ||

ಕೊಟ್ಟು ದೂರದಿ ನಮಿಸಿ ನಿಂದಿರೆ
ಮುಟ್ಟಿಕೊಂಡಳು ಮುದ್ರಿಕೆಯನು
ತೃಷ್ಟ ನಾಮಾಂಕಿತವ ಕಂಡಿರಿಸಿದಳು ಶಿರದಲ್ಲಿ ||
ದೃಷ್ಟಿಯಿಂದಾನಂದ ಜಲವೊಗೆ
ನೆಟ್ಟನೆಂದಳು ರಾಮಚಂದ್ರನ
ಮುಟ್ಟದತಿ ವಿಶ್ವಾಸಿಯಾದತಿಪ್ರಿಯನು ನೀನೆನುತ || ೨೯ ||

ಅಲ್ಲದಿರೆ ಪುರುಷರನು ಧಿಟ ತಾ
ನಿಲ್ಲಿಗಟ್ಟನು ಹನುಮ ನೀನಿದ
ನೆಲ್ಲ ಕಂಡೈ ತನ್ನ ದುಃಖವನಿದನು ರಾಘವಗೆ ||
ಬಲ್ಲ ಪರಿಯಲಿ ತನ್ನೊಳಗೆ ದಯ
ವುಳ್ಳರೆನ್ನೀ ವಾಕ್ಸಹಾಯವ
ಬಲ್ಲಿದನೆ ಬಲುಧರ್ಮ ಕೀರ್ತಿಯ ಮಾಡಿಕೊಳ್ಳೆಂದ || ೩೦ ||

ಎರಡು ಮಾಸದ ಮೇಲೆ ತಿಂಬರು
ದುರುಳ ದಾನವಿಯರು ತದವಧಿಯು
ಪರಿಯೊಳಗೆ ಸುಗ್ರೀವ ಸಹ ಬಂದೀ ದುರಾತ್ಮಕನ ||
ಕೊರಳನರಿದು ಸುಪುತ್ರ ಬಲ ಸಹ
ಧುರದಿ ತನ್ನನು ಬಿಡಿಸ ಹೇಳೀ
ನರಿದೆ ರಾಮನ ವೀರ್ಯ ಶೌರ್ಯವನೆಣಿಸಲಳವಲ್ಲ || ೩೧ ||

ಹಲವು ಹೇಳುವದಿಲ್ಲ ತನ್ನಯ
ನಿಲವ ಕಂಡೆಲೆ ಹನುಮ ರಾಮನ
ಹಲವು ತೆರದಿಂ ಕರೆದು ತಂದೀ ರಾವಣನ ಕೊಂದು ||
ಸಲಹಿಕೊಳ್ಳನೆ ಹನುಮನೆಂದನು
ಅಳಲಬೇಡೌ ಕಂಡೆನೆಲ್ಲವ
ತಳುವದಾಯುಧ ಸಹಿತ ಕರೆತಹೆ ರಾಮಲಕ್ಷ್ಮಣರ || ೩೨ ||

ವಾನರರು ಸುಗ್ರೀವ ಸಹ ಬಂ
ದೀ ನಿಖಿಳ ದೈತ್ಯರನು ಕೊಂದು ಶು
ಭಾನನೇ ನಿಮ್ಮವನು ರಾಘವನೊಯ್ವನೆಂದೆನಲು ||
ವಾನರನೆ ಹೇಳುದಧಿ ಮಧ್ಯಕೆ
ತಾನು ಬಪ್ಪನದೆಂತು ಪಡೆ ಸಹ
ದೀನೆ ನಂಬುವೆನೆಂದೆನಲು ಹನುಮನಿಂತೆಂದ || ೩೩ ||

ಅನಿಬರನು ತಾ ಬೆನ್ನನೇರಿಸಿ
ವನಧಿಯನು ತಾ ಹಾರಿ ಕರೆತ
ಪ್ಪೆನು ಮಹಾಯಸದಿಂದ ಬಂದಿವರೆಲ್ಲರನು ಕೊಂದು ||
ಜನನಿ ನಿಮ್ಮಯ ಸೆರೆಯ ಬಿಡಿಸುವೆ
ನೆನಗನುಜ್ಞೆಯ ಹೋಹೆ ಬೇಗದ
ಲನುಜ ಸಹಿತಿದ್ದಾ ರಘೋತ್ತಮನೆಡೆಗೆ ತಾನೆಂದ || ೩೪ ||

ಅರಿವ ಪರಿಯಲಿ ನಿಂದು ಕಂಡುದ
ಕುದುಪ ರಾಘವಗೀಯಬೇಕೆನೆ
ನೆರೆ ವಿಚಾರಿಸಿ ಸೀತೆ ಕೇಶವ ಕಿವರಿ ಮರುತಜಗೆ ||
ಶಿವದ ಚೂಡಾರತುನವಿತ್ತಳು
ನಿಪಾತ ವಿಶ್ವಾಸಿಸುವನದರಿಂ
ತರುಣ ಕೇಳೊಂದರವೆಭಿಜ್ಞಾ ಯಥಾರ್ಥ ವಚನವನು || ೩೫ ||

ಮುನ್ನ ಗಿರಿಯಲಿ ಚಿತ್ರಕೂಟದ
ಲೆನ್ನ ತೊಡೆಯಲಿ ರಾಮನೊರಗಿರ
ಲನ್ನಗಿಂದಾಶಾವಳಿಯದಿಂದೊಂದು ವಾಯಸನು ||
ನನ್ನ ಪದದುಂಗುಟವ ತುಂಡದಿ
ತಿನ್ನಲೊಮ್ಮಕ್ಕಾಗಿ ಸೀಳಿ
ತ್ತನ್ನ ವರವೇ ರಾಮನೆಂದೆನ್ನುಂಗುಟವ ಕಂಡ || ೩೬ ||

ಏನು ವ್ರಣವಾಯ್ತುಂಗುಟಕ್ಕೆನು
ತಾನತಪ್ರಿಯ ಮುಂದೆ ಕಂಡನು
ತಾನು ವಾಯಸ ತುಂಡ ನಖಗಳು ರಕುತವಾಗಿರಲು ||
ನೀನೆ ಯೆನುತವಗೊಂದು ತೃಣವನು
ತಾನು ಶರವಾಗೆನುತಿರಲಿಕದು
ಹಾನಿಮಾಡಲಿಕವನನಟ್ಟಿಪಡೋಡಿದನು ದಿಸೆಗೆ || ೩೭ ||

ಸಾನುರಾಗದಿ ನಾನುಯಿಟ್ಟಾ
ನೂನ ತೃಶಣರವಟ್ಟಲೋಡಿದ
ನಾನಲಾರದೆ ಹತ್ತು ದಿಕ್ಕನು ತಿರುಗಿ ಯಿಂದ್ರಾದಿ ||
[ ಸ್ಥಾಣುಲೋಕಂಗಳಲಿ ಚರಿಸು
ತ್ತಾ ನಿರಾಸೆಯ ಹೊಂದಿ ಮತ್ತೆ ದ
ಯಾನಿಧಿಯ ಪಾದವನೆ ಸಾರಿದ ರಕ್ಷಿಸೆಂದೆನುತ ] || ೩೮ ||

[ ಅಕ್ಷಯಾತ್ಮಕ ನುಡಿದ ವಾಯಸ
ಪಕ್ಷಿಯೆನ್ನಯ ಶರವು ಹುಸಿಯದು
ಅಕ್ಷಿಯೊಂದನು ಕೊಟ್ಟು ಜೀವವನುಳಿಸಿಕೋ ಯೆಂದ ||]
ಅಕ್ಷಿಯನು ಕೊಟ್ಟೈದಿದನು ಬಳಿ
ಕಕ್ಷಮನೆ ರಘುನಾಥ ತನ್ನಲು
ಪೇಕ್ಷಿಸಿದನೇಕೀಪರಿಯ ಸಾಹಸ ಪರಾಕ್ರಮನು || ೩೯ ||

ಎನಲು ದಾನವ ವೀರಕಿಲ್ಲರ
ಜನನಿ ನಾನೇ ಕೊಲುವೆನೆಂದೆನೆ
ಹನುಮಗೆಂದಳು ಸೂಕ್ಷ್ಮಮದ ಕಪಿಗಂಜುವರೆ ಖಳರು ||
ತನುಜ ಹುಸಿಯೆನೆ ಮೇರು ಮಂದರ
ಘನವಪುವ ತೋರಿದನು ರಾಕ್ಷಸ
ಜನಮಹಾಭೀಷಣದ ಬಳಿಕತಿ ಹರುಷಿಸಿದಳಬಲೆ || ೪೦ ||

ಆಯಿತರಿತೆನು ಬಲವನೀ ರಘು
ರಾಯನಲ್ಲಿಗೆ ಬೇಗ ಹೋಗೀ
ಛಾಯುವಂತನೆ ಮಾರ್ಗದಲಿ ಶುಭವಾಗಲೆಂದೆನಲು ||
ವಾಯುಸುತ ಪದಕೆರಗಿ ಬೀಳ್ಕೊಂ
ಡಾಯತದಿ ನಡೆದಲ್ಪದೂರ ಪ
ರಾಯಕಾರ್ಯದ ದೂತ ನೀತಿಯನಿಂತು ಯೋಚಿಸಿದ || ೪೧ ||

ಒಡೆಯ ಮಾಳ್ಪುದ ಮಾಡಬಾರದು
ನಡೆಯಬಾರದು ಶೌರ್ಯದೋರದೆ
ಜಡದಧಮಮತ್ತರವೊಲರಿಗಳ ದೇಶಹೊಕ್ಕಲ್ಲಿ ||
ನಡೆಯನರಿತವರದುಗುಣದಿ ತಾ
ಕಡುಗಲಿತ್ವವ ತೋರಿ ಕಿಂಚಿತ
ಪಡಿಗ ದಶಗಳನೊಡನೆ ಮಾತಾಡ್ಯೆದಬೇಕೆಂದ || ೪೨ ||

ಎಂದೆನುತ್ತಿರಲಿತಬಲನು ಬಾಲದ
ಲಿಂದು ವನದಲ್ಲಿದ್ದ ವೃಕ್ಷದ
ವೃಂದವೆಲ್ಲವ ಸುತ್ತಿ ಮುರಿ ಮುರಿದಿಳುಹಿದನು ಧರೆಗೆ ||
ಪೊಂದೆ ಸೀತಾಶ್ರಯದ ನಗವನು
ನಿಂದಿರಿಸಿ ಮಿಕ್ಕೆಲ್ಲ ವನವನು
ಹಿಂದುಗಳೆದನು ಮುರಿದು ಪಾದಪ ಶಬ್ದವಿರದಂತೆ || ೪೩ ||

ದುರ್ಜನರ ಹೊಂದಿದ್ದ ಮಾನವ
ಸಜ್ಜನರು ಕೆಡುಗೆಂಬುದರಿದೇ
ನಿರ್ಜರೋಪಮ ವೃಕ್ಷವಳಿದವು ರಾವಣನ ದೆಸೆಯಿಂ ||
ಭರ್ಜಿಸಿದ್ದಾ ವನವ ಕಾಣುತ
ಗರ್ಜಿಸುತ ದಾನವಿಯರೆಂದರು
ಕಜ್ಜವಾರೀ ವನವ ಮುರಿದರು ಸೀತೆ ಹೇಳೆನುತ || ೪೪ ||

ನೀವೆ ಬಲ್ಲಿರಿ ನಿಮ್ಮ ಕುಟಿಲವ
ನಾವು ಬಲ್ಲೆವೆ ದುಃಖಶೋಕದಿ
ಸಾವುತಿರುವೆನು ಯೆನಲು ಕೆಟ್ಟೆವೆನುತ್ತೊರಲುತ್ತೈದಿ ||
ರಾವಣಗೆ ಹೇಳಿದರು ವಾನರ
ನಾವನೋ ವೇಷದಲಿ ಸೀತಾ
ದೇವಿಯನು ಮಾತಾಡಿ ಹೋಗುತ ವನಗಳನು ಮುರಿದ || ೪೫ ||

ಪೊಪ್ಪ ವನವನಗಳಲಿ ವೃಕ್ಷವ
ತಪ್ಪದೆಲ್ಲವ ಮುರಿದು ಸುತ್ತಿ
ದ್ದುಪ್ಪರಿಗೆ ಪ್ರಾಸಾದ ಗೋಪುರವೆಲ್ಲ ಜರುಹಿದನು ||
ಯಿಪ್ಪ ವನಗಾಹಿಗಳ ಕೊಂದನು
ಜಲ್ಪ ಕರದಿಂದೆನಲು ರಾವಣ
ಕ್ಷಿಪ್ರವಿದ್ದನು ಕ್ರೀಡಿಸುವ ನಿಜವನವಳಿಯೆ ಕೇಳಿ || ೪೬ ||

ನಿಯುತ ದನುಜರ ಕಳುಹೆ ಬರೆ ನಿ
ರ್ಭಯದಿ ಕುಳಿತಿರೆ ಹನುಮನಮರಾ
ಲಯಗಿರಿಯ ಪರಿ ಪಿಡಿದು ಲೋಹಸ್ತಂಭದಾಯುಧವ ||
ಭಯಗೊಳಿಪ ರಕ್ತಾಸ್ಯದಿಂ ಲೀ
ಲೆಯಲಿ ಬಾಲವ ಡಾಳಿಸುತ್ತ
ಕ್ಷಯದ ಸುಖದಲಿ ಕಂಡನೈದಿಹ ದಾನವರ ಪಡೆಯ || ೪೭ ||

ಘೋರಬುತ್ತೈತರೆ ಸಿಂಹನಾದದ
ಲರಗುರಿಗಳಸ್ತ್ರೌಘದಲಿ ಮೊಳೆ
ಗರೆವುತಿರೆ ಹನುಮಂತನತಿ ಭೀಕರದಿ ದಾನವರ ||
ಕುರಿಗಳನು ನೆಗೆದಪ್ಪಳಿಸಿದನು
ಕುರುಗಿನನಿಬರ ಲೋಹದಂಡದಿ
ಸುರಾನುಸಿಗಳಾಗರೆದು ಹೋಯಿತು ಸೇನೆ ನಿಮಿಷದಲಿ || ೪೮ ||

ಹೋಯಿತಾ ಪಡೆಯೆನಲು ರಾವಣ
ಬಾಯಲವಡುತ ಕರೆದ ಸೇನಾ
ನಾಯಕರನೈವರನು ಕಳುಹಿದನಖಿಳ ಬಲ ಸಹಿತ ||
ರಾಯ ಹನುಮನ ನೋಡಿ ಮತ್ತರಿ
ರಾಯಗಜಪಂಚಾಸ್ಯ ಮುನ್ನಿನ
ದಾಯಿಗಳ ಬಳಿಗಟ್ಟಿಬಿಟ್ಟನು ಸೇನೆಯನು ಬಡಿದು || ೪೯ ||

ಸೇನೆ ಸಹ ಮುದ್ಗರದಿ ಹೊಡೆದಾ
ದಾನವರನಾ ಹನುಮ ಮೊದಲಾ
ಸ್ಥಾನದಲಿ ಕುಳ್ಳಿರಲು ಮತ್ತೆಯು ಬಾರರೇಯೆನುತ ||
ತಾನಿಹೇನೆನುತಕ್ಷ ರಾವಣ
ಸೂನುವತಿ ಬಲವಂತನೈತರೆ
ನೀನೆಯಕ್ಷಕುಮಾರನೆನುತಂಬರಕೆ ಲಂಘಿಸಿದ || ೫೦ ||

ಅಶೋಕವನ ಸಂಹಾರ



ಹನುಮಂತನಿಂದ ಲಂಕಾದಹನೆ



ಕಡುಗಿ ಲೋಹದ ಮುದ್ಗರದಿ ತಲೆ
ಒಡೆಯಲುಪ್ಪಳಿಸಿದಡೆ ಅಕ್ಷನ
ಪೊಡಲು ಸಂಕ್ಷಯವಾಗಿಹೋಯಿತು ಕೂಡೆ ಬಲ ಸಹಿತ ||
ಮೃಡ ಸಮಾನರಲೇ ಮುಕುಂದನ
ಬಿಡದೆ ನಂಬಿದ ಭೃತ್ಯರವರಲಿ
ತೊಡಕಿ ಬದುಕುವ ವೀರರಿಲ್ಲೆಲೆ ಗಿರಿಜೆ ಕೇಳೆಂದ || ೫೭ ||

ಅಂಜಿರೀ ದೇಹಾಭಿಮಾನದ
ಮಂಜು ಮುಟ್ಟದವರ್ಗಳನು ಪವಿ
ಪಂಜರದಲಾ ರಾಮ ತನ್ನಯ ಭೃತ್ಯವರ್ಗದಲಿ ||
ಕುಂಜರದ ಮೇಲೇರಿ ಬಪ್ಪನ
ನೆಂಜಲಿಸುವುದೆ ನಾಯಿ ನಿತ್ಯ ನಿ
ರಂಜನಾದ್ವಯರಾದ ಮಹಿಮರಿಗಿಲ್ಲ ಭಯವೆಂದ || ೫೮ ||

ಹುಸಿಯಲಾ ಜಗಮಾಯೆ ಮಾಯಾ
ಬೆಸಲದಾದೀ ದೇಹ ಕನಸನು
ಸೊಸೆಯನರಸುವ ಬಂಜೆಯಂತೀ ಭ್ರಾಂತಿಯೆಂದರಿದು ||
ನಸುಬೆದರುವರೆ ವಿಷ್ಣು ಭಕ್ತರು
ಮುಸುಡ ಮುರುಹರು ದುಃಖ ಸುಖಗಳ
ಹಸರವನು ಸಮಗೊಂಡು ನಿರ್ಭಯದಿಂದಲಿಹರೆಂದ || ೫೯ ||

ಅದರೊಳೀ[1] ಹನುಮಂತ ಸಾಕ್ಷಾ
ಚ್ಚಿದು ಘನಾತುಮ ರಾಮ ಕಾರ್ಯ
ಕ್ಕೊದಗಿದಾ ಸ್ಥಿರಜೀವಿ ನೈಷ್ಠಿಕ ಬ್ರಹ್ಮಚರ್ಯದವ ||
ಇದಿರು ತಳ ಮೇಲಾಗು ಹೋಗಿನ
ಬೆದರಿಕೆಯ ಜಂಝಡಗಳಿಲ್ಲದ
ಕದನಗಲಿಗಳ ದೇವಗಿದು ವೈಚಿತ್ರ್ಯವಲ್ಲೆಂದ || ೬೦ ||

---

1 ಳೂ (ಖ)

ನಿತ್ಯಶುದ್ಧ ವಿಬುದ್ಧ ಕೇವಲ
ಸತ್ಯಸಹಜಾಕಾಶ ಚಿನುಮಯ
ವೃತ್ತಿದೂರ ನಿರಾವರಣ ನಿರ್ಮಾಯ ನಿರ್ಮುಕ್ತ ॥
ವಸ್ತುವೇ ರಘುನಾಥನಾತನ
ತತ್ತಕಾಲದ ಲೀಲೆ ಗೈದಿ
ದ್ದುತ್ತಮಗೆ ಭಯವುಂಟೆ ಪರಮಾನಂದಮಯಗೆಂದ ॥ ೫೫ ॥

ಉತ್ತಮ ಶ್ರೀರಾಮಚರಿತದಿ
ವಿಸ್ತರಿಸಿದೀ ಸಂಧಿಗಳು ಮೂ
ವತ್ತರಿಂದೊಂಭತ್ತು ಪದಪಂಚಾಶ ಪಂಚಗಳು ॥
ಚಿತ್ತ ಸಾಕ್ಷಿ ನಿರೀಹ ನಿರ್ಗುಣ
ಪ್ರತ್ಯಯಾದಿಯತೀತ ಕೇವಲ
ವಸ್ತು ಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹ ಸಲಹೆಮ್ಮ ॥ ೫೬ ॥

ಅಂತು ಸಂಧಿ ೩೯ ಕ್ಕೆ ಪದ ೧೮೦೨ ಕ್ಕೆ

ಮಂಗಳ ಮಹಾ ಶ್ರೀ ಶ್ರೀ ಶ್ರೀ



॥ ಶ್ರೀ ರಾಮಚಂದ್ರಾಯ ನಮಃ ॥



# ನಲವತ್ತನೆಯ ಸಂಧಿ

**ಬ್ರಹ್ಮಾಸ್ತ್ರದ ಬಂಧನ, ರಾವಣಗೆ ಉಪದೇಶ, ಲಂಕಾಪುರದಹನ**

ಸೂಚನೆ ॥ ಬ್ರಹ್ಮಪಾಶದಿ ಕಟ್ಟುವಡೆದು
ಬ್ರಹ್ಮ ನಿಷ್ಠ ಕಪೀಂದ್ರನಸುರಗೆ
ಬ್ರಹ್ಮನಿಷ್ಠೆಯ ಹೇಳಿ ಸುಟ್ಟನು ಕೇಳದಡೆ ಪುರವ ॥

ಪದ ॥ ಇಂದ್ರನೀಲದ ಮಕುಟ ಕಾಂತಿಯ
ಚಂದದಿಂದೆಸೆದಿಪ್ಪ ತಿಲಕದ
ಕುಂದು ಕುಟ್ಮಳ[1]ದಿಂದಲೊಪ್ಪುವ[1] ಪಲ್ಲವದ್ಯುತಿಯ ॥
ಚಂದ್ರಕಾಂತದ ಮುಖವಿಳಾಸದ
ಲಂದವಡೆದ ವಿಶಾಲ ಭುಜ ಸೊಬ
ಗಿಂದ ರಂಜಿಪ ರಾಮ ಪದವನು ನೆನೆವೆ ಮನದೊಳಗೆ ॥೧॥

ಕೇಳಿಯಕ್ಷ ಕುಮಾರನಳಿದುದ
ಕಾಳ ರಕ್ಕಸ ಕೋಪದಿಂ ಕ
ಣ್ಣಾಲಿಗಳು ಕಿಡಿಸೂಸೆ ನುಡಿದನು ಯಿಂದ್ರಜಿತನೊಡನೆ ॥
ಕಾಳಗಕೆ ನಾ ಹೋಗಿ ಕೊಲುವೆನು
ಬಾಲನಕ್ಷನ ಕೊಂದ ಕಪಿಯನು
ಶೂಲದೇರಿಸಿಯಲ್ಲದಿದ್ದಡೆ ಕಟ್ಟಿ ತಹೆನೆಂದ ॥ ೨ ॥

---

1 ದಂತ ಪಂಜ್ತಿಯ (ಖ)

ಇಂದ್ರಜಿತ ಮಗುಳೆಂದನೇಕೈ
ತಂದೆ ನೀ ಪರಿಯಂತವಾನಿರೆ
ಕಂದನಳಿದಳಲಿಂಗೆ ನುಡಿದೈ ಮಾಣು ಶೋಕವನು ॥
ತಂದು ಕೊಡುವೆನು ಕಟ್ಟಿಯಾತನ
ನೊಂದು ಕ್ಷಣದೊಳು ಬ್ರಹ್ಮಪಾಶದಿ
ಯೆಂದು ರಥದಲಿ ನಡೆದನನಿತ ಬಲೌಘ ಸಹವಾಗಿ ॥ ೩ ॥

[ ಬರುತಿರುವ ರಾಕ್ಷಸರ ಕರ್ಕಶ
ಗರುಜನೆಯ ಕಲಿ ಹನುಮನಾಲಿಸಿ
ಭರದಲುಕ್ಕಿನ ಲಾಳವಿಂಡಿಗೆ ಸಹಿತ ನಿಂತಿರ್ದ ॥ ]
ಬರಲು ರಕ್ಕಸ ಹನುಮ ನೆಗೆದಂ
ಬರಕೆ ಹ್ವಾದನು ಲೋಹ ದಂಡದಿ
ಕೆದಳಿ ಹೊಡೆದಡೆ ರಥವು ಸಾರಥಿ ತುರಗ ನುಗ್ಗಾಗೆ ॥ ೪ ॥

[ ಕೆರಳಿ ಹನುಮನ ಎದೆಯು ಬಾಲಕೆ
ಶಿರಕೆ ಕೈಕಾಲ್ಗಳಿಗೆ ಪುನರಪಿ
ಶರಗಳನು ತೂರಿದನು ] ದಾನವನನ್ಯ ರಥವೇರಿ ॥
ಭರದಿ ತೊಟ್ಟನು ವರದ ಬೊಮ್ಮನ
ಸರಳಲಾಗನು ಕಟ್ಟಿ ಕಪಿಯನು
ಮರಳಿ ರಾವಣನೆಡೆಗೆ ಹರುಷದಿ ತಂದನಿಂದ್ರಾರಿ ॥ ೫ ॥

ಅರಿಯದಜ್ಞರು ಸಹಿತ ನಾಮಾ
ಕ್ಷರವನಸುದಿನ ಪೇಳಲಘ ಪರಿ
ಹರಿಸಿ ಕೋಟಿ ರವಿಪ್ರಕಾಶದಿ ಮುಕುತಿವಡೆವರೆನೆ ॥
ನಿರುತವಾ ರಾಮನನು ಹೃದಯದ
ಲಿರಿಸಿ ನೆನೆವಾ ಹನುಮಗಿತರೋ
ತ್ತರದ ಪಾಶವದೇನ ಮಾಳ್ಪುದು ಗಿರಿಜೆ ಕೇಳೆಂದ ॥ ೬ ॥

ಕಟ್ಟಿ ಪಾಶದಿ ತರಲು ಕಪಿವರ
ನೆಟ್ಟನಂಜಿದವೋಲು ಬರುತಿರೆ
ಪಟ್ಟಣದ ಜನವೆಲ್ಲ ಹೊಡೆದುದು ಬಂದು ಕೋಪದಲಿ ||
ಮುಷ್ಟಿಗಳಲತಿ ವಜ್ರಕಾಯನ
ಮುಷ್ಟಿಗಳೆ ಮುರಿವಂತೆ ನಿಮಿಷದ
ಕಟ್ಟಲೆಯ ಬ್ರಹ್ಮಾಸ್ತ್ರಪಾಶಕೆ ಸಿಕ್ಕಿದಂತಿರ್ದ || ೭ ||

ಅರಿತು ಕಾರ್ಯವಿಶೇಷ ಗೌರವ
ದಿರವ ಮಾರುತಿ ಬಿಲ್ಲು ರಜ್ಜುಗೆ
ಕೊರಳನೊಪ್ಪಿಸಿಕೊಟ್ಟು ಬಂದನು ರಾಜಸಭೆಗಾಗಿ ||
ಸುರವಿದಾರಣನೆಂದನಿದಿಕೋ
ದುರುಳ ಕಪಿಯನು ತಂದೆ ನಾ ವಿಧಿ
ಶರದಿ ಬಂಧಿಸಿ ಯೆನುತ ರಾವಣನಿದಿರು ನಿಲಿಸಿದನು || ೮ ||

ಮಂತ್ರಿಗಳು ಸಹ ಯೋಚಿಸೀ ಕಪಿ
ಯೆಂತೆಕೀಕ ಪಿಯಲ್ಲ ದನುಜರ
ಕೊಂತವೋ ಯೆನೆ ಮೇಘನಾದನ ನುಡಿಗೆ ರಾವಣನು ||
ಮುಂತೆಯಂಜನಗಿರಿಯ ಪರಿಯಿಹ
ಮಂತ್ರಿಯಾದ ಪ್ರಹಸ್ತಗೆಂದನು
ಯೆಂತು ಬಂದನೊ ವನವನೇತಕೆ ಮುರಿದ ಕೇಳೆಂದ || ೯ ||

ದನುಜರನು ತಾನೇಕೆ ಕೊಂದನೊ
ಯನಿತದನು ಕೇಳೆನೆ ಪ್ರಹಸ್ತನು
ಹನುಮಗೆಂದನು ಹೇಳು ಹೆದರದಿರೆನಗೆಥಾರ್ಥವನು ||
ದನುಜ ಸಭೆಯಲಿ ಸತ್ಯವನೆ ನುಡಿ
ಮನದಲಳುಕದೆ ನಿನ್ನ ಬಿಡಿಸುವೆ
ನಿನಗೊಡೆಯರಾರಿತ್ತ ಕಳುಹಿದರೇನು ಕಾರ್ಯದಲಿ || ೧೦ ||

ಇಂತೆನಲು ಹರುಷದಲಿ ಮೂಜಗ
ದಂತಕಾಸುರನನ್ನು ನೋಡುತ
ಚಿಂತಿಸುತ ಹೃದಯದಲಿ ರಾಮ ಪದಾರವಿಂದವನು ||
ಮುಂತೆ ನುಡಿದನು ರಾಮ ಸಕಲ ಹೃ
ದಂತರಾತ್ಮನು ಷಕಲದೊಡೆಯನ
ನಂತಮನು ತತ್ತ್ವಶ್ಯರಣ ನಾ ವಾಯುಸುತನೆಂದ || ೧೧ ||

ಆ ರಘುಜನಂಗನೆಯನಾಯುಷ
ತೀರಿದವ ನೀ ತಂದೆ ಗಡ ಸ
ತ್ಸಾರದಧ್ವರ ಹವಿಯನಾಯ್ನರಿ ತುಡುಕಿ ತಿಂದಂತೆ ||
ವೀರರಿಬ್ಬರು ಬಂದರರಸುತ
ನಾರಿಯನು ಮಾತಂಗ ಗಿರಿಯಲಿ
ಸೇರಿದನು ಸುಗ್ರೀವ ಸಖಿತನಕಗ್ನಿ ಸಾಕ್ಷಿಯಲಿ || ೧೨ ||

ಒಂದೆ ಶರದಲಿ ರಾಮ ಬಾಲಿಯ
ಕೊಂದು ಸುಗ್ರೀವಂಗೆ ಪಟ್ಟವ
ನೆಂದುವಚಲಿತವಾಗಿ ಸಲಿಸಿದ ಕೋಟಿಕೋಟಿಗಳ ||
ವೃಂದ ಕಪಿನಾಯಕರವನೆ ಸಂ
ಮ್ಮಂಧದವರನಂ ಸೀತೆಯರಸಲು
ನಿಂದು ತಾವು ಪ್ರಹರ್ಷಣಾದ್ರಿಯಲಟ್ಟಿದರು ದಿಸೆಗೆ || ೧೩ ||

ಹತ್ತು ದಿಕ್ಕಿಗೆ ಹೋದರವನಿಯ
ಪುತ್ರಿಯರಸಲಿಕದರೊಳೊಬ್ಬನು
ಭೃತ್ಯನಾಗಿತ್ತೈದಿ ಲಂಕೆಯಲೆಲ್ಲವರಸಿದೆನು ||
ನುತ್ತಶೋಕಾವನೆದಲಾ ಸ
ದ್ವೃತ್ತೆಯನು ನಾ ಕಂಡು ವನವನು
ಕಿತ್ತೆನರ್ಥಿಗೆ ವಾನರರ ಚೇಷ್ಟಾ ಯಥಾರ್ಥದಲಿ || ೧೪ ||

ಅದನು ಕಂಡೀ ದನುಜರೆನ್ನನು
ಸದೆಯೆ ಶಸ್ತ್ರಾಸ್ತ್ರವ ಪಿಡಿದು ಬರೆ
ಮೆದೆಗೆಡಹಿದೆನು ದೇಹವನು ರಕ್ಷಿಸಿಕೊಳಲ್ಕೆಂದು ||
ವೊದಗಿಯೆನ್ನಗ ಮೇಘನಾದನು
ವಿಧಿಯ ಶರಪಾಶದಲಿ ಕಟ್ಟೀ
ಹದಕೆ ತಂದನು ಮುಟ್ಟದೀ ಬಂಧನವು ತನೆಗೆಂದೆ || ೧೫ ||

ಕಟ್ಟುವಡೆವುದು ಬಿಡುವದೆರಡೂ
ನೆಟ್ಟನೀಶ್ವರ ತಂತ್ರ ಸಂಸ್ತುತಿ
ಕಟ್ಟಲೆಯಲಿದು ನಿಯತಿಯಲ್ಲ ವಿಚಾರದಲಿ ನೋಡೆ ||
ಮುಟ್ಟ ಕೇಳು ದಶಾಸ್ಯ ಹಿತದುಪ
ದಿಷ್ಟವನು ಮಾಡುವೆನು ನೀನು
ತ್ರೃಷ್ಟ ಕಮಲಜ ಪುತ್ರ ದ್ವಿಜ ಪೌಲಸ್ತ್ಯ ಸುತನಾಗಿ || ೧೬ ||

ನೀ ಕುಬೇರನ ಬಂಧು ನಿನಗೀ
ಕಾಕುದೇಹಾತ್ಮತ್ವ ಭಾವನ
ವೇಕೆ ರಾಕ್ಷಸನಾದೆ ದೇಹಾಹಂಕೃತಿಯ ಪಿಡಿದು ||
ಸೋಕವೀ ಗುಣ ನಿನಗೆ ದೈತ್ಯ
ಪ್ರಾಕೃತದ ಬಗೆ ದುಃಖ ಸಂತತಿ
ನೂಕಿ ಬಿಡಲಜತೇಯ ನೀನೇ ನಿರ್ವಿಕಾರ ನಿಜ || ೧೭ ||

ನಿದ್ರೆಗೈವಗೆ ಸವುನೆದಿಂದವೆ
ಬದ್ಧ ನಾನಾದುಃಖ ತೋರದ
ಡೆದ್ದ ಬಳಿಕದು ತೋರಲರಿಯದ ವೋಲು ಪ್ರಕೃತಿಯನು ||
ಹೊದ್ದಿ ನಿನಗೀ ದೇಹಭಾವಕೆ
ಬಿದ್ದ ರಾಗದ್ವೇಷ ತೋರುವು
ದದ್ವಯನು ನೀ ನಿಷ್ಕ್ರಿಯನು ನಿನಗಿಲ್ಲರಿತಡೆಂದೆ || ೧೮ ||

ದೇಹವಿಂದ್ರಿಯ ವಾಯು ಮನದ ಸ
ಮೂಹದಭಿಮಾನದಲಿ ಬರಿದೇ
ದೇಹಿಯಾನೆನುತಿರದೆ ಯಿದನೇ ಕಂಡ ತೊಳಲುತಿಹೆ ॥
ದೇಹದೊಳು ನೀನೇನ ಹೊದ್ದದೆ
ಸಾಹಸೂಕ್ಷ್ಮದಲಿಪ್ಪೆ ನಾನಾ
ವ್ಯೂಹದಲಿ ತುಬಿಂದ್ರ್ಗ ಗಗನಕೆ ಲೇಪ ಹೊರದಂತೆ ॥ ೧೯ ॥

ಎನ್ನ ದೇಹೇಂದ್ರಿಯ ಮನವು ತಾ
ನೆನ್ನ ಸಂಬಂಧಿಗಳೆನುತ್ತವ
ನನ್ನು ದಿನ ತದ್ವಿಷಯ ಭಾವದಿ ಸಿಕ್ಕಿ ಬದ್ಧನಹೆ ॥
ಚಿನ್ನುಮಯ ನಾನೇಕನದ್ವಯ
ಭಿನ್ನ ದೇಹೇಂದ್ರಿಯಗಳಿಂ ಸುಖ
ಪೂರ್ಣ ಪರಮಾಕಾಶ ನೀನೆಂದರಿಯೆ ಮುಕುತನಹೆ ॥ ೨೦ ॥

ಶರಿರವಾತ್ಮನೊ ಧರೆಯ ವಿಕೃತವೊ
ನಿರುತ ವಾಯುವೊ ಪ್ರಾಣ ವಿಕೃತಿಯೊ
ಮರುಳಮನವೋ ಹಮ್ಮಿನಾಡಂಬರದ ವಿಕೃತಿ ಕಣಾ ॥
ಹೊರೆದ ಬುದ್ಧಿಯೊ ಪ್ರಕೃತ ಸಂಭವ
ನೆರವಿದಲ್ಲವದಲ್ಲದಿದ್ದಡೆ
ಭರದಿ ನಿದ್ರೆಯಲೇತಕೊಂದೂ ತೋರದಿಹವೆಂದ ॥ ೨೧ ॥

ಇದು ಕಣಾ ವಿಜ್ಞಾನವಿದನರಿ
ದಿದರ ಹಮ್ಮನು ಮರೆದು ಭೇದವ
ನೊಡೆದು ಸಾಕ್ಷಿತ್ವದಲಿ ಕಳಿವುದು ಪ್ರಾರಬುಧತನವ ॥
ಆದರಿನಿಂ ನಿರ್ಮುಕ್ತ ನೀನಹೆ
ಯಿದನರಿದು ವಿಜ್ಞಾನ ಮೋಕ್ಷ
ಭ್ಯುದಯವಿನ್ನೊಂದುಂಟು ಸಾಕ್ಷಾದ್ವಿಷ್ಣುಪದ ಭಕುತಿ ॥ ೨೨ ॥

ಎಲೆ ಮಹಾಮತಿ ಕೇಳು ಹರಿಪದ
ನಳಿನ ಭಕುತಿ ಮಹಾತ್ಮಗಲ್ಲದೆ
ಸುಲಭವಹುದೇ ಯಕೃತ ಪುಣ್ಯರಿಗಲ್ಪಮತಿಗಳಿಗೆ ||
ನಳಿನನಾಭನ ಭಕ್ತಿರಸದಲಿ
ದೊಳೆದಡಂತರ್ಮಲವನಾ ತನು
ಬೆಳಗುವನು ವಿಜ್ಞಾನ ರೂಪದಲೆಂದನಾ ಹನುಮ || ೨೩ ||

ಭಕ್ತಿ ಜನಿಸಿದವಂಗೆ ವಿಷಯ ವಿ
ರಕ್ತಿಯಹುದಾ ವಿಷಯವಳಿದಡೆ
ತತ್ವಚಿಂತಾ ವಿಷಯವಹುದಾ ತತ್ವಚಿಂತೆಯಲಿ ||
ಮತ್ತಸಾದೀ ಪ್ರಕೃತಿಯಳಿವುದು
ಭಿತ್ತರ ಪ್ರಕೃತಿಯು ಲಯದಿ [1]ತಾ[1]
ಮುಕ್ತನಹನೆಲ್ಲವಕೆ ಭಕುತಿಯೆ ಮುಖ್ಯಪಥವೆಂದ || ೨೪ ||

ಪತ್ರಪುಷ್ಪೋದಕವ ಮಾತ್ರವ
ನಿತ್ತಡೊಂದೇ ಮನದಿ ಭಕುತರಿ
ಗುತ್ತಮೋತ್ತಮ ಪದವನೀಯನೆ ನೀನದರಿನಿಂದ ||
ಸ್ವಸ್ಥ ಚಿತ್ತದಲಾದಿ ಪೂರುಷ
ವಸ್ತು ರಾಮನ ನಿರ್ವಿಕಾರನ
ಕೃತ್ತಿವಾಸನ ಪ್ರಿಯಸಸೇ ಮರೆವೊಕ್ಕು ಮತಿಸಿಂದ || ೨೫ ||

ಬಿಡು ಮನದ ಮೂರ್ಖವನು ರಾಮನ
ಲೊಡರಿಸದಿರೂ ಶತ್ರುಭಾವವ
ತಡೆಯದೇ ಭಜಿಸೈ ಮಹಾಶರಣಾಶತಪ್ರಿಯನ ||
ಪೊಡವಿಜೆಯನೊಲಿದಿತ್ತು ನಿನ್ನಯ
ಮಡದಿ ಮಕ್ಕಳು ಬಾಂಧವರು ಸಹಿ
ತಡಿಗೆರಗಲನು ಕಾವನಾಶ್ರಿತಜಂಘ ನಿನ್ನವನು || ೨೬ ||

---

1 ನಾ (ಖ)

ದೇವ ರಾಮು ಪರಾತ್ಮನೆಂಬೀ
ಭಾವವರಿಯದೆ ನಿತ್ಯ ಹೃದಯದ
ಲಾವಗಂ ಬೆಳಗುವ ಚಿದಾತ್ಮನ ಭಜಿಸದಿಪ್ಪವನು ||
ಆವ ಕಾಲಕು ದುಃಖಭಯಗಳ
ಪಾವನಾಕ್ರಾನ್ವಿತ ಭವಾಬ್ಧಿಯ
ನಾ ವಿಮೂಢನು ದಾಂಟಲರಿಯನು ದನುಜ ಕೇಳೆಂದ || ೨೭ ||

ನೀನು ರಾಮನ ಭಜಿಸಲಜ್ಞಾ
ನಾನು ವಹ್ನಿಯಲೊ[1]ಳ[1]ಗುದಿವುತವೆ
ನೀ ನನಗೆ ಹಗೆಯಾಗಿಯಾತ್ಮ ಹಿತಾರ್ಥವನೆ ಬಿಟ್ಟು ||
ನಾನವಿಧ ಪಾತಕದ ದೆಸೆಯಿಂ
ಹೀನನಾಗಿಯೆ ಕೆಳಗೆ ಬೀಳುವೆ
ದೀನತನ ಬೇಡಕಟ ರಾಮನ ಭಜಿಸು ನೀನೆಂದ || ೨೮ ||

ಈ ಪರಿಯಲಮೃತೋಪಮೋಕ್ತಿಯ
ನಾ ಕಪೀಶ್ವರ ಪೇಳೆ ಕೇಳುತ
ಪಾಪಿ ರಾವಣ ರೋಷ ಪಾವಕ ತಪ್ತ ನೇತ್ರದಲಿ ||
ಕೋಪದಿಂದಿಂತೆಂದನೆಲವೋ
ವೈಪರೀತ್ಯದಿ ಗೆಡವೆ ಬೆದರದೆ
ಚಾಪಲಿತ ಮರ್ಕಟ ನಿಕಾಯಕೆ ರಾಮ ನೀನೆಂದ || ೨೯ ||

ಎಲ್ಲಿಯವನಾ ರಾಮನೆಂಬವ
ನೆಲ್ಲಿಯೂ ಸುಗ್ರೀವ ಗಡ ಕಪಿ
ಕೊಲ್ಲನೇ ನಿನ್ನುವನು ಲಕ್ಷ್ಮಣ ಸೀತೆಯನು ಸಹಿತ ||
ಎಲ್ಲ ಕಪಿಗಳ ಸಹಿತನುಳುಹೆನೆ
ನಿಲ್ಲದೈತರೆ ನಿಮಿಷ ಮಾತ್ರದಿ
ಜಳ್ಳುಗಳನೆಂದನುತ ಧಟ್ಟಿಸಿ ನುಡಿದ ದಶಕಂಠ || ೩೦ ||

---

1 ದ (ಖ)

ನೆಟ್ಟನದ ಕೇಳುತ್ತ ಮಾರುತಿ
ಮುಟ್ಟುರುಹುವಂದದಲಿ ನೋಡುತ
ದುಷ್ಟ ಬಗುಳುವೆ ರಾವಣಾಧಮ ಕೋಟಿ ಕೋಟಿಗಳ ||
ಮೆಟ್ಟಿ ಕೊಲ್ಲೆನೆ ರಾಮ ಶರಣರು
ಥಿಟ್ಟರರಿಯಾ ಮೂರು ಲೋಕದಿ
ತುಟ್ಟಿ ಸಾಹಡೆ ತನ್ನನೆಂದನು ವೀರ ಹನುಮಂತ || ೩೧ ||

ತೊಂಡ ರಾವಣ ಕೇಳಿಯದ ಖಳ
ದಂಡಿಯುಲ್ಲೊಬ್ಬಂಗೆ ನುಡಿದನು
ಖಂಡಖಂಡವ ಮಾಡು ಕಪಿಯನು ನೋಡರೆಲ್ಲರೆನೆ ||
ಪಂಡಿತನು ವಿಭಿಷಣನು ನುಡಿದನು
ಖಂಡೆಯದ ಕೈಯೊಡನೆ ಸೆಳೆದುದ
ಕಂಡುದುಂಟೇ ಬಂದ ದೂತನ ಕೊಲಲು ಬೇಡೆಂದೆ || ೩೨ ||

ಬಂದ ದೂತನ ಕೊಂದಡಾರೈ
ಮುಂದೆ ರಾಮಗೆ ಹೇಳುವರು ವದ
ರಿಂದವನ ನೆರೆ ಮಾನಭಂಗವ ಮಾಡಿ ಬಿಡೆ ಬಳಿಕ ||
ಬಂದವನು ಸುಗ್ರೀವ ಸಹಿತರ
ವಿಂದ ಲೋಚನ ರಾಮನಾ ಮೇ
ಲೆಂದ ಪರಿಯಲಿ ಯುದ್ಧ ಮುಖದಲಿ ಕೊಲ್ಲಬಹುದೆಂದು || ೩೩ ||

ಆ ವಿಭೀಷಣನೆಂದ ಮಾತಿಗೆ
ರಾವಣನು ದಾನವರಿಗೆಂದನು
ಜೀವಭಂಗಕೆ ಮಿಗಿಲು ಬಾಲದ ಭಂಗ ಕಪಿಗಳಿಗೆ ||
ನೀವು ವಸ್ತ್ರಾದಿಯಲಿ ಬಾಲವ
ತೀವಿ ಕಟ್ಟುದು ಸುಟ್ಟುಬಿಡಿ ತ
ವ್ಮೊ ವಠಾರದಲೆಲ್ಲರೀಕ್ಷಿಸುವಂತೆ ತಿರುಗಿಸುತ || ೩೪ ||

ಎಂದಡಾಗಲೆನುತ್ತ ದನುಜರು
ತಂದು ಶಣಬಟ್ಟೆಯುದ ವಸ್ತ್ರದ
ವೃಂದಗಳ ದಿಂಡಿಂದ ಬಾಲವನೆಲ್ಲವನು ಸುತ್ತಿ ॥
ತಂದು ತಂದೆಲ್ಲವರು ತೈಲಗ
ಳಿಂದ ತೋಯಿಸಿ ಸುತ್ತಿ ಸುತ್ತಿಯು
ಮಂದಿ ಬಳಲಿಕೆ ಕೊಡಕೊಡಂಗಳೆಣ್ಣೆಗಳ ಹೊಯ್ದು ॥ ೩೫ ॥

ಕಟ್ಟಿ ದೃಢತರವಾಗಿ ಬಾಲವ
ಮುಟ್ಟಿಸಿದರಾ ತುದಿಗೆ ದೀಪವ
ದುಷ್ಟರೆಲ್ಲರು ಪಿಡಿದು ಹಗ್ಗದಿ ಕೇರಿಕೇರಿಯಲಿ ॥
ಮುಟ್ಟಿ ಯೆಳೆವುತ ಬೊಬ್ಬಿಡುತ ಕೈಲು
ಲಿಟ್ಟು ಚೋರನು ಚೋರನೊ ಯೆಂ
ದಟ್ಟಿಯಾಡುತ ವೀರದೈತ್ಯೇಶ್ವರರು ತಿರುಗಿದರು ॥ ೩೬ ॥

ಬಾರಿಸುತ್ತ ಗಣಿತದ ತೂರ್ಯವ
ವೀರರಬ್ಬರಿಸುತ್ತ ಹೊಡೆವುತ
ಬಾರಿಸುತ್ತಲು ತಿರುಗಿ ಬರೆಬರೆ ಹನುಮ ಕಂಚಿತವ ॥
ದೂರ ಬಂದಾ ಪಡುವ ಕಡೆಯು
ದ್ವಾರ ದೇಶದಿ ಸೂಕ್ಷ್ಮರೂಪಿಂ
ದೋರಿ ಹಗ್ಗವ ಕಳಚಿ ಪರ್ವತಶಕ್ಯತೊಡನೆ ಬೆಳೆವ ॥ ೩೭ ॥

ಲಂಘಿಸಿದನಾ ಗೋಪುರದ ತುದಿ
ಗಂಘವಿಸಿ ಕಿತ್ತಂದು ಕಂಬವ
ಮುಂಗುಡಿಯು ತದ್ರಕ್ಷಕರ ಹೊಡೆಹೊಡೆದು ಮಡಹುತ್ತ ॥
ಮಂಗಳದ ದೀಪವನು ಮಾಳ್ಪನು
ಸಿಂಗರದ ಲಂಕೆಯನೆನುತ್ತಾ
ತುಂಗ ವೀರರ ದೇವ ಬಾಲವ ಸುತ್ತ ಬೀಸಿದನು ॥ ೩೮ ॥

ಹಾರಿ ಹಾರಲ್ಲಲ್ಲಿ ಬೆಂಕಿಯ
ಬೀರಿದನಖಟ್ವಪ್ರಸಾದದಿ
ತೋರಣಟ್ಟಾಲದಲಿ ಸುತ್ತಲು ಕೇರಿ ಕೇರಿಯಲಿ ||
ಘಾರು ಘಾರೆನೆ ವಹ್ನಿಯುಬ್ಬಟಿ
ಮೇರೆಯಿಲ್ಲದೆ ಛಟ ಛಟ ಧ್ವನಿ
ಭೋರನುರುಹಿತ್ತಾ ಮಹಾದಾನವರ ಪುರವರವ || ೩೯ ||

ತಾತ ಹಾ ಹಾ ತರುಣ ಹಾ ಹಾ
ಭ್ರಾತ ಹಾ ಹಾ ಮಗನೆ ಹಾ ಹಾ
ಮಾತೆ ಹಾ ಹಾ ಕೆಟ್ಟೆಕೆಟ್ಟೆವು ಕಿಚ್ಚು ಬಲುಗಿಚ್ಚು ||
ಮಾತಿಗವಸರವಿಲ್ಲ ಮರೆಯೋ
ಸೀತೆಯನು ಖಳ ತಂದು ನಮ್ಮನು
ಬೂತುಮಾಡಿದನಕಟಕಟ ಯೆಂದುದು ಖಳವ್ರಾತ || ೪೦ ||

ಸುತ್ತ ಕಟ್ಟಿತು ಕಿಚ್ಚು ಮಾರ್ಗವ
ನೆತ್ತಲೋಡಲು ತೆರಪುಗಾಣದೆ
ಹತ್ತಿದರು ಪ್ರಾಸಾದ ಶಿಖರದ ಮೇಲೆ ನಾರಿಯರು ||
ಉತ್ತಮಾಗ್ನಿಯು ದೇವತೆಗಳೆನೆ
ಮತ್ತೆ ನೋಳ್ಪರ ಕಂಗೆಸೆದರುರಿ
ಹತ್ತಿ ಹೊಡಕರಿಸಿದುದು ಪಾವಕಗೃಹದ ಮಧ್ಯದಲಿ || ೪೧ ||

ಲಂಕೆಯೊಳಗಣ ಮನೆಗಳೆಲ್ಲವ
ಬೆಂಕಿಯನು ಮಾಡಿದನು ರಾಮನ
ಕಿಂಕರನು ತಾ ಬಿಟ್ಟನೊಂದೇ ವಿಭಿಷಣನ ಮನೆಯ ||
ಶಂಕರಾರ್ಪಣವೆಂದು ಮಿಕ್ಕುದ
ಭೋಂಕನಬ್ಧಿಯಲದ್ದಿ ಬಾಲಕೆ
ಸೋಂಕದಂದದಿ ನಸುಡಗೆಯ ಸಹ ಕೊಳೆದನಾ ಹನುಮ || ೪೨ ||

ಸೀತೆಯತ್ತಲು ಬೇಡಿಕೊಂಡಳು
ವಾತಸಖನಲಿ ವಹ್ನಿ ಹನುಮಗೆ
ಘಾತಿಸದಿರೈ ಥಗೆಯ ಬಾಲಕೆ ನಿನ್ನ ಪ್ರಿಯಸುತಗೆ ||
ಶೀತರವು ಬಾಲಕ್ಕೆ ಶೈತ್ಯವ
ನಾತಿರ ಲಿಯೆನೆ ಯವಳ ಹರಕೆಯು
ಕೌತುಕವನೇನೆಂಬೆ ಹನುಮನ ಪುಚ್ಛ ಸುಡಲಿಲ್ಲ || ೪೩ ||

ಮರೆದು ರಾಮನ ನಾಮುವನು ಬೇ
ಸರಿನಲೆಂದಡು ಪಾಪ ಶಂಕಾ
ಸೆರಗು ಸೋಂಕದೆ ನಂದುವುದು ತಾಪತ್ರಯಾಗ್ನಿ ಯೆನೆ ||
ನೆರೆ ರಘೊತ್ತಮನಾತ್ಮದೂತನ
ಹೊರಗಣಿಂ ಪ್ರಾಕೃತದನಲ ಡಗೆ
ಯುರುಬೆ ಸೋಂಕುವುದುಂಟೆ ವರ ಹನುಮಂತ ದೇವನಲಿ || ೪೪ ||

ಇದು ಗಣನೆಯಲಿ ಸಂಧಿ ನಾಲ್ಕ
ತ್ತೊದಪಿದೀ ಪದನಿಕರ ರುದ್ರರು
ಸಪಮಲ ಶ್ರೀ ವೇದರೂಪಿಗಳಾದ ತೆರನಂತೆ ||
ಮುದದಿ ಲಾಲಿಸಿ ಕೇಳಲಮುಳಾ
ಭ್ಯುದಯ ಸಿದ್ಧಿಯನಿತ್ತು ಕಾರು
ಣ್ಯದಲಿ ಗುರು ನಿತ್ಯಾತ್ಮ ಲಕ್ಷ್ಮೀನೃಸಿಂಹ ಸಲಹುಹನು || ೪೫ ||

ಅಂತು ಸಂಧಿ ೪೦ ಕ್ಕೆ ಪದ ೧೮೪೭ ಕ್ಕೆ
ಮಂಗಳ ಮಹಾ ಶ್ರೀ ಶ್ರೀ ಶ್ರೀ



|| ಶ್ರೀ ರಾಮಚಂದ್ರಾಯ ನಮಃ ||



# ನಲವತ್ತೊಂದನೆಯ ಸಂಧಿ

## ರಾಮನ ಬಳಿಗೆ ಹೋಗಿ ಸೀತಾ ವೃತ್ತಾಂತ ತಿಳಿಸಿದ್ದು

ಸೂಚನೆ || ರಾಯ ಕಪಿಕುಲ ಮೌಳಿ ಮಣಿ ದೈ
ತ್ಯೇಯವನದಾವಾಗ್ನಿ ರಾಮನ
ಜಾಯೆಯನು ಕಂಡೈದಿ ಮಗುಳಿರುಹಿದನು ಸಂಗತಿಯು ||

ಪದ || ಶುದ್ಧ ಬುದ್ಧ ನಿರಂಜನದ್ವಯ
ಹೃದ್ಯತಮ ಹರ ಸಚ್ಚಿದಾತ್ಮಕ
ಅದ್ವಯಿತ ಪರಬ್ರಹ್ಮನೆನಿಸಿದ ಚಿದ್ವಿಲಾಸದಲಿ ||
ಹೊದ್ದಿ ಹೊದ್ದದೆ ಯಿದ್ದು ಬೆಳಗುವ
ಶುದ್ಧ ಪರಮಾನಂದನೆನಿಸುವ
ಅದ್ವಯಾತ್ಮಕ ರಾಮ ಪಾದವ ನೆನೆವೆ ಮನದೊಳಗೆ ||೧||

ಕೇಳು ಪಾರ್ವತಿ ಸುಟ್ಟು ಲಂಕೆಯ
ಬಾಲವನು ತೊಳೆದಬ್ಧಿಯಲಿ ಹೀ
ಹಾಳಿ ಮಿಗಿಲೈತಂದು ಸೀತೆಗೆ ಮರುಗಿ ಮರುತಜನು ||
ಪಾಲಿಸೆನಗಪ್ಪಣೆಯ ರಾಮಗೆ
ಹೇಳಿ ವೃತ್ತಾಂತವನು ಕರತಹೆ
ನಾಳೆ ತಡೆಯದೆ ಯೆಂದು ಬಲಬಂದಿದಿರು ನಿಂದಿರ್ದ ||೨||

ತಡವು ಮಾಡದೆ ಹೋಗಿ ರಾಘವ
ನಡಿಗಳನು ನಾ ಕಂಡು ಬೇಗದಿ
ಪಡೆಸಹಿತ ಸುಗ್ರೀವ ಲಕ್ಷ್ಮಣ ರಾಮರೊಡಗೊಂಡು ||
ದಡಿಗರನು ಕೊಲೆ ಕರೆದು ತಹೆನೆನೆ
ನುಡಿದಳತಿದುಃಖದಲಿ ತನಗಾ
ವೊಡೆಯ ರಾಮನ ವಾರ್ತೆಯರಿಯದಡೆಂತುಳಿವೆನೆನುತ || ೩ ||

ಆದಡೆನ್ನ ಸ್ಕಂಧವೇರಿಸಿ
ದಿಹಾ ದಯ್ಯಾಸ್ಥಿಯೆಡೆಗೆ ದ್ಧಾಂಟಿ ಮ
ಹೋದಧಿಯನರೆನಿಮಿಷಕೊಯ್ವೆನು ನಿಮ್ಮನೆಂದೆನಲು ||
ಆ ಧರಣಿಸುತೆ ನುಡಿದಳಬ್ಧಿಯ
ನೇದುವನೊ ಶರಪಂಜರದಿ ತಾ
ಹಾದಿಗಡಿಯೋ ಬಹನೊ ರಾಘವನಾರರಿವರೆನುತ || ೪ ||

ಬಪ್ಪರೋ ವಾನರರು ಸಹಿತಾ
ನೇ ಪ್ರಯತ್ನದಿ ರಾವಣನ ಕೊಂ
ದುಪ್ಪರದ ಕೀರ್ತಿಯನಿರಿಸಿ ಧರೆಗೆನ್ನನೊಯ್ದಪರೊ ||
ಕ್ಷಿಪ್ರದಲಿನೀ ಹೋಗು ಬಪ್ಪ
ನ್ನಿಪ್ಪೆ ನಾನೀ ಪ್ರಾಣ ಮಾತ್ರವ
ನೊಪ್ಪ ಯೆನ್ನಯ ಜೀವ ನಿನ್ನದೆನುತ್ತ ಕಳುಹಿದಳು || ೫ ||

ಬೀಳುಗೊಂಡಾ ಹನುಮ ನೆಗೆದನು
ಮೇಲೆ ಪರ್ವತದಗ್ರಕಾಕ್ಷಣ
ಲೀಲೆಯಿಂ ಶರಧಿಯನು ಲಂಘಿಸೆ ಚರಣ ತಳದಿಂದ ||
ತೂಳಿದನು ಲಂಘಿಸುವ ಭರದಲಿ
ಮೇಲುಗಿರಿ ಮೂವತ್ತು ಯೋಜನ
ಕಾಲಹತಿಯಿಂದವನಿತಳ ಸಮನಾಗಿ ತಗ್ಗಿದುದು || ೬ ||

ಗಗನ ಮಾರ್ಗದಿ ವಾಯು ವೇಗದಿ
ನೆಗೆದು ಬರುತಿರೆ ಕೇಳಿ ಶಬುದದ
ಬಗೆಯನುನ್ನತ ವೀರ್ಯಶೌರ್ಯ ಪರಾಕ್ರಮುವನರಿದು ||
ಸಿಗದೆಯಿಂದವೆ ಸೀತೆಯನು ಕಂ
ಡೊಗುಮಿಗೆಯ ಹರ್ಷದಲಿ ಬಹನೆಂ
ದಗಣಿತದ ಕಪಿವರರು ತಿಳಿದರು ಶಬ್ದ ಭೇದದಲಿ || ೭ ||

ಎನುತ ತಮ್ಮೊಳು ಯೋಚಿಸುತ್ತಿರ
ನನಿಲಸುತ ನನ್ನವರ ಬಂದನು
ಘನತರದ ಮಲಯಾದ್ರಿ ಶಿಖರದಲಿಳಿದು ಹರ್ಷದಲಿ ||
ಜನಕಸುತೆಯನು ಕಂಡು ಲಂಕೆಯ
ವನವನೆಲ್ಲವ ಮುರಿದು ರಾವಣ
ನನು ನುಡಿಸಿ ಪಟ್ಟಣವ ಸುಟ್ಟೈತಂಡೆ ನಾನೆಂದ || ೮ ||

ಆಗಲಂತಿರೆ ನಾವದೆಲ್ಲರು
ರಾಘವಗೆ ಸುಗ್ರೀವರಿಂಗೆಯು
ಹೋಗಿ ಹೇಳುವ ಯೆಂದು ಮರುತಜ ನುಡಿಯೆ ಹರ್ಷದಲಿ ||
ಆಗರುವನೆಂದುದಕೆ ಕಪಿಗಳು
ಬೇಗತವತವಗಪ್ಪಿದರು ಕೆಲ
ರಾಗ ಬಾಲವ ಚುಂಬಿಸಿದರಾ ಕೆಲರು ನೋಡಿದರು || ೯ ||

ಎಲ್ಲರೂ ಬೇರ್ಬೇರೆ ಹನುಮನ
ನುಲ್ಲಸಿತ ಹರ್ಷದಲಿ ಹೊಗಳುತ
ನಿಲ್ಲದಾಕ್ಷಣ ದೈದಿದರು ಪ್ರವರ್ಷಣದ ಪರ್ವತಕೆ ||
ಅಲ್ಲಿ ಬರುತಿರೆ ವನವ ಕಂಡರು
ಸಲ್ಲಲಿತ ಫಲಪಕ್ವ ಭರಿತದ
ಲುಳ್ಳ ವನ ಮಧುರಾಮ್ರವನು ಸುಗ್ರೀವ ರಕ್ಷಿತವ || ೧೦ ||

ಕಂಡು ಸುಮನೋಹರದ ವನವದ
ನಂಡಲದವಂಗದನ ಕಪಿಗಳ
ಹಿಂಡು ಮಲವರ ಗಂಡ ಚಿತ್ತವಿಸೀ ಮಹಾವನವ ||
ಚಂಡ ತರು ಫಲ ಪಕ್ವ ಮಧುಗಳ
ನುಂಡುಹೋಹೆವು ಹಸಿದೆವೆಲ್ಲರು
ಪುಂಡರೀಕಾಕ್ಷನನು ಕಾಂಬೆವು ಹರುಷದಲಿ ಬಳಿಕ || ೧೧ ||

ಅಪ್ಪಣೆಯು ತನಗೀಯಬೇಕೆನೆ
ಲೊಪ್ಪಿಯಂಗದನೆಂದನಾಗಲಿ
ಕ್ಷಿಪ್ರವೆಲ್ಲರು ಹೊಕ್ಕು ಭುಂಜಿಸುವರು ಯಥೇಷ್ಟವನು ||
ಸುಪ್ರಯೋಜನ ಮುಖರು ಹನುಮ ಕೃ
ತಪ್ರಯೋಜನದಿಂದಲೆಂದೆನೆ
ಕಪ್ಪಗರಿವುತ ಕಪಿಗಳುಂಡುದು ಸೂರೆಯಲಿ ವನವ || ೧೨ ||

ತೆರಿತೆರಿದು ಗೊಂಚಲಿನ ಪಣ್ಣನು
ತೆರಿತೆರಿದು ಬಾಯೊಳಗೆ ತುಂಬುತ
ತುರುತುರುಗಿ ಸೇರಿಸುತ ಗೋರೆಗೆ ಬಧಿಯ ಕರದಿಂದ ||
ತ್ವರುತುರಿಸಿ ವನಗಾಹಿನವರಿಗೆ
ಹರಿಹರಿದು ಶಪ್ಪವನು ತೋರುತ
ತರತರಿಸಿ ಗಿಲಿಗಿಲಿಸುತಿದ್ದರು ಮಾಣಿ ಮರ್ಕಟರು || ೧೩ ||

ರಕ್ಷಕರ ಚರಣದಲಿ ಮುಷ್ಟಿಯು
ಲಿಕ್ಕಿದರು ನೊಡನೊಡದು ದಧಿಮುಖ
ನಿಕ್ಕಿದಾ ದೂತರನು ಮಧುವನು ಸುರಿದು ಚೆಲ್ಲುತಿರೆ ||
ಅಕ್ಕಟಕ್ಕಟೆನುತ್ತ ಹೋದನು
ಧಿಕ್ಕರಿಸಿ ಸುಗ್ರೀವನಲ್ಲಿಗೆ
ಬಿಕ್ಕತೆಂದನು ಹದನ ದಧಿಮುಖ ಖಿನ್ನಮುಖನಾಗಿ || ೧೪ ||

ಹಿರಿದು ಕಾಲವು ಕಾಯ್ದು ವನವಿಂ
ದೆರಡು ಹೋಯಿತು ಸೂರೆಯಿಂದವೆ
ಮರುತಸುತರಂಗದರ ನೇಮದಿ ಕಪಿಗಳುಂಡವೆನೆ ||
ಹರುಷದಲಿ ದಧಿಮುಖನ ಮಾತಿಗೆ
ನಿರುವ ಸೀತೆಯ ಕಂಡುಬಂದರು
ಪರಮ ಸಂತೋಷದಲಿದಕೆ ಸಂದೇಹವಿಲ್ಲೆಂದ || ೧೫ ||

ಅಲ್ಲದಡೆ ಮಧುವನದ ಪಣ್ಣನು
ಚಲ್ಲಿದವ ತಾನಾರು ಧಿಟ ಮ
ತ್ತಲ್ಲಿಯೂ ಹನುಮಂತ ಕಾರ್ಯವ ಸಾಗಿಸಿರಬೇಕು ||
ಬಲ್ಲೆನೆನುತಿರೆ ರಾಮನೆಂದೆನೆ
ದೆಲ್ಲಿಯದು ಮತ್ಸತಿಯ ವಾರ್ತೆಯ
ಸೊಲ್ಲಿನಂದೀ ನುಡಿದೆ ಯೆನೆ ಸುಗ್ರೀವನಿಂತೆಂದ || ೧೬ ||

ಜೀಯ ಸೀತೆಯ ಕಂಡುಬಂದರು
ರಾಮನನುಪಸ್ರಮುಖರೆನ್ನಯ
ರಾಯದೂನವನು ಸೂರೆಗೊಂಬರು ಕಂಡ ಸ್ವೇಚ್ಛೆಯಲಿ ||
ರಾಯ ಕಾರ್ಯವ ಸಾ[1]ಧಿ[1]ಸದೆ ಧಿಟ
ಹಾಯಲಾಪರೆ ವನಕೆ ನೋಡರು
ವಾಯದಲಿ ಮಧುವನಕೆ ಬಂದರು ಕಂಡು ಜಾನಕಿಯ || ೧೭ ||

ಎನುತ ವನರಕ್ಷಕರ ಭಯ ಬೇ
ಡೆನುತ ಕಳುಹಿದನಿತ್ತಲಂಗದ
ಹನುಮರೆಂದರು ಕಪಿಗಳಿದ ಸಾಕೇಳಿ ತಡವಾಯ್ತು ||
ದನುಜ ಮರ್ದನ ರಾಮ ಲಕ್ಷ್ಮಣ
ರನುಪಮರು ಸುಗ್ರೀವ ನಮ್ಮನು
ನೆನೆದು ಹಾರುತ್ತಿಹರು ಹೋಗುವ ನಾವು ಬೇಗೆಂದ || ೧೮ ||

---

1 ೧ (ಖ)

ಹೊಟ್ಟೆ ತುಂಬಿತ್ತೆಲೆ ನಿಮಗೆ ಸಂ
ತುಷ್ಟಿಯಿಂ ಬೇಗೈದಿರೆಂದೆನೆ
ಲಷ್ಟರಿಂದಿಂತಹುದೆನುತ್ತೆಲ್ಲರು ವಿಹಾಯಸದಿ ||
ಮುಟ್ಟೆ ಹಾರಿ ಮರುತ್ಸುತನ ಮುಂ
ದಿಟ್ಟುಕೊಂಡಂಗದಮುಖರು ಬೇ
ಗಿಟ್ಟೆಳಸಿ ಧರಣಿಯಲಿ ನಿಂತರು ರಾಮನಿದಿರಿನಲಿ || ೧೯ ||

ಆ ಮಹಾಪಡೆ ಸಹಿತ ಮುಂದಾ
ರಾಮ ಸುಗ್ರೀವಾಂಕನಿದಿರಲಿ
ನೇಮದಿಂ ಸಾಷ್ಟಾಂಗ ಸನ್ನುತಿಯಿಂದೆರಗಿ ನಿಂದು ||
ಆ ಮರುತ್ಸುತನೆಂದ ಕಂಡೆನು
ಭೂಮಿಸುತೆಯನು ನಿಮ್ಮ ಕುಶಲ
ಕ್ಷೇಮವನು ಕೇಳಿದಳು ಸಾಕ್ಷಾತ್ಪೂರ್ಣ ಶಶಿವದನೆ || ೨೦ ||

ಕಂಡು ಬಂದೆನು ಲಂಕೆಯಲಿ ತರು
ಷಂಡವೆಸೆವಾಶೋಕವನದಲಿ
ಪುಂಡರೀಕದಳಾಕ್ಷಿ ಶಿಂಶಪ ಮೂಲದಲಿ ನೆಲ[1]ದಿ[1] ||
ಮಂಡಿಸಿದ್ದಳು ರಾಕ್ಷಸೀಯರ
ತಂಡಮಧ್ಯದಿ ದೀನೆಯತಿ ಕೃಶೆ
ಯಂಡಲೆವ ಮಲಿನಾಂಗಿ ನಿತ್ಯ ನಿರಾಶನವ ಮಾಡಿ || ೨೧ ||

ಏಕವೇಣಿಯ ನಯನ ಜಲದು
ದ್ರೇಕ ವದನದಲನವರತವೂ
ಶೋಕಿಸುತ್ತೆನುತಿಹಳು ಹಾ ರಘುನಾಥ ರಾಮೆನುತ ||
ಲೋಕವಂದ್ಯೆಯ ಕಂಡು ನಾ ಬಳಿ
ಕಾಕೆಯನು ಸಂತವಿಸಲೆಂದತಿ
ಸೂಕ್ಷ್ಮರೂಪದಿ ವೃಕ್ಷಶಾಖೆಯಲಡಗಿ ನಾ ನುಡಿದೆ || ೨೨ ||

---

1 ಸಿ (ಕ)

ವಾನರರಿಂದ ಮಧುವನ ಪ್ರವೇಶ



ರಾಮನಿಗೆ ಚೂಡಾರತ್ನ ಪ್ರದಾನ



ಮೊದಲಯೋಧ್ಯಾ ಜನನ ತೊಡಗಿ
ದ್ದದರಿನಿಂ ವನವಾಸವಲ್ಲಿಂ
ತುದಿಗೆ ರಾವಣನೊಯ್ದುದೇ ಕಡೆಯಾಗಿ ವಿವರಿಸುತ ||
ವಿದಿತದಿಂ ಸುಗ್ರೀವ ಸಖ್ಯದ
ಹದನ ಬಾಲಿಯ ಹರಣ ಕಪಿಪಡೆ
ಯೊದವಿಯರಸುತ ತಾನು ಕಂಡುದ ಸಹಿತ ವರ್ಣಿಸಿದೆ || ೨೩ ||

ತಾನು ಸುಗ್ರೀವನ ಸಚಿವನೀ
ದಾನವರ ಮಧ್ಯದಲಿ ಕಂಡೆನು
ಜಾನಕಿಯ ರಾಘವನ ಭೃತ್ಯನು ತನ್ನ ಯತ್ನವಿದು ||
ಸಾನುರಾಗದಿ ಸಫಲವಾಯ್ತೆನ
ಲಾ ನುಡಿಯ ಕೇಳುತ್ತ ಕಣ್ಣೊಡ
ದೇನೆನುತ್ತಿ ವಿಸ್ಮಯಂ ವಡುತೆಂದಳಾ ಸೀತೆ || ೨೪ ||

ಆರು ಕರ್ಣಾಮೃತವನೊರೆದರು
ನಾರಿಗೆನಗಾರುಳ್ಳ ರಕ್ಷಿಗೆ
ಸೇರಲೆನೆ ನಾನಿಳಿದು ನಿಂತೆನು ಸೂಕ್ಷ್ಮರೂಪದಲಿ ||
ದೂರಲಿದ್ದೇ ನಮಿಸಲೀಕ್ಷಿಸು
ತಾರಿವನು ದಾನವರ ಕೃತಕ ವಿ
ಕಾರಿಯಲ್ಲೆಲೆ ಯೆಂದು ಬಹು ಶಂಕೆಯನು ಮಾಡಿದಳು || ೨೫ ||

ತಾಯೆ ಶಂಕಿಸಬೇಡವೌ ರಘು
ರಾಮನಟ್ಟಿದ ಭೃತ್ಯ ನಾನಿಂ
ದಾಯತದಲೆಲ್ಲವನು ಹೇಳಿದು ಬಳಿಕ ನೀವಿತ್ತ ||
ದಾಯನುಂಗುರವಿತ್ತೆನದರಿಂ
ದಾಯಿತತಿ ವಿಶ್ವಾಸ ನನ್ನಲಿ
ಮಾಯೆಯಿಲ್ಲದೆ ಬಳಿಕ ಮಾತಾಡಿದಳು ಹರುಷದಲಿ || ೨೬ ||

ಹನುಮ ಕಂಡೈ ತನ್ನ ಸಂಕಟ
ದನುವನೀ ರಾಕ್ಷಸಿಯರೆನ್ನುವ
ನನವರತ ತಾಡನದ ತರ್ಜನ ಬಾಧೆಗೊಳಿಸುವದ ||
ಅನುಪಮ ಶ್ರೀ ರಾಮಗೆನ್ನೈಲ
ಯೆನಲದೆಂದೆನು ದೇವಿ ಮರೆವನೆ
ಘನ ಮಹಿಮ ಪರಮಾತ್ಮ ನಿಮ್ಮವನೆಂದೆ ನಾನೆಂದೆ || ೨೭ ||

ನಿಮ್ಮ ನೆನನೆನೆಡಳುತ ಹಗಲಿರು
ಳೊಮ್ಮೆಯೂ ನಿಜವಾರ್ತೆಯಿಂದವೆ
ರಮ್ಮ ಕರಗುವ ನಾನು ಹೋಗಿಯು ಹೇಳಲೀ ಸ್ಥಿತಿಯು ||
ಘಮ್ಮನೈತಹೆ [1]ರಾಮ[1]ನಂಜದಿ
ರಮ್ಮ ಸುಗ್ರೀವಾಂಕ ಲಕ್ಷ್ಮಣ
ರಿಮ್ಮಹಾ ಪಡೆಸಹಿತ ವಾರ್ತೆಯು ಕೇಳಿದಾಕ್ಷಣಕೆ || ೨೮ ||

ಕೊಂದು ಕುಲಸಹ ರಾವಣನ ನಿ
ಮ್ಮಂದಣವನೇರಿಸಿ ಪುರಕ್ಕಾ
ನಂದದಿಂ ಕರೆದೊಯ್ವ ರಾಘವ ನಾನು ಕಂಡುದಕೆ ||
ಪ್ರೊಂದು ಕರುಹನು ಕೊಟ್ಟು ಕಳುಹೆನ
ಲಿಂದುಮುಖಿ ನಿಜ ಶಿರದ ವೇಣಿಯು
ಲಂದವಡೆದುತ್ತಮದ ಚೂಡಾಮಣಿಯ ನೀಡಿದಳು || ೨೯ ||

ಚಿತ್ರಕೂಟದಿ ನೀವಿರಲು ದು
ರ್ವೃತ್ತ ಕಾಕನ ಕಣ್ಣ ಕೊಂಡಾ
ವೃತ್ತವೆಂದಳು ಕಂಗಳುದಕದಿ ತೀವಿ ನಿಮ್ಮಡಿಗೆ ||
ವೃತ್ತಿ ಕ್ಷೇಮವ ಬಿನ್ನವಿಸಿ ಸೌ
ಮಿತ್ರಿಗಾನಾಡಿದ ದುರುಕ್ತಿಯ
ಚಿತ್ತದಲಿ ತರಬೇಡ ಮರೆವುದೆನುತ್ತ ಹೇಳಿದಳು || ೩೦ ||

---

1 ಅಮ್ಮ (ಖ)

ಆವ ಪರಿಯಲಿ ರಾಮ ಕೊಂದೀ
ರಾವಣನ ತಮ್ಮನನು ಪುರಕೊ
ಯ್ಯಾ ವಿಧವ ಮಾಡೆಂದು ದುಃಖವಲೋಳಿ ಘೋಳಿಡಲು ||
ನಾ ವಿಧದ ಪರಿ ತಿಳುಹಿ ಬಳಿಕಾ
ದೇವಿಯನು ಬೀಳ್ಕೊಂಡು ದೂತರಿ
ಗಾವ ನೀತಿಯೆನುತ್ತ ಕಾಲೋಚಿತವ ಮಾಡಿದೆನು || ೩೧ ||

ಬರುತಶೋಕಾವನದಲುಳ್ಳಾ
ತರುಗಳೆಲ್ಲವ ಮುರಿದೆ ರಾಕ್ಷಸ
ನೆರವಿಯನು ಸದೆಬಡಿದೆ ದೈತ್ಯಕುಮಾರನಕ್ಷನೆನು ||
ತಿರವ ಮುರಿದೆನು ಬಳಿಕ ರಾವಣ
ದುರುಳನನು ನುಡಿಸಿದನು ಲಂಕಾ
ಪುರವನೆಲ್ಲವ ಸುಟ್ಟು ಬಂದೆನು ನಿಮ್ಮ ಕರುಣದಲಿ || ೩೨ ||

ಚಿತ್ತ ಸಾಕ್ಷಿಕ ನೀನೆದಾಗಿರ
ಲಿತ್ತಣದು ಸ್ವಾತಂತ್ರ ಹಾಹೆಗ
ಳೆತ್ತಲತ್ತಲು ಸುಳಿದಡೂ ಸೂತ್ರಿಕನೆನುಳಿದುಂಟೆ ||
ಸತ್ವರಜತಮ ಬೀಜವನು ನೀ
ಬಿತ್ತಿಯಾಪರಿ ಬೆಳಿಸಿ ತಂದದ
ಮತ್ತೆ ಮಾಯೆಯೆನಿಪ್ಪ ಕಳಶದಿ ತುಂಬಿ ಮಡುಗುತಿಹೆ || ೩೩ ||

ಲೋಕವಿದು ನಿನ್ನೊಂದು ಮಾಯಾ
ಸ್ವೀಕರಣದಿಂದಹುದಿಹುದು ಮಗು
ಳಾಕರಿಸುವುದು ತದ್ವಿಕೃತಿ ಕರ್ಮಗಳು ನಿನ್ನವನು ||
ಸೋಕನದಲಾಸಕ್ತಿಯಿಲ್ಲದ
ಜೋಕೆಯಿಂದವೆ ಮಾಡಿ ಮಾಡದ
ನೇಕವಿಧ ತತ್ಸಾಕ್ಷಿಭಾವಾತೀತ ನೀನೆಂದೆ || ೩೪ ||

ನಿನಗೆ ಮಾಯಾ ಪ್ರಕೃತಿ ಲೇಪಿಸ
ದೆನಿಪುದಕೆ ಸಂಶಯುವೆ ನಿನ್ನನು
ನೆನೆವ ಭಕುತರ ಭಕುತರಿಗೆ ಸಹಿತಿಲ್ಲ ಭಯವೆನಲು ||
ಘನ ಮಹಿತ್ವವದಾರು ಬಲ್ಲರು
ಮನುಜವೇಶಚ್ಛನ್ನ ರೂಪದ
ಲನುಪಮಿತ ಲೀಲೆಯಲಿ ವರ್ತಿಸುವೀ ವಿಡಂಬಧು[1] ವ[1] || ೩೫ ||

ನೀನೆಜನು ನಿಜವಯವ ಸತ್ಯ
ಜ್ಞಾನಮಯನವ್ವಯ ನಿರಂಜನ
ಭಾನುಕೋಟಿಪ್ರಭನು ಮಾಯಿ ನಿರೀಹನಪ್ರತಿಮಾ ||
ಸ್ವಾನುಭವ ಸಂವೇದ್ಯರಾದ ಮ
ಹಾನುಭಾವರಿಗರಿಯದನುಪಮ
ನೇನ ಹೊದ್ದದಖಂಡ ಸಚ್ಚಿತ್ಪೂರ್ಣ ನೀನೆಂದ || ೩೬ ||

ಯೋಗಿಗಳು ಯೋಗದಲಿ ಯಾಜ್ಞಿಕ
ಭಾಗಿಗಳು ಯಜ್ಞದಲಿ ಸಾಂಖ್ಯ ವಿ
ರಾಗಿಗಳು ಪೂರ್ಣತೆಯಲಮಳ ಬ್ರಹ್ಮನಿಷ್ಠಿತರು ||
ಸಾಗಿಸುವರೀ ನಿನ್ನ ಪದವಿಯ
ನಾಗಿಸುವ ಭಕುತಿಯನು ಭಕುತರ
ಗಾಗದುತ್ತಮ ಸಿದ್ಧಿ ಯಾವುದು ಭಾವಿಸುವಡೆಂದ || ೩೭ ||

ಮರೆದು ನಿನ್ನಯ ನಾಮವನು ಬಾ
ಯ್ದೆರೆಯಲುಚ್ಚರಿಸಿದಡೆ ನರರಿಗೆ
ಹರಿವುದಗ್ರದ ಜನ್ಮಕೋಟಿಯು ಬಂಧನಂಗಳೆನೆ ||
ನೆರೆ ತನಗೆ ನಿನ್ನಂಘ್ರಿಯುಗಳದ
ನೆರಗು ಸೋಂಕಿತದಾವ ಧನ್ಯನೊ
ಮರೆವರಾರ್ಕೈ ರಾಮಭಕ್ತಹಿತಾರ್ಥ ವಿಗ್ರಹ[2] ನ[2] || ೩೮ ||

1 ದ (ಖ) 2 ವ (ಕ)

ನಿನ್ನ ನಿಜ ಹಸ್ತಾಂ[1]ಗುಲೀಯದ[1]
ರನ್ನ ಮುದ್ರಿಯ ಧರಿಸಿ ತಾನು ಮ
ಹಾರ್ಣವವನುತ್ತರಿಸಿ ಸೀತೆಯ ಕಂಡು ನಿಮ್ಮಡಿಯ ||
ಸನ್ನಿಧಿಗೆ ತಾ ಬಂದವರಿನಿಂ
ಧನ್ಯನಾದೆನು ತಡೆಯದೆಲೆ ಕರು
ಣಾರ್ಣವನೆ ಜನಕಜೆಯ ಸೆರೆಯನು ಬಿಡಿಸಬೇಕೆಂದ || ೩೯ ||

ಎಂದುದೆಲ್ಲವ ಕೇಳಿ ಹರ್ಷದ
ಲೆಂದನಾ ಶ್ರೀರಾಮನಹುದೈ
ಕಂದ ಮಾಡಿದೆ ಸಹಸವನು ದಿವಿಜರಿಗು ದುಷ್ಕರವ ||
ಯಿಂದು ನೀ ಮಾಡಿರ್ದುದುಪಕೃತಿ
ಗೊಂದು ಪ್ರತ್ಯುಪಕಾರಗಾಣೆನು
ಸಂದೆಹವೆ ಜನಜನಿತ ತಾನದನಾಡಲೇಕೆಂದ || ೪೦ ||

ತನ್ನ ಸರ್ವಸ್ವಂಗಳೆಲ್ಲವ
ನಿನ್ನದಾಗಿಯೆ ಕೊಟ್ಟೆನೆನುತವೆ
ಸನ್ನುತಪ್ರಿಯ ಬಂಧು ಪ್ರೇಮಾಲಿಂಗನದಲೊಲಿದು ||
ಯೆನ್ನಸುವೆ ಬಾಯೆನುತ ನಯನ ಸು
ಪೂರ್ಣ ಪುಳಕಾಶ್ರುಗಳಲಪ್ಪಿದ
ಲುನ್ನತೋನ್ನತ ಮಹಿಮನಾ ತನ್ನೆರಡು ಕರಗಳಲಿ || ೪೧ ||

ಗಿರಿಜೆ ಕೇಳೀ ರಾಮನಂಗ
ಸ್ಪರುಶವತಿ ದುರ್ಲಭವಲಾ ತ
ತ್ಕರಯುಗಳ ಸಂಸ್ಪರ್ಶನದ ಪುಣ್ಯೋದಯದ ಸಿದ್ಧಿ ||
ಮರುತಜನು ತನ್ನಾತ್ಮ ಭಕ್ತರೊ
ಳುರುತರ ಪ್ರಿಯತಮನದರಿಂ
ದೊರಕಿದುದು ಮಿಕ್ಕಮರರಿಗೆ ಸೇರುವುದೆ ಹೇಳೆಂದ || ೪೨ ||

1 ಗದಲಿಯದ (ಕ)

ಆವನಂಘ್ರಿಯ ಭಕ್ತಿಯಿಂದವೆ
ಪಾವನದ ತುಳಸೀದಳದಲೊಲಿ
ದಾವನರ್ಚಿಪನವನು ವೈಷ್ಣವ ಪದವ ಪಡೆವೆನೆನೆ ||
ಆ ವಸಿಷ್ಠ ಮುಕುಂದನೇ ತಾ
ಪಾವಮಾನಿಯ ಭಕ್ತಿಗೊಲಿದಿರ
ಲಾವಕೃತ ಸಂಪೂರ್ಣ ಪುಣ್ಯನು ಯೆಂದನೀಶ್ವರನು || ೪೩ ||

ಯೆಕ್ಕತಾಳದ ಸಂಧಿ ಪದಗಳ
ಲೆಕ್ಕವಾರೇಳಿಲ್ಲಿ ಸಂದುದು
ತಕ್ಕ ಸುಂದರಕಾಂಡ ರಾಮಚರಿತ್ರ ಸುಪವಿತ್ರ ||
ಲಕ್ಷ್ಮಣದಿ [1]ಕೇಳಿ[1] ದಡೆ [2]ಹೇಳಿ[2]ದ
ಡಕ್ಕರಿಂ ಸಲಹುವನು ಸಜ್ಜನ
ಪಕ್ಷಗುರು ನಿತ್ಯಾತ್ಮ ಲಕ್ಷ್ಮಿನೃಸಿಂಹನನವರತ || ೪೪ ||

ಅಂತು ಸಂಧಿ ೪೧ ಕ್ಕೆ ಪದ ೧೪೯೧ ಕ್ಕೆ

ಮಂಗಳ ಮಹಾ ಶ್ರೀ ಶ್ರೀ ಶ್ರೀ

---

1 ಹೇಳಿ (ಖ) ಕೇಳಿ (ಖ)

## ಸುಂದರಕಾಂಡ ಸಮಾಪ್ತವು



ಸ್ವಸ್ತಿ ಪ್ರಜಾಭ್ಯಃ ಪರಿಪಾಲಯನ್ತಾಂ
ನ್ಯಾಯ್ಯೇನ ಮಾರ್ಗೇಣ ಮಹೀಂ ಮಹೀಶಾಃ ।
ಗೋಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ
ಲೋಕಾಃ ಸಮಸ್ತಾಃ ಸುಖಿನೋ ಭವಂತು ॥ ೧ ॥

ಕಾಲೇ ವರ್ಷತು ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ।
ದೇಶೋಽಯಂ ಕ್ಷೋಭರಹಿತಃ ಸಜ್ಜನಾಃ ಸಂತು ನಿರ್ಭಯಾಃ ॥೨॥

ಅಪುತ್ರಾಃ ಪುತ್ರಿಣಃ ಸನ್ತು ಪುತ್ರಿಣಃ ಸನ್ತು ಪೌತ್ರಿಣಃ ।
ಅಧನಾಃ ಸಧನಾ ಸನ್ತು ಜೀವನ್ತು ಶರದಾಂ ಶತಮ್ ॥ ೩ ॥

ಕಾಯೇನ ವಾಚಾ ಮನಸೇಂದ್ರಿಯೈರ್ವಾ
ಬುದ್ಧ್ಯಾತ್ಮನಾ ವಾ ಪ್ರಕೃತೇಃ ಸ್ವಭಾವಾತ್ ।
ಕರೋಮಿ ಯದ್ಯತ್ ಸಕಲಂ ಪರಸ್ಮೈ
ನಾರಾಯಣಾಯೇತಿ ಸಮರ್ಪಯಾಮಿ ॥ ೪ ॥

ಯದಕ್ಷರ ಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ನಾರಾಯಣ ನಮೋಽಸ್ತು ತೇ ॥ ೫ ॥



# ಪರಿಶಿಷ್ಟಗಳು

## ಪದ್ಯಗಳ ಅಕಾರಾದಿ ಸೂಚಿ

### ಅರಣ್ಯಕಾಂಡ



## ಕಿಷ್ಕಿಂಧಾ ಕಾಂಡ

# ಶಬ್ದಾರ್ಥಗಳು

## ಅರಣ್ಯಕಾಂಡ

ಅರ್ಚಿಸು - ಪೂಜಿಸು

ಅಜ - ಬ್ರಹ್ಮ

ಅರ್ಥ - ಪ್ರೀತಿ

ಅನ್ನುದಿನ - ಪ್ರತಿದಿನ

ಅಭೀಷ್ಟ - ಮನೋಭಿಲಾಷೆ

ಅರಳು -- ಹೂವು

ಅಸಿ -- ಖಡ್ಗ

ಆನರ್ವ — ಯುದ್ಧ

ಆಹವ — ಯುದ್ಧ

ಇರುಳು -- ರಾತ್ರಿ

ಉಚ್ಚ್ರವ -- ದೊಡ್ಡ ಧ್ವನಿ

ಉತ್ತರಿಸು -- ದಾಟು, ಕಳೆ

ಉರ -- ಎದೆ

ಕದಕು -- ಕೆಟ್ಟದ್ದು

ಕದಕುಜನ -- ದುಷ್ಟ ವ್ಯಕ್ತಿ

ಪಂಚಕ

ಕಪರ್ದಿ — ಈಶ್ವರ

ಕಮ್ಮಗಣೆಯ — ಮನ್ಮಥ

ಕಾಕುತನ — ಕೀಳು ನಡತೆ

ಕಾಪಟಿಗ -- ಕಪಟಿ, ಠಕ್ಕ

ಕಾಲಗಟ್ಟು -- ನಾಶಮಾಡು ಕೊಲ್ಲು

ಕಾಲನೂರು -- ಯಮಾಲಯ

ಕಾಷ್ಠ -- ಕಟ್ಟಿಗೆ

ಕಾಹುಕ -- ಚಂಚಲ ಮನಸ್ಸು

ಕುಕ್ಷಿ - ಹೊಟ್ಟೆ

ಕೂಬರ -- ರಥದ ಈಸು

ಕೌಶಿಕೆ - ಪಾನಪಾತ್ರೆ

ಕಂತು - ಮನ್ಮಥ

ಕಂದರ್ಪ - ಮನ್ಮಥ

ಕಂಬು - ಶಂಖ

ಕಾಂತ - ಗಂಡ, ಪತಿ

ಖಗ -- ಪಕ್ಷಿ

ಖರ್ವಿಸು -- ತುಳಿ

ಖೋಡಿಪೋಗು - ಮೋಸಹೋಗು

ಗನ್ನಗತಕ — ಮೋಸಗಾರಿಕೆ

ಗ್ರೀವ -- ಕಂಠ, ಕುತ್ತಿಗೆ

ಘಳಿಲನೆ - ಬೇಗನೆ

ಘೋರಾರಣ್ಯ - ಭಯಂಕರ ಅಡವಿ

ಚಪ್ಪಾಳಿಸು - ಹೆಚ್ಚಾಗು

ಚಳಕ - ಚಪಲತೆ

ಚಿಬುಕ -- ಗದ್ದ, ಗಲ್ಲ, ಕಪೋಲ

ಚೋದಿಗ -- ಸೋಜಿಗ

ಚಿಂತಿಸು — ವಿಚಾರಮಾಡು

ಛವಿ — ಕಾಂತಿ

ಜಗದೀಶ -- ಒಡೆಯ

ಜೋತ್ತಿಸು -- ಸೇರಿಸು

ಡಗೆ -- ಸೆಕೆ, ಉಷ್ಣತೆ

ಡಿಂಬ - ಮೈ, ಶರೀರ

ತತಿ -- ಸಮೂಹ

ತನು - ಶರೀರ

ತಳುವು -- ತಡಮಾಡು

ತಾಡಣ - ಏಟು, ಹೊಡೆತ

ತಬ್ಬು -- ಬಿಲ್ಲಿನ ತುದಿ
ತೊಡು-ಆಹಾರ ತಿನ್ನುವ ಅಭಿಲಾಷೆ
ತೊತ್ತು -- ಸೇವಕಿ
ತಿಂಥಿಣಿ -- ಸಮೂಹ
ದುರ್ವಾರ್ತೆ -- ಕೆಟ್ಟ ಸುದ್ದಿ
ದೇವರ-ಗಂಡನ (ಸಹೋದರ) ತಮ್ಮ
ದಂದುಗ -- ಕಷ್ಟ ಕೋಟಲೆ
ದಿಂಡುದರಿ -- ನಾಶವಮಾಡು
ದೌಂಷ್ಟ್ರ -- ದಾಡೆ
ನನ್ನಿ -- ಸತ್ಯ
ನಾವೆ -- ದೋಣಿ
ನಿಕಟ -- ಸಮೂಹ
ನಿಧಾನಿಸು -- ಸಾವಕಾಶ ಮಾಡು
ನಿವಹ -- ಸಮೂಹ
ಪಥ -- ದಾರಿ
ಪಾದಪ -- ಮರ, ವೃಕ್ಷ
ಪುಷ್ಕರಿಣಿ -- ಸರೋವರ
ಪಂಟಿಸು - ಸುತ್ತುವರಿ, ಎದುರಿಸು
ಬನ್ನಬಡು -- ಕಷ್ಟಪಡು
ಬಿನುಗು - ಕ್ಷುದ್ರ, ಹೀನ
ಬೇಳು -- ಹೋಮಿಸು
ಭಯ -- ಹೆದರಿಕೆ
ಭಾಳ -- ಹಣೆ
ಮತಿ -- ಬುದ್ಧಿ ಮನಸು
ಮಿಥ್ಯ -- ಸುಳ್ಳು

ಮಿಹಿರ -- ಸೂರ್ಯ
ಮುಕ್ಕು -- ತಿನ್ನು
ಮುಸುಡು -- ಮುಖ, ಮೋರೆ
ರಜನಿ -- ರಾತ್ರಿ
ಲಾಗು- ಚಳಕ, ಕೌಶಲ್ಯ
ವಲ್ಲಭ -- ಗಂಡ
ವಿಪಿನ -- ಅಡವಿ
ವಿಭು -- ಒಡೆಯ
ವಿವಸ್ವಂತ -- ಸೂರ್ಯ
ವಿಷ್ಟರ -- ಆಸನ
ವಿಸರ -- ಗುಂಪು, ಸಮೂಹ
ವುಲುಹು -- ಧ್ವನಿ, ಸಪ್ಪಳ
ವೇದಗರ್ಭ -- ಬ್ರಹ್ಮ
ಶರಹತಿ -- ಬಾಣದ ಪೆಟ್ಟು
ಶಾಟಿ - ಉತ್ತರೀಯ, ಹೆಗಲವಸ್ತ್ರ
ಶೃಂಗ -- ಕೋಡು
ಸವರು -- ನಾಶಗೊಳಿಸು
ಸುಜಾಪಕ - ಚೆನ್ನಾಗಿ ಜಪಿಸುವನು
ಸ್ವೇದ -- ಬೆವರು
ಸಿಂಗಿ -- ಸಿಂಹಿಣಿ
ಹಮ್ಮು -- ಅಹಂಕಾರ
ಹೆರ -- ಹೊರಬದಿ
ಹೇಮ -- ಬಂಗಾರ
ಹೈಮವತಿ -- ಪಾರ್ವತಿ

## ಕಿಷ್ಕಿಂಧಾಕಾಂಡ

ಅಕ್ಷ್ವಡ — ಅಖಾಡ
ಅಗ್ರ — ತುದಿ
ಅಪೂಪ — ವಡೆ, ತಿಂಡಿ
ಅಬ್ಜಭವ — ಬ್ರಹ್ಮ
ಅಬುಧಿ — ಅಬ್ಧಿ, ಸಮುದ್ರ
ಅಮೇಧ್ಯ — ಹೊಲಸು
ಅಕೆವಾಳ — ಶೂರ, ವೀರ
ಆಗಮಿಕ -- ಮುಂದೆ ಬರತಕ್ಕ
ಆತಪ — ಬಿಸಿಲು
ಆಹವ — ಯುದ್ಧ
ಇಡ್ಡಲಿಗೆ — ಇಡ್ಲಿ
ಉದಕ — ನೀರು
ಉರ್ವಿ — ಭೂಮಿ
ಉರ್ವಿಸುತೆ — ಭೂಮಿಜೆ. ಸೀತೆ
ಒಗುಮಿಗೆ — ಆಧಿಕ್ಯ. ಹೆಚ್ಚಳ
ಅಂಬು — ಬಾಣ
ಕಟಕ — ಸಮೂಹ
ಕಲ್ಮಷ — ದೋಷ
ಕಲ್ಹಾರ — ನೈದಿಲೆ
ಕಲೂಷ — ಕಲ್ಮಷ
ಕಾರಂಡ — ನೀರು ಹಕ್ಕಿ
ಕುಜನ — ಕೆಟ್ಟಜನ
ಕೇಣ -- ಚಿಂತನೆ
ಗುಹದ -- ಗುಹೆ
ಗುಹ್ಯ -- ಮುಚ್ಚಿಡಬೇಕಾದ
ಘಾತಿಸು - ನಾಶಮಾಡು
ಘೂರ್ಮಿಸು--ಗರ್ಜಿಸು, ಅಬ್ಬರಿಸು
ಚಕ್ರವಾಕ — ಬಿಸಿಲು ಹಕ್ಕಿ
ಚೋಹು ಮೋಸದ ವೇಷ
ಜರೆ -- ಮುಪ್ಪು
ಜಲ್ಪ — ಮಾತು, ನುಡಿ
ಜವನಿಕೆ — ತೆರೆ, ಪರದೆ
ಜಾವುಳ -- ಚಂಚಲಿತೆ, ಚಾಪಲ್ಯ
ಜಾಹು — ನಡತೆ ತಪ್ಪು
ಡಗೆ — ಭಯ ಅಂಜಿಕೆ
ಡಿಂಡೀರ — ನೊರೆ, ಬುರುಗು
ಢಗೆ — ಧಗೆ, ಉರಿ, ಉಷ್ಣತೆ
ತಟ – ದಂಡೆ
ತಾಮ್ರಾಕ್ಷ — ಕೆಂಗಣ್ಣು
ತೊಪ್ಪಲು — ಸಪ್ಪು. ಎಲೆ
ದುರ್ವಿನೀತ — ದುಷ್ಟ
ದ್ರೋಣ — ದೋಣಿಆಕಾರದ ತೊಟ್ಟಿ
ದಂದುಗ — ಕಷ್ಟ
ನಕ್ರ — ಮೊಸಳೆ
ಪಟುಮಾಡು — ಹುರಿದುಂಬಿಸು
ಪ್ಲವಹಾವ್ರಾತ — ವಾನರರ ಸಮೂಹ
ಪಾರ್ಷದ -- ಸೇವಕ
ಪೂತಿ -- ದುರ್ಗಂಧ
ಪೇಶ -- ಮಾಂಸದ ಮುದ್ದೆ
ಪಂಕಜ -- ಕಮಲ

ಬದ್ದಿಸು – ಜೋಡಿಸು
ಬೀಕಲು -- ಬಾಡಿದುದು
ಬುಧ -- ಪಂಡಿತ, ಸಜ್ಜನ
ಬೇಳು -- ಹೋಮಿಸು
ಭಾಸ — ಹೊಳಪು, ಕಾಂತಿ
ಮಜಡ — ದಡ್ಡ, ತಿಳಿಗೇಡಿ
ಮರುಷ -- ಕಠೋರ
ಮೃತ್ತಿಕೆ — ಮಣ್ಣು
ಮೇಖಲೆ–ಸೊಂಟಪಟ್ಟಿ, ಉಡ್ಯಾಣ
ಮೇಡು -- ಜನನೇಂದ್ರಿಯ
ಲಡ್ಡು -- ಲಾಡು
ಲಾಗು -- ಚಳಕ, ಕೌಶಲ
ಲಂಬಿಸು – ಜೋತಾಡು, ನೇತಾಡು
ವಾತ -- ಗಾಳಿ
ವಿಶ್ವವಲ್ಲಭ – ಜಗತ್ತಿಗೆ ಒಡೆಯ
ವಿಶ್ರುತ -- ಪ್ರಸಿದ್ಧನಾದ
ಷಂಡ — ಗುಂಪು, ಸಮೂಹ
ಸಟೆ -- ಸುಳ್ಳು
ಸತ್ತಿಗೆ -- ಕೊಡೆ, ಛತ್ರಿ
ಸ್ನಪನ -- ಅಭಿಷೇಕ
ಸಮ್ಮಾರ್ಜನ -- ಗುಡಿಸುವದು ಶುದ್ಧಿ ಮಾಡುವದು
ಸೋನೆ--ಜಿನುಗು ಮಳೆ, ಜಿನುಗು
ಸಂಕ್ಲೇಶ — ತೊಂದರೆ
ಸ್ಯಂದನ — ರಥ
ಸಿಂಧು -- ಸಮುದ್ರ
ಹಳಚು-ಪ್ರತಿಭಟಿಸು ಯುದ್ಧಮಾಡು
ಹಳವಿಸು -- ದುಃಖಪಡು
ಹೀಹಾಳಿ -- ನಿಂದೆ ತೆಗಳಿಕೆ
ಹೇವ — ಹಗೆ, ಮತ್ಸರ

## ಸುಂದರಕಾಂಡ

ಅನವರತ — ಯಾವಾಗಲೂ
ಅನಿಲ -- ಗಾಳಿ
ಅಭಿಜ್ಞ -- ಚೆನ್ನಾಗಿ ತಿಳಿದ
ಉಪ್ಪರಿಸು–ಮೇಲಕ್ಕೆ ನೆಗೆ, ಹಾರು
ಓತು — ಸಾಲಾಗಿರಿಸು
ಅಂಕ – ತೊಡೆ
ಕಂದಣ – ರಥ
ಅಂಬರ – ಆಕಾಶ
ಕವಲು -- ಬದಲಾವಣೆ
ಕಾಕು -- ಕೆಟ್ಟ
ಕಾಷ್ಠ -- ಕಟ್ಟಿಗೆ
ಕುಕ್ಷಿ -- ಹೊಟ್ಟೆ
ಕುಟ್ಮಳ -- ಅರೆಬಿರಿದ ಮೊಗ್ಗೆ
ಕಿಂಚಿತ -- ಸ್ವಲ್ಪ
ಗಬ್ಬರಿಸು – ಆಗೆ ತೋಡು
ಗಾವಿಲ – ಗ್ರಾಮಸ್ಥ, ಹೆಡ್ಡ
ಜಾಯೆ – ಹೆಂಡತಿ
ತಮಾಲ – ಹೊಂಗೆಮರ
ತಳುವದೆ – ತಡಮಾಡದ
ತಾಮ್ರಾಕ್ಷಿ – ಕೆಂಗಣ್ಣು
ತೆಂಪುಗಾಣದೆ -- ನಿವಾರಿಸಲಾಗದೆ
ತೊತ್ತು -- ಸೇವಕಿ, ದಾಸಿ.

ತೆಂಕ -- ದಕ್ಷಿಣ
ತೊಂಡ -- ಆಳು, ಸೇವಕ
ದಿಂಡುಗೆಡಹು -- ಬಿದ್ದು ಹೊರಳು
ನಕ್ರ -- ಮೊಸಳೆ
ನಗ -- ಮರ, ವೃಕ್ಷ, ಪರ್ವತ
ಪರುಷ -- ಕಠೋರ
ಪರಿಭವ -- ತಿರಸ್ಕಾರ, ಅನಾದರ
ಪಲ್ಲವ — ಚಿಗುರು
ಪೀಯೂಷ – ಹಾಲು, ಅಮೃತ
ಪೋ೯ – ಪ್ರಾಣಿಯ ಮರಿ
ಒನುಗು — ಕ್ಷುದ್ರ, ಅಲ್ಪವಾದ
ಬೂತುಮಾಡು – ವಂಚಿಸುಮೋಸಮಾಡು
ಬೆಸನ -- ಕಾರ್ಯ
ಮುದ್ಗರ -- ಆಯುಧ
ಮೆದೆಗೆಡಹು -- ರಾಶಿ ಹಾಕು
ರುಜು -- ನೇರ
ವದನ -- ಮೋರೆ, ಬಾಯಿ
ವಪು -- ದೇಹ, ಶರೀರ
ಶತಯೋಜನ – ನೂರು ಯೋಜನ
ಸೌಭಗ -- ಮಂಗಳಮಯ
ಹಣುಗಿ – ಹಣುಕು, ಅಡಗು
ಹಾಹೆ -- ಗೊಂಬೆ, ಪುತ್ಥಳಿ
ಹೂಹೆ -- ಹಸುಳೆ, ಎಳೆಮಗು

## ಶುದ್ಧಿ ಪತ್ರಿಕೆ

| ಪುಟ | ಪದ್ಯ | ಸಾಲು | ಅಶುದ್ಧ | ಶುದ್ಧ |
|---|---|---|---|---|
| ೯ | ೩೧ | ೧ | ಸಮುಸುರ | ಸಮುಸುಕ |
| ೪೬ | ೪೨ | ೧ | ಬೆಳಕು | ಬೆಳಗು |
| ೫೩ | ೭ | ೧ | ಏನ | ಏನು |
| ೫೩ | ೯ | ೦ | ಹೊರೆಯಲ್ಲ | ಹೊರೆಯಿಲ್ಲ |
| ೭೧ | ೨೯ | ೧ | ಎಂದ | ಎಂದು |
| ೯೫ | ೧೨ | ೧ | ಬರಲು ತನ್ನೊ | ಒರಲು ತನ್ನೊ |
| ೧೩೧ | ೨೩ | ೧ | ಸತಂಗಿ | ಸುತರಿಗಿ |
| ೨೦೪ | ೪೮ | ೧ | ಅವ | ಆವ |
| ೨೧೦ | ೧೧ | ೧ | ಆಜನು | ಆಜನು |
| ೨೪೪ | ೪೫ | ೧ | ಬಾರದೆಂದಾ | ಬಾರನೆಂದಾ |
| ೨೫೧ | ೧೪ | ೧ | ಚಾಳೆ | ಬಾಲೆ |
| ೨೫೮ | ೪೨ | ೧ | ಮಾಳ್ಪುದ | ಮಾಳ್ಪುದ |
| ೨೫೯ | ೪೩ | ೧ | ಎಂದನುತ್ತಿರಲತಿ | ಎಂದೆನುತ್ತತಿ |
| ೨೫೯ | ೪೫ | ೧ | ನಿಪೆ | ಸೀವೆ |





ಶ್ರೀಯುತ ನಾರಾಯಣ ಕುಪ್ಪಯ್ಯ ಹೆಗಡೆ, ಇವರು ಉತ್ತರ ಕನ್ನಡ ಜಿಲ್ಲೆಯ ಕುಮಟಾ ತಾಲೂಕಿನ ಹೆಗಡೆ ಗ್ರಾಮದವರು. ಇವರ ಜನನ ೧೯೩೩ ರಲ್ಲಿ. ಇವರು ಬಿ. ಎಸ್. ಸಿ. [ಓನರ್ಸ], ಬಿ. ಎಡ್. ಪದವಿಯನ್ನು ಪಡೆದು ಶಿಕ್ಷಕರಾಗಿ ಸೇವೆ ಸಲ್ಲಿಸುತ್ತಿರುವಾಗಲೇ ಕನ್ನಡದಲ್ಲಿ ಎಂ. ಎ. ಉಪಾಧಿಯನ್ನು ಪಡೆದರು. ಹಿಂದೀ ಭಾಷೆಯನ್ನೂ ಚೆನ್ನಾಗಿ ಅಭ್ಯಸಿಸಿ ಉಪಾಧಿಯನ್ನು ಪಡೆದವರು. ಸದ್ಯ ನಿವೃತ್ತಿ ಹೊಂದಿ ಈಗ ಹೆಗಡೆಯಲ್ಲಿ ಇದ್ದಾರೆ. ಕನ್ನಡದ ಪ್ರಾಚೀನ ಹಸ್ತಪ್ರತಿಗಳನ್ನು ಸಂಗ್ರಹಿಸುವ ದೊಂದು ಇವರ ಹವ್ಯಾಸ ಹೊಸ ಹಸ್ತಪ್ರತಿಗಳು ದೊರಕಿದಾಗ ಅವುಗಳನ್ನು ಒಳ್ಳೆ ರೀತಿಯಿಂದ ಸಂಪಾದನೆ ಮಾಡಿ ಪ್ರಕಟಿಸಬೇಕೆಂಬ ಹುಮ್ಮಸ್ಸು ಇವರಿಗೆ ತುಂಬಾ ಇದೆ. ಕೈಕೊಂಡ ಕಾರ್ಯವನ್ನು ಕೊನೆಗೊಳಿಸುವ ದೃಢ ನಿಷ್ಠೆಯೂ ಇವರಲ್ಲಿದೆ ಈಗ "ಕನ್ನಡ ಕರಾವಳಿ ಗ್ರಂಥಪ್ರಕಾಶನ ಹೆಗಡೆ" ಎಂಬ ಹೆಸರಿನಿಂದ ಪುಸ್ತಕಗಳನ್ನು ಪ್ರಕಟಿಸುವ ಕಾರ್ಯದಲ್ಲಿ ನಿರತರಾಗಿದ್ದಾರೆ.